# ಶಾಂತಿಪರ್ವ

ಆನಂದಕಂದ

ಕರ್ನಾಟಕ ಸಾಹಿತ್ಯಮಂದಿರ,
ಧಾರವಾಡ.

# ಮುನ್ಮಾತು

ಇದೊಂದು ವಿಜಯನಗರದ ಚರಿತ್ರೆಗೆ ಸಂಬಂಧಪಟ್ಟ ಕಾದಂಬರಿಯು. ಈ ಮೊದಲೆ ಬರೆದು ಪ್ರಕಟಿಸಲಾಗಿದ್ದ ‘ ರಾಜಯೋಗಿ ’ ಎಂಬ ಕಾದಂಬರಿಯಂತೆ, ಇದಕ್ಕೂ ‘ ಫರನಾವೋ ನುನೀಝು ’ ಎಂಬ–ಆ ಕಾಲದ–ಪೋರ್ತುಗೀಝ್ ಪ್ರವಾಸಿಯ ವರದಿಯೇ ‘ ವಸ್ತು ’ವನ್ನು ಒದಗಿಸಿಕೊಟ್ಟಿದೆ. ‘ ರಾಜಯೋಗಿ ’ ಕಾದಂಬರಿಯನ್ನು ಓದಿದವರಿಗೆ, ಅದರಲ್ಲಿಯ ಕಥೆಯೇ ಇಲ್ಲಿ ಮುಂದುವರಿದಿದೆಯೆಂದು ಎನಿಸುವುದು ಸಹಜ. ಅದನ್ನು ಓದದೆ ಇರುವರಿಗೆ, ಇದೊಂದು ಸ್ವತಂತ್ರವಾದ ಕಥಾನಕ; ‘ರಾಜಯೋಗಿ’ಯನ್ನು ಓದದೆ ಇರುವುದರ ಕೊರತೆ ಯಾವಬಗೆಯಿಂದಲೂ–ಎನಿಸಲಾರದವರಿಗೆ.

‘ ರಾಜಯೋಗಿ ’ಯೆ ಆಗಲಿ; ಈ ‘ ಅಶಾಂತಿಪರ್ವ ’ವೇ ಆಗಲಿ!.. ಇವುಗಳಲ್ಲಿ ’ ‘ ಐತಿಹಾಸಿಕ ಕಾದಂಬರಿ ’ ಎನಿಸಿಕೊಳ್ಳುವುವುಗಳಲ್ಲಿ ಅಪೇಕ್ಷಿಸಬಹುದಾದ ಅದ್ಭುತ–ಆಶ್ಚರ್ಯಜನಕ ಸನ್ನಿವೇಶಗಳು ಇಲ್ಲವೆಂತಲೆ ಹೇಳಬಹುದು. ಈ ಕಾದಂಬರಿಗಳು, ಅಂದಿನಕಾಲದ ಜನರ ನಡೆ–ನುಡಿ, ಸ್ವಭಾವ–ಸಂಸ್ಕೃತಿಗಳನ್ನು ಚಿತ್ರಿಸಿ, ನಡೆದಿದ್ದ ಐತಿಹಾಸಿಕಘಟನೆಗಳಿಗೆ ಅವು ಹೇಗೆ ಹೇಗೆ ಕಾರಣಗಳಾಗಿ ಪರಿಣಮಿಸಿದುವೆಂಬುದನ್ನು ಹೇಳಲಿಕ್ಕೆ ಹೊರಟುವುಗಳು. ಎಂತಲೆ ಈಬಗೆಯ ಕಾದಂಬರಿಗಳಲ್ಲಿ ಮಾನವ-ಸ್ವಭಾವದ ವಿವಿಧ ಮಾದರಿ-ಗಳನ್ನು ನೋಡಿ ಬೆರಗುವಡಬೇಕು; ಚಿತ್ರ–ವಿಚಿತ್ರ ಘಟನೆಗಳನ್ನು ನೋಡಿ ಅಲ್ಲ!

ಈ ಕಾದಂಬರಿಯಲ್ಲಿಯ ಪಾತ್ರಗಳಲ್ಲಿ..‘ ರಾಜಶೇಖರ ’ ‘ ಪೆದ್ದರಾಯ ’ ‘ಸಾಳುವ ನರಸಿಂಹ ’ ‘ ತುಳುವ ನರಸಿಂಹ ’.. ಇವರು, ಇತಿಹಾಸವನ್ನು ಓದಿ-ದವರಿಗೆ ಪರಿಚಿತರು; ಉಳಿದವರು ಅಪರಿಚಿತರು. ಆದರೆ.. ಕಥಾನಕದ ಕಾಲದ ಕಡೆಗೆ ಕಣ್ಣಿದ್ದವರಿಗೆ, ಈ ಉಳಿದ ಪಾತ್ರಗಳಲ್ಲಿಯ ಗುಣ-ಸ್ವಭಾವಗಳು ಅಂದಿನ ಜನಸಮಾಜದಲ್ಲಿ ಕಾಣಬಹುದಾದುವುಗಳೇ ಎಂದೆನಿಸದಿರದೆಂದು ನನ್ನ ನಂಬುಗೆ.

ನನಗೆ–ಯಾವಾಗಲೂ– ‘ ಬರೆ! ಬರೆ! ’ ಎಂದು ಬೆನ್ನುಹತ್ತುವವರು ಬೇಕು. ನನ್ನ ಸ್ನೇಹಿತರಾದ ಶ್ರೀ. ಟ. ಡಿ. ಶಿವಲಿಂಗಯ್ಯನವರು ಆ ಕೆಲಸವನ್ನು ಮಾಡಿ, ಈ ಕಾದಂಬರಿಯನ್ನು ಬರೆಯಿಸಿದರು; ಇಷ್ಟೇ ಅಲ್ಲ! ಇದನ್ನು ಅಂದ-ವಾಗಿ ಪ್ರಕಟಿಸುವ ಹೊಣೆಯನ್ನೂ ತಾವೆ ಹೊತ್ತರು. ಇದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಸಾಧನಕೇರಿ, ಧಾರವಾಡ
ತಾ. ೨೦ ನವೆಂಬರ್ ೧೯೩೫ ಇಸ್ವಿ
ಬುಧವಾರ

ಆನಂದಕಂದ

# ಪ್ರಕಾಶಕರ ಮಾತು

ನಮ್ಮ ಕನ್ನಡ ಸಾಹಿತ್ಯಭಾಂಡಾರವನ್ನು ತುಂಬು-ತುಂಬಿದುದನ್ನಾಗಿ ಮಾಡಬೇಕಾಗಿದ್ದ ಮಹಾಕಾರ್ಯದಲ್ಲಿ, ನಾವೂ ಪಾಲುಗಾರರಾಗ-ಬೇಕೆಂದು ಆಂತರ್ಯದ ಆಶೆ. ಈ ಆಶೆಯ ಮೂಲಕವಾಗಿಯೆ ನಾವು-ಆಗಾಗ-ಕನ್ನಡನಾಡಿನ ಒಳ್ಳೆಯೊಳ್ಳೆಯ ಬರೆಹಗಾರರ ಗ್ರಂಥಗಳನ್ನು– ನಮ್ಮ '**ಸಾಹಿತ್ಯಮಂದಿರ**' ದಿಂದ– ಪ್ರಕಟಿಸುತ್ತಲಿರುವೆವು. ಮಾಡಬೇಕೆಂದು ಮನದಲ್ಲಿದ್ದುದರ ಮಾನದಿಂದ ನೋಡಿದರೆ, ಈಗ ಮಾಡಲಾಗಿದ್ದ ನಮ್ಮ ಕಾರ್ಯವು ತೀರ ಕಡಮೆಯೆಂದು ಹೇಳಬಹುದು. ಕಾಲನ ಅನುಕೂಲತೆ, ಕನ್ನಡ ಮಹಾಜನರ ಕೈನೆರವು ನಮಗೆ ದೊರೆತಲ್ಲಿ, ಮನಸ್ಸಿನಲ್ಲಿದ್ದುದನ್ನೆಲ್ಲ ಮಾಡಿತೋರಿಸುವೆವೆಂಬ ಭರವಸೆಯಿದೆ–ನಮಗೆ.

'**ಕಾಮನ ಬಿಲ್ಲು**' ಎಂಬ ಕಥಾಸಂಗ್ರಹವನ್ನು ಪ್ರಕಟಿಸಿಯಾದ ಬಳಿಕ, ನಮ್ಮಿಂದ ಇನ್ನು . . ಅದಕ್ಕಿಂತಲೂ ಒಳ್ಳೆಯ ಕೃತಿಯು ಪ್ರಕಟ-ವಾಗಬೇಕೆಂಬ ಎಣಿಕೆಯಲ್ಲಿ ಇದ್ದೆವು. ಈ ಎಣಿಕೆಯಲ್ಲಿಯೆ ಎರಡುವರ್ಷದ ಕಾಲ ಕಳೆದುಹೋಯಿತು. ಕೊನೆಗೆ, ಈ '**ಅಶಾಂತಿಪರ್ವ**' ಎಂಬ ಕಲಾಪರಿಪೂರ್ಣವಾದ ಸುಂದರ ಕಾದಂಬರಿಯನ್ನು ಕನ್ನಡಿಗರ ಕೈಯಲ್ಲಿ ಸಮರ್ಪಿಸುವ ಸುಯೋಗವು ಒದಗಿ, ನಮ್ಮ ಕಳೆದ ಕಾಲದ ನಷ್ಟವು ಇಮ್ಮಡಿಯಾಗಿ ತುಂಬಿ ಬಂದಂತಾಯಿತು. ನಮ್ಮ ಪ್ರಕಟನೆಗೆ ಇಂತಹ ಒಳ್ಳೆಯ ಗ್ರಂಥವನ್ನು ಒದಗಿಸಿಕೊಟ್ಟುದಕ್ಕಾಗಿ ಶ್ರೀ. '**ಆನಂದಕಂದ**'ರಿಗೆ ನಮ್ಮ ಅನಂತವಾದ ಅಭಿನಂದನೆಗಳು.

ಇದಕ್ಕೆ ಮುಂದಿನ ಪ್ರಕಟನೆಯು–ಕನ್ನಡಲೋಕಕ್ಕೆ ಚಿರಪರಿಚಿತ-ರಾದ–**ಪಂಡಿತ ತಾರಾನಾಥರಾಯರ** ಅಮೂಲ್ಯವಾದ ಗ್ರಂಥವೊಂದೆಂಬುದನ್ನು ಹೇಳಲು ನಮಗೆ ತುಂಬ ಆನಂದವೆನಿಸುತ್ತಿದೆ.

ಈ ಗ್ರಂಥವನ್ನು ಸ್ವಲ್ಪ ವೇಳೆಯಲ್ಲಿಯೆ ಸುಂದರವಾಗಿ ಮುದ್ರಿಸಿಕೊಟ್ಟ ಕರ್ನಾಟಕ ಪ್ರಿಂಟಿಂಗ್ ವರ್ಕ್ಸಿನ ಮಾಲಕರಿಗೆ ನಮ್ಮ ಅಭಿನಂದನೆಗಳು.

ಕರ್ನಾಟಕ ಸಾಹಿತ್ಯಮಂದಿರ,
ಧಾರವಾಡ. ತಾ|| ೨೫–೧೧–೩೫

ಪ್ರಕಾಶಕರು

# ಅಶಾಂತಿಪರ್ವ

## ೧ನೆಯ ಪರಿಚ್ಛೇದ

" ನಾನು ಮರಳಿಬರುವುದರಲ್ಲಿಯೆ ಎಂತಹ ವಿಪ್ಲವ ನಡೆದುಹೋಗಿದೆ ಕಮಲಾ ! "

" ಇಲ್ಲಿಯೆ ಇದ್ದು ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡಬೇಕಾಗಿದ್ದಿತು ! ನೋಡು ರತ್ನಾ, ಒಳ್ಳೆಯ ಕಾಲ ಬರುವುದಿದ್ದರೆ ಎಲ್ಲ ಮಾತೂ ಎಷ್ಟೊಂದು ಅನುಕೂಲವಾಗಿ ಬರುವುವು.... ಅಲ್ಲವೇ ?

"ನಿಜವಾಗಿಯೂ ನಾನು ದೈವಗೇಡಿಯೆಂದೇ ಹೇಳಬೇಕು; ಯಾವುದೆ ಇರಲಿ ! ಸಾಹಸದ ಸಂದರ್ಭವನ್ನು ಪ್ರತ್ಯಕ್ಷವಾಗಿ ನೋಡಿ, ಅದರ ಸುಖ ದುಃಖದ ಪರಿಣಾಮವನ್ನು ಅನುಭವಿಸಬೇಕೆಂದು ನನಗೆ ಹುಟ್ಟುಬಯಕೆ. ಎಂತಹ ಸಂಧಿಯನ್ನು ಕಳೆದುಕೊಂಡುಬಿಟ್ಟೆ ನಾನು ! ಕಾರಣವೇನೂ ಇಲ್ಲದೆಯೆ ಪೆನುಗೊಂಡೆಗೆ ಹೊರಟುಹೋದೆ. "

" ಕಾರಣವೇಕೆ ಇರಲಿಲ್ಲವೆನ್ನುತ್ತೀಯೆ ? ಕಾರಣವಿದ್ದಿತೆಂತಲೆ ನಿನಗೆ ವಿಜಯನಗರ ಬೇಡವಾಯಿತು; ಅದಕ್ಕಾಗಿಯೆ ಹೊರಟುಹೋದೆ !"

" ಅದೇನಮ್ಮಾ ಮತ್ತೆ... ? ನನಗೆ ಗೊತ್ತಿಲ್ಲದ ಕಾರಣವನ್ನು ನೀನು ಕಂಡುಹಿಡಿದಿದ್ದೀಯೆ ?"

" ಬೇರೆ ಕಾರಣ ಇನ್ನೇನು ಇರಬೇಕು ! ಸಿಂಗಮ್ಮ ನನಗೆಲ್ಲ ಹೇಳಿದ್ದಾಳೆ. ಪೆದ್ದರಾಯರು ನಗರಬಿಟ್ಟು ಹೋದರು; ನಿನಗೆ ಈ ತುಂಬಿದ್ದ ವಿಜಯನಗರ ಹಾಳುಬೀಳಾಗಿ ಹೋಯಿತು; ಎಂತಲೇ ಇಲ್ಲಿ ಇರುವುದಕ್ಕೇ ಬೇಡವಾಯಿತು. ಅಹುದೋ ಅಲ್ಲವೋ ? ನೀನೇ ಹೇಳಿ ಬಿಡು ! "

ಅಣಕದ ಮೆಲುನಗೆಯೊಂದಿಗೆ ರತ್ನಾಂಬಿಕೆಯು ನಗೆಯಾಡಿದಳು.

“ ಸರಿ! ಸರಿ! ನಿನ್ನ ಅನುಭವವನ್ನು ಇನ್ನೊಬ್ಬರ ಮೇಲೆ ಆರೋಪಿಸಿ ಹೇಳುತ್ತೀಯೇನು ರತ್ನಾ ? ”

ನಾಚಿಕೆಯು ಚೆಂಬಣ್ಣದ ಮುಖವನ್ನು ಕೆಳಕ್ಕೆ ತಗ್ಗಿಸಿ ಕಮಲಾಂಬಿಕೆ ಹೇಳಿದಳು.

“ ನನ್ನದೇನು ಅನುಭವ ! ಇದ್ದ ಮಾತನ್ನು ಇದ್ದಂತೆ ಹೇಳಿದೆ. ”

“ ಅಹುದಹುದು ! ನಿನ್ನ ಮನಸ್ಸಿನಲ್ಲಿದ್ದುದನ್ನು ನನ್ನ ಮನಸ್ಸಿನಲ್ಲಿ ಇದ್ದಂತೆ ಹೇಳಿದೆ... ಇಷ್ಟೇ! ಚಿಂತೆ ಬೇಡ ಕಮಲಾ! ಕರ್ಣಾಟಕಸಾಮ್ರಾಜ್ಯ ದಂತೆಯೆ ಕಮಲಾಂಬಿಕೆಯನ್ನೂ ಒಳ್ಳೆಯ ಕಾಲ ಸಮೀಪಿಸುತ್ತಿದೆ. ”

“ ರತ್ನಾಂಬಿಕೆಯಿಂದಲೂ ಅದೇನು ದೂರಕ್ಕೆ ನಿಂತುಕೊಳ್ಳದಲ್ಲವೇ?”

“ ಹಾಗೆಯೂ ಹೇಳಬಹುದು ಬೇಕಾಗಿದ್ದರೆ ! ”

ಮಾತಿನ ಕೊನೆಯೊಡನೆಯೆ ಮಿಂಚಿನ ಚಪಲತೆಯುಳ್ಳ ರತ್ನಾಂಬಿಕೆಯ ಕಣ್ಣುಗಳು, ಕಮಲಾಂಬಿಕೆಯ ಮೊಗದಲ್ಲಿ ನೆಲೆನಿಂತುವು. ಆದರೆ ಆ ನೆಟ್ಟ ದಿಟ್ಟಿಗಳ ಹೊರನೋಟ ಶೂನ್ಯವಾಗಿ, ಒಳಗೊಳಗೆಯೆ ಅವು ಪೆದ್ದರಾಯನನ್ನು ತಂದು ಮುಂದೆ ನಿಲ್ಲಿಸಿಕೊಂಡುವು; ಆತನ ಅಂಗಾಂಗಗಳನ್ನು ನಿಟ್ಟಿಸಿ ನಿಟ್ಟಿಸಿ ನೋಡಲು ತೊಡಗಿದುವು. ಕಮಲಾಂಬಿಕೆಯ ಸಹಜವಾದ ಸ್ಥಿರ ದೃಷ್ಟಿಗಳೂ ಅಂತಃಪಟದಲ್ಲಿಯ ಯಾವುದೊ ಅದೃಶ್ಯಚಿತ್ರವನ್ನು ನಿರೀಕ್ಷಿಸು ವುದರಲ್ಲಿದ್ದುವು. ಅವರಿಬ್ಬರಿಗೂ ಬೇಕಾದಷ್ಟು ಮಾತನಾಡಬೇಕಾಗಿದ್ದಿತು; ಆದರೆ ಸದ್ಯಕ್ಕೇನೋ ಇಬ್ಬರೂ ಮೌನಿಗಳಾಗಿಯೆ ಕುಳಿತುಬಿಟ್ಟಿದ್ದರು.

ಶಾಲಿವಾಹನ ಶಕದ ೧೪೫೯ನೆಯ ವರುಷದ ಪೌಷ್ಯಮಾಸವು ತನ್ನ ಲ್ಲಿಯ ಹನ್ನೆರಡು ದಿನಗಳನ್ನು ಇಷ್ಟರಲ್ಲಿಯೆ ಹೋಗಲಾಡಿಸಿಕೊಂಡಿದೆ. ಲೋಕಕ್ಕೆ ಕಣ್ಣಾಗಿದ್ದ ಸೂರ್ಯನು ಸಂಕ್ರಮಣಾವಸ್ಥೆಯಲ್ಲಿದ್ದಂತೆಯೆ, ಕನ್ನಡಿಗರಿಗೆ ಕಣ್ಣಾಗಿದ್ದ ವಿಜಯನಗರದ ಸಾಮ್ರಾಜ್ಯಸಿಂಹಾಸನವೂ ಒಂದು ಬಗೆಯ ಸಂಕ್ರಮಣಾವಸ್ಥೆಯಲ್ಲಿದೆ. ಕನ್ನಡ ಪ್ರಜಾಕೋಟಿಗೆ ಬೇಡಬೇಡ ವೆನಿಸಿದ್ದ—ಕರ್ಣಾಟಕ ರಾಜ್ಯಲಕ್ಷ್ಮಿಗೆ ಅಯೋಗ್ಯವರನಾಗಿದ್ದ – ಇಮ್ಮಡಿ ವಿರೂಪಾಕ್ಷನ ಕೊಲೆಯಾದುದರಿಂದ, ಸಾಮ್ರಾಜ್ಯಸಿಂಹಾಸನವು ಇದು ವರೆಗೆ ಶೂನ್ಯಸಿಂಹಾಸನವಾಗಿಯೆ ಉಳಿದುಕೊಂಡಿದೆ. ಕೊಲೆಗೊಂಡ ವಿರೂಪಾಕ್ಷರಾಯನ ಉತ್ತರಕರ್ಮಗಳ ವಿಧಿವಿಧಾನಗಳು– ವಿಜಯನಗರದ

ಸಮ್ರಾಟನ ಸ್ಥಾನಮಾನಕ್ಕೆ ತಕ್ಕಂತೆ – ವಿಜೃಂಭಣೆಯಿಂದ ಮುಗಿದು ಎರಡು ದಿನಗಳ ಅವಧಿಮಾತ್ರ ಕಳೆದುಹೋಗಿದೆ.

ಸಾಮ್ರಾಜ್ಯಸಿಂಹಾಸನಕ್ಕೆ ಅಧಿಕಾರಿಗಳಾಗಿದ್ದವರಲ್ಲಿ ತೀರ ಬಳಿಯವರೆಂದರೆ ಮಲ್ಲಿಕಾರ್ಜುನರಾಯನ ಮಕ್ಕಳಾದ ರಾಜಶೇಖರ, ಪೆದ್ದರಾಯ ಇಬ್ಬರೆ ಇಬ್ಬರು. ಅವರಲ್ಲಿಯೂ ರಾಜಶೇಖರನು ವಯಸ್ಸಿನಿಂದ ಹಿರಿಯನಾದುದರಿಂದ, ಸಿಂಹಾಸನಾಧಿಕಾರ ಅವನ ಕಡೆಗೆ ಸಹಜವಾಗಿ ಬಂದುಬಿಡುತ್ತಿದ್ದಿತು; ವಿಜಯನಗರದ ಜನತೆಗೂ ಇವನ ಆಳಿಕೆ ಬೇಕಾಗಿದ್ದಿತು; ಆದರೆ ತನ್ನದೊಂದು ಗುರಿಯನ್ನು ಸಾಧಿಸುತ್ತಿರುವಾಗ, ಬೇರೆ ವಿಷಯಗಳ ಜಂಜಡವು ಬೇಡವೆಂದೋ ಇನ್ನಾವ ಕಾರಣಗಳ ಮೂಲಕವೋ !.. ರಾಜಶೇಖರನು ಆ ಅಧಿಕಾರವನ್ನು ಖಂಡಿತವಾಗಿ ನಿರಾಕರಿಸುತ್ತಿದ್ದನು. ಎಂತಲೆ ಆ ಸಿಂಹಾಸನಾಧಿಕಾರ ಪೆದ್ದರಾಯನ ಕಡೆಗೆ ತನ್ನ ಆಶೆಯ ನೋಟಗಳನ್ನು ಹೊರಳಿಸಿ ನಿಂತಿದ್ದಿತು.

ಆಡಳಿತದ ಅಂತಸ್ಥವಿಚಾರವಾವುದೂ ಗೊತ್ತಿಲ್ಲದ ಪ್ರಜಾಜನರು– ಮುಂದೆ ಬರುವುದೆಂದು ನಂಬಿದ್ದ– ರಾಜಶೇಖರನ ಆಳಿಕೆಯ ಸ್ವರ್ಗಸೌಖ್ಯದ ಕನಸುಗಳನ್ನು ಹಗಲಲ್ಲಿಯೂ ಇರುಳಲ್ಲಿಯೂ ಈಗ ಕಾಣುವುದರಲ್ಲಿದ್ದಾರೆ. ಸಾಮ್ರಾಜ್ಯದ ಹೊಣೆಗಾರರಾದ ಅಧಿಕಾರಿಗಳಲ್ಲಿ ಕೆಲವರು – ತಮ್ಮ ಮನಸ್ಸಿನ ಮಾನದಂಡದಿಂದ ರಾಜಶೇಖರನನ್ನಳೆದು – ಆತನ ಅಸಮ್ಮತಿಯಲ್ಲಿ ಅಷ್ಟೊಂದು ನಂಬುಗೆಯನ್ನಿಡದೆ – ಬರಲಿರುವ ದೊರೆಯ ಬಗೆಗೆ ಯಾವ ನಿರ್ಣಯವನ್ನೂ ಕಾಣದೆ ಕುತೂಹಲಿಗಳಾಗಿ ಕುಳಿತಿದ್ದಾರೆ. ರಾಜಶೇಖರನ ಒಂದೆ ಹಿಡಿತದ ಸ್ವಭಾವವನ್ನು ಅರಿತ ಅಧಿಕಾರಿಗಳು ಮಾತ್ರ – ಆತನ ಅಸಮ್ಮತಿಯನ್ನು ಕೇಳಿ ನಿರಾಶೆ ಅಸಮಾಧಾನಗಳನ್ನು ತಳೆದಿದ್ದರೂ, ಪೆದ್ದರಾಯನ ಎದೆಯಕೆಚ್ಚನ್ನೂ ಸಾಮ್ರಾಜ್ಯಪ್ರೇಮವನ್ನೂ ನಂಬಿ, ಹೊಸ ಆಶೆ, ಹೊಸ ಉತ್ಸಾಹಗಳನ್ನು ಹೊಂದುವುದರಲ್ಲಿದ್ದಾರೆ.

ಸಾಮ್ರಾಜ್ಯಜೀವನದಲ್ಲಿಯೆ ಆಗಲಿ, ಸಮಾಜಜೀವನದಲ್ಲಿಯೆ ಆಗಲಿ, ನಡೆದಿರುವ ತಿರುವುಮುರುವುಗಳು, ಆ ರಾಜ್ಯದ– ಆ ಸಮಾಜದ ಸತ್ತಿಗೆಯ ಅಡಿಯಲ್ಲಿಯೆ ಬದುಕಿ ಬಾಳುತ್ತಿರುವ ವ್ಯಕ್ತಿಜೀವನದ ಕಣ್ಣಿಗೆ ಒಮ್ಮೆಲೆ ಒಡೆದು ಕಾಣದು. ಎಂತಲೆ ಅನೇಕ ಜನರು ತಮ್ಮ ತಮ್ಮ ವೈಯಕ್ತಿಕ–

ಆದರ್ಶ, ವೈಯಕ್ತಿಕ ಸುಖದುಃಖ ವೈಯಕ್ತಿಕ ರಾಗದ್ವೇಷ ಇವುಗಳಲ್ಲಿ ಮಾತ್ರ ಕಣ್ಣಿಟ್ಟು ನಡೆದಿರುವರು. ಸಾಮ್ರಾಜ್ಯ– ಸಮಾಜಗಳ ಜೀವನ ಪ್ರವಾಹದಲ್ಲಿ ಬಿದ್ದು, ತೇಲುತ್ತ ತೇಲುತ್ತ ತಾವು ಯಾವುಯಾವುವೋ ನಿಟ್ಟುಗಳನ್ನು ಹಿಡಿದು ನಡೆದಿರುವೆವೆಂಬುದರ ಎಚ್ಚರವಿರುವವರು ಲಕ್ಷ ಕ್ಕೊಬ್ಬರೋ ಕೋಟಿಗೊಬ್ಬರೋ !

ಸಾಳುವ ನರಸಿಂಹನಾಯಕನ ವಿಚಾರದ ಸಾವಿರಾರು ಕಣ್ಣುಗಳು, ವಿಜಯನಗರದ ಶುಭಭವಿಷ್ಯದಲ್ಲಿ ನಿರಂತರ ನೆಟ್ಟು ನಿಂತಿರುತ್ತಿದ್ದುವು; ಆದರೆ ಆತನ ಮಗಳು ಕಮಲಾಂಬಿಕೆ ಹತ್ತೊಂಬತ್ತು ವರ್ಷದ ವಯಸ್ಸಿನವಳಾಗಿ ದ್ದರೂ, ಆಕೆಯ ಮನಸ್ಸಿನೆದುರು ಇದಾವ ವಿಷಯವೂ ಮಹತ್ವದುದೆಂದು ಎಂದೂ ಬಂದು ನಿಲ್ಲುತ್ತಿರಲಿಲ್ಲ. ಎಂತಲೇ ಅವಳ ಮುಖದಲ್ಲಿ, ನಿಶ್ಚಿಂತತೆಯ ಮುಗ್ಧಹಾಸ್ಯ ಯಾವಾಗಲೂ ನಲಿದಾಡುತ್ತಿರುವುದು. ಇಂದು – ರತ್ನಾಂ ಬಿಕೆ ಪೆನುಗೊಂಡೆಯಿಂದ ಬಂದಿದ್ದಾಳೆಂಬ ವರ್ತಮಾನ ತಿಳಿಯುತ್ತಲೆ– ಏನೆಲ್ಲವನ್ನೂ ಬಿಟ್ಟು, ಅವಳನ್ನು ಕಂಡು ಮಾತನಾಡಿಸಿ ಹೋಗಬೇಕೆಂಬ ಆತುರದಿಂದ – ರತ್ನಾಂಬಿಕೆಯ ಮನೆಗೆ ಬಂದುಬಿಟ್ಟಿದ್ದಳು.

ರತ್ನಾಂಬಿಕೆಯು ವಿಜಯನಗರದ ಮುಖ್ಯ ದಳಪತಿ – ದೇವಣ್ಣನಾಯ ಕರ ಎರಡನೆಯ ಮಗಳು. ಇದ್ದರೆ ಕಮಲಾಂಬಿಕೆಗಿಂತ ಒಂದೆರಡು ವರ್ಷಕ್ಕೆ ಮಾತ್ರ ಅವಳು ಹಿರಿಯಳಾಗಿರಬಹುದು. ರತ್ನಾಂಬಿಕೆಯ ತಾಯಿ ಚಂದ್ರ- ಗಿರಿಯಲ್ಲಿದ್ದ ತುಳುವ ಮನೆತನಕ್ಕೆ ಸೇರಿದವಳು. ಚಿಕ್ಕತನದಲ್ಲಿಯೇ ತಾಯಿ ಯನ್ನು ಕಳೆದುಕೊಂಡಿದ್ದ ಕಮಲಾಂಬಿಕೆಯು ಅದೇ ಮನೆತನಕ್ಕೆ ಕೊಟ್ಟಿದ್ದ ತನ್ನ ಸೋದರತ್ತೆಯ ಪರಿಪೋಷಣೆಯಲ್ಲಿ ಬೆಳೆದು ದೊಡ್ಡವಳಾದವಳು ! ಎಂತಲೆ ಕಮಲಾಂಬಿಕೆ ರತ್ನಾಂಬಿಕೆಯರಲ್ಲಿ ಎಂದಿನಿಂದಲೂ ಕೂಡಿ ಆಡಿದ್ದ ಕೆಳೆತನ ಬೆಳೆದು ಬಂದಿದ್ದಿತು. ಕಮಲಾಂಬಿಕೆಯು ಚಂದ್ರಗಿರಿಯಿಂದ ವಿಜಯನಗರಕ್ಕೆ ಬಂದ ಮೇಲೆ, ಈ ಮೊದಲಿನ ಕೆಳೆಯೆ ಅವರಿಬ್ಬರನ್ನೂ ಆಗಾಗ ಕೂಡಿಸುತ್ತಿದ್ದಿತು.

ನಳನಳಿಸುವ ಮಲ್ಲಿಗೆಯ ಬಳ್ಳಿ, ಚಿಗುರೆಲೆಗಳಿಂದ ತುಂಬಿನಿಂತಿದ್ದ ಗುಲಾಬಿಯಕಂಟಿ ಎರಡೂ ಒಂದೆ ಮಡಿಯಲ್ಲಿ ಜೊತೆಗೊಂಡು ಬೆಳೆದಿದ್ದರೇ ನಾಯಿತು ! ಮಲ್ಲಿಗೆಯರಳಿನ ಚೆಲುವು – ಮೆಲುಗಂಪುಗಳ ಸೊಬಗೇ

ಅದೊಂದು ಬಗೆ; ಅರಳಿದ ಗುಲಾಬಿಯ ಗಾಡಿ – ಬಲುಗಂಪುಗಳ ಬೆಡಗೇ ಅದೊಂದು ಬಗೆ. ಮಾಲೆಗಾತಿ ಎರಡನ್ನೂ ಜೊತೆಗಿರಿಸಿ ಮಾಲೆಕಟ್ಟಿದರೆ ಅವು ಕೂಡಿಕೊಂಡು ಇರಲಾರವೇನು ? ಕೂಡಿಕೊಂಡೇನೋ ಇರಬಹುದು ! ಎರಡೂ ತಮ್ಮ ವ್ಯಕ್ತಿತ್ವವನ್ನು ಮಾತ್ರ ಎಂದೂ ಕಳೆದುಕೊಳ್ಳಲಾರವು. ಕಮಲಾಂಬಿಕೆ ರತ್ನಾಂಬಿಕೆಯರ ಜೊತೆಯ ರೀತಿ ಹೀಗೆಯೆ ! ಪರಿಸ್ಥಿತಿಯ ಮಾಲೆಗಾತಿ ಪೂರ್ವಪರಿಚಯದ ದಾರದಲ್ಲಿ ಈ ಕಮಲರತ್ನಗಳೆರಡನ್ನೂ ಆಗಾಗ ಕೂಡಿಸಿ ಸಮೆಯುತ್ತಿರುವಳು.

ಕಮಲಾಂಬಿಕೆ ರತ್ನಾಂಬಿಕೆಯಲ್ಲಿಗೆ ಬಂದಾಗ, ಹಗಲು ಮೂರುವರೆ ಪ್ರಹರಕ್ಕೆ ಬಂದಿದ್ದಿತು. ಅವರಿಬ್ಬರೂ ಅಂತಃಪುರದ ಉಪ್ಪರಿಗೆಯ ಒಂದು ಭಾಗದಲ್ಲಿ– ಹಾಸಿದ್ದ ರತ್ನಗಂಬಳಿಯೊಂದರ ಮೇಲೆ– ಹತ್ತಿರ ಹತ್ತಿರದಲ್ಲಿಯೆ ಕುಳಿತು ಮಾತನಾಡುತ್ತಿದ್ದರು. ಅವರ ಈ ಮೊದಲಿನ ಸಂಭಾಷಣದ ನಡುವೆ ಹಣೆಯಿಕ್ಕಿದ್ದ ಮೌನದ ಮೋಡವು, ಎರಡು ಮೂರು ನಿಮಿಷಗಳಿಗಿಂತ ಹೆಚ್ಚು ಕಾಲ ಉಳಿಯುವುದಕ್ಕೆ ಸಾಧ್ಯವಾಗಲಿಲ್ಲ. ಕಮಲಾಂಬಿಕೆಯ ಸಹಜವಾದ ಮುಗ್ಧಭಾವದ ಮಾತಿನ ಮೆಲುಗಾಳಿ ಅದನ್ನು ಚೆದರಿಸಿ ಬಿಟ್ಟಿತು. ಆಕೆ ಕೇಳಿದಳು ;

" ಒಂದೆ ಬಗೆಯ ಭಾವದ ಅನುಭವ, ಎಲ್ಲ ಜನರಿಗೂ ಒಂದೆಬಗೆಯದಾಗಿ ಕಾಣಬಹುದಲ್ಲವೇ ರತ್ನಾ ? "

" ಒಂದೆ ಮಾವಿನ ಹಣ್ಣಿನ ರುಚಿ, ಬೇರೆ ಬೇರೆಯವರಿಗೆ ಬೇರೆ ಬೇರೆ ಬಗೆಯದಾಗಿ ತೋರಬಹುದೇನು ? "

ದೊಡ್ಡದೊಂದು ಸಮಸ್ಯೆಯನ್ನು ಬಿಡಿಸಿದಂತಹ ಸಮಾಧಾನ, ಕಮಲಾಂಬಿಕೆಯ ಮುಖದಲ್ಲಿ ಮೂಡಿನಿಂತಿತು. ಸಮಾಧಾನದ ಭರದಲ್ಲಿಯೆ ಅವಳು – ಕಾರಣವಿಲ್ಲದೆಯೋ ಇದ್ದೋ ! – ಒಮ್ಮೆಲೆ ಮಾತನಾಡಿದಳು.

" ಮಕರಸಂಕ್ರಮಣಕ್ಕೆ ಇನ್ನು ಆರೇ ಆರು ದಿನಗಳಂತೆ ರತ್ನಾ! "

" ಸಂಕ್ರಮಣದ ಆವಶ್ಯಕತೆ, ಆತುರ, ನಿನಗೆ ಇರಬಹುದು ! ನನಗೇನಾಗಬೇಕಾಗಿದೆ ಅದರಿಂದ ? "

" ಇದೇನಮ್ಮಾ ನಿನ್ನ ಮಾತು ? "

ಅಣಕದ ನಗೆಯೊಂದಿಗೆ ರತ್ನಾಂಬಿಕೆ ನುಡಿದಳು.

" ಅಹುದು ! ಆಕಾಶದಲ್ಲಿಯು ಸೂರ್ಯ ಮಕರರಾಶಿಗೆ ಬರುತ್ತಿರುವಾಗ, ಭೂಮಿಯ ಮೇಲಿನ ಯಾವನಾದರೂ ಸೂರ್ಯ ಈ ಕನ್ಯಾರಾಶಿಗೆ ಬರಬಹುದು. "

ತನ್ನ ಕಡೆಗೆ ಕೈಮಾಡಿ ನುಡಿದುದನ್ನೂ ನುಡಿದ ಮಾತಿನ ಮರ್ಮವನ್ನೂ ಕಂಡುಕೊಂಡ ಕಮಲಾಂಬಿಕೆಯ ಮೊಗವು, ನಾಚಿಕೆಯಿಂದ ನೆಲವನ್ನು ನೋಡಲು ತೊಡಗಿತು. ರತ್ನಾಂಬಿಕೆಯು ಅವಳ ಬಾಗಿದ್ದ ಮುಖವನ್ನು ಮೇಲಕ್ಕೆತ್ತಿ ಕೇಳಿದಳು.

" ಅಹುದೇನೇ ಕಮಲಾ? ನಾನೆಂದುದು ನಿಜವೇನು? ನರಸನಾಯಕ ಬರಲಿದ್ದಾನೇನು? "

ಕಮಲಾಂಬಿಕೆಯನ್ನು ಅವಳ ನಾಚಿಕೆ ಮೂಗುವಡಿಸಿತು. ರತ್ನಾಂಬಿಕೆಯು ಆ ಮಾತಿಗಾಗಿ ಅವಳನ್ನು ಬಹಳ ಹೊತ್ತಿನವರೆಗೇನೂ ಆಟವಾಡಿಸಲಿಲ್ಲ ! ತಟ್ಟನೆ ಆಕೆ ಬೇರೆ ವಿಷಯವನ್ನೆತ್ತಿ ಕೇಳಿದಳು.

" ಕಮಲಾ ! ವಿರೂಪಾಕ್ಷರಾಯನ ಕೊಲೆ ಹೇಗಾಯಿತೆಂಬುದನ್ನು–ನಿನ್ನಿಂದ ಪೂರ್ತಿಯಾಗಿ–ಕೇಳಬೇಕೆಂದು ನನ್ನ ಆಶೆ. ಹೇಳುತ್ತೀಯಾ ಅದನ್ನು?"

" ಇಷ್ಟೊಂದು ವಿನಂತಿಯ ಧ್ವನಿಯೇತಕ್ಕೆ ಬೇಕದಕ್ಕೆ? ನಾನಾಗಿಯೇ ಅದನ್ನೆಲ್ಲ ನಿನಗೆ ಹೇಳಬೇಕೆಂದಿದ್ದೆ. ವಿರೂಪಾಕ್ಷರಾಯನ ವಿಚಿತ್ರವಾದ ಆಡಳಿತಕ್ಕಾಗಿ ಜನರೆಲ್ಲರೂ ಬೇಸತ್ತು ಬೆಜ್ಜರುಗೊಂಡು ಹೋದುದು ನಿನಗಂತೂ ಗೊತ್ತಿದ್ದ ಮಾತು? "

ರತ್ನಾಂಬಿಕೆಯು ಉರಿದುರಿದು ನುಡಿದಳು.

" ಎಲ್ಲವೂ ಗೊತ್ತಿದೆ ಕಮಲಾ ! ಆತನಿಂದ ಎಷ್ಟು ಜನರಿಗೆ ತೊಂದರೆಯಾಯಿತು ? ಎಷ್ಟು ಜನ ಗರತಿಯರು ಆತನ ದುರಾಶೆಯ ಬಾಯಿಗೆ ಬಲಿಯಾಗಬೇಕಾಯಿತು? ಎಷ್ಟೊಂದು ಜನ ದೀನಪ್ರಜೆಗಳು, ಆತನ ಅನ್ಯಾಯದ ಆಘಾತಕ್ಕೆ ಈಡಾಗಿ ದುಃಖದಿಂದ ಕೂಗಿಡಬೇಕಾಯಿತು ? ಇನ್ನು ಎಷ್ಟೊಂದು ಜನ ಸಾಮ್ರಾಜ್ಯಾಭಿಮಾನಿಗಳು ಅಪಮಾನದ ಕಿಚ್ಚನ್ನು ಸಹಿಸಿಕೊಂಡಿರಬೇಕಾಗಿ ಬಂದಿತು ? ಎಲ್ಲವೂ ಗೊತ್ತಿದೆ. ಪೆದ್ದರಾಯ ಕೊನೆಗೂ ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿದ; ಸಾಮ್ರಾಜ್ಯದ ಗಂಡಾಂತರವನ್ನು ಹೊಡೆದು ಹಾಕಿದ.

" ಇದರಲ್ಲಿ ಪೆದ್ದರಾಯನು ಏನು ಮಾಡಿದ್ದಾನೆಂದು ತಿಳಿದಿದ್ದೀಯೆ ನೀನು ? "

" ವಿರೂಪಾಕ್ಷರಾಯನ ಕೊಲೆಯನ್ನು ಮಾಡಿದವರು ಯಾರು? ಪೆದ್ದರಾಯನೆ ಅಲ್ಲವೇ ? "

" ಅಲ್ಲ ! ಅಲ್ಲ ! ಪೆದ್ದರಾಯನೆಂದು ಯಾರು ಹೇಳಿದರು ನಿನಗೆ? ಕೊಲೆ ಮಾಡಿದವನು ಅಣ್ಣಾಜಿ. . . . ರಾಜಶೇಖರ ! "

" ಏನು? ಆ ಹರಯದ ಮುದುಕ ಕೊಲೆಮಾಡಿದನೇ? ನಾನೆಂದೂ ಇದನ್ನು ಒಪ್ಪಿಕೊಳ್ಳಲಾರೆ! ಕಮಲಾ! ಎಲ್ಲರಂತೆಯೆ ನೀನೂ ರಾಜ ಶೇಖರನೆಂದು ತಪ್ಪು ಹೆಸರನ್ನೇ ಹೇಳುತ್ತಿದ್ದೀಯಲ್ಲಾ ? "

" ಆತನದಲ್ಲದೆ ಇನ್ನಾರದನ್ನು ಹೇಳಲಿ ? ಕೊಲೆಮಾಡಿದವನು ರಾಜಶೇಖರನೇ ಅಹುದು ! "

" ರಾಜಶೇಖರನ ಹೆಸರನ್ನು ಕೇಳಿದರೆ ನನಗೆ ನಗೆಬರುತ್ತದೆ. ನಂಬಿದ್ದ ನಚ್ಚಿದ್ದ ಹೆಣ್ಣೊಂದನ್ನೂ ತನ್ನದನ್ನಾಗಿ ಮಾಡಿಕೊಳ್ಳಲಿಕ್ಕೆ ಆ ಗಂಡುಸಿನಿಂದ ಆಗಲಿಲ್ಲ. ಆಕೆ ಇನ್ನೊಬ್ಬನ ಬಲುಮೆಗೆ ಒಳಗಾಗಿ ಆತನ ಕೈಹಿಡಿದು ಹೋದು ದನ್ನು ನೋಡಿಯೂ ಸುಮ್ಮಗೆ ನೋಡುತ್ತ ಕುಳಿತ ಆ ಕ್ಷತ್ರಿಯ ಕುಮಾರ! ಅಂತಹ ಚಲದಂಕ. . ವಿರೂಪಾಕ್ಷನ ಕೊಲೆಗೆ ಸಿದ್ಧನಾಗುತ್ತಾನೆಯೇ ? ಲೋಕಕ್ಕೆ ಹೊರತಾದ ಮಾತಿದು ? "

" ಅದೇನೋ ಅಮ್ಮಾ ! ನಡೆದ ವಿಷಯವಂತೂ ಹೀಗೆ ನಡೆದಿದೆ "

ಕೊಂಚಕಾಲ ಸುಮ್ಮಗೆ ಕುಳಿತಿದ್ದು, ಬಳಿಕ ಒಮ್ಮೆಲೆ ರತ್ನಾಂಬಿಕೆ ಯೆಂದಳು.

" ಸರಿ ! ಸಾಮ್ರಾಜ್ಯದ ಆಶೆ ನರಿಗೂ ಸಿಂಹದ ಶಕ್ತಿಯನ್ನು ಕೊಡಬಲ್ಲದೇನೊ. . ಯಾರಿಗೆ ಗೊತ್ತು? "

" ಸಾಮ್ರಾಜ್ಯದ ಆಶೆ ಯಾರಿಗಿದೆ ರತ್ನಾ ? "

" ರಾಜಶೇಖರನಿಗೆ ! ಇನ್ನಾರಿಗೆ ? "

" ರಾಜಶೇಖರ ನಿನಗೆ ನರಿಯಾಗಿ ತೋರಿದನೇ ? "

" ನರಿಯು ಕುರಿಕೋಳಿಗಳನ್ನಾದರೂ ಮುರಿದು ತಿನ್ನಬಹುದು ! ರಾಜಶೇಖರನಲ್ಲಿ ಅಂತಹ ಯೋಗ್ಯತೆ ಕೂಡ ಇಲ್ಲ ! ಏನೆ ಇರಲಿ ! ಅದೃಷ್ಟ

ಅವನನ್ನು ಸಮ್ರಾಟನ ಪದವಿಗೇರಿಸಿದುದೇನೊ ಸರಿ?"

"ರಾಜಶೇಖರನಿಗೆ ಸಮ್ರಾಟನ ಪದವಿ ಎಲ್ಲಿ ಬೇಕಾಗಿದೆ ರತ್ನಾ! ಅಪ್ಪಾಜಿಯವರು ನನಗೆ ಹೇಳುತ್ತಿದ್ದರು:- ಸಾಮ್ರಾಜ್ಯದ ಪ್ರಜೆಗಳೆಲ್ಲರದೂ - ರಾಜಶೇಖರನೇ ದೊರೆಯಾಗಬೇಕೆಂದು ಅಪೇಕ್ಷೆಯಂತೆ; ಆದರೆ ರಾಜಶೇಖರನು ಖಂಡಿತವಾಗಿ ಅದನ್ನು ನಿರಾಕರಿಸುತ್ತಿದ್ದಾನಂತೆ!"

"ನಿರಾಕರಿಸದೆ ಇನ್ನೇನು ಮಾಡಬೇಕವನು! ದೊರೆತನ ಸ್ವೀಕರಿಸಿದರೆ ತನ್ನಲ್ಲಿ ಆಳುವ ಸಾಮರ್ಥ್ಯವೊಂದು ಬೇಕಲ್ಲವೇ? ಹೋಗಲಿ! ಕಮಲಾ! ಹಾಗೆ ದೊರೆತನ ನಿರಾಕರಿಸುವುದಕ್ಕಾಗಿ ರಾಜಶೇಖರ ನೆಪವನ್ನಾದರೂ ಏನು ಹೇಳುತ್ತಿದ್ದಾನೆ ಹೇಳು ನೋಡೋಣ!"

"ಗತಿಸಿದ ವಿರೂಪಾಕ್ಷರಾಯ ರಾಜಶೇಖರನಿಗೆ ಚಿಕ್ಕಪ್ಪನಾಗಬೇಕಲ್ಲವೇ? ಸಾಮ್ರಾಜ್ಯದ ಹಿತಕ್ಕಾಗಿಯೇ ಆಗಲೊಲ್ಲದೇಕೆ, ಚಿಕ್ಕಪ್ಪನ ಕೊಲೆ ಮಾಡಿದುದರಿಂದ ಪಿತೃವಧೆಯ ಪಾತಕ ತನಗೆ ತಗುಲಿಕೊಂಡಿತಂತೆ. ಅದಕ್ಕಾಗಿ ತಾನು ದೊರೆಯಾಗಿ, ಕರ್ಣಾಟಕ ಸಾಮ್ರಾಜ್ಯದ ಪವಿತ್ರವಾದ ಸಿಂಹಾಸನಕ್ಕೆ ಆ ಪಾತಕದ ಮೈಲಿಗೆಯನ್ನು ಸೋಂಕಿಸಲಾರೆನೆಂದು ಆತ ಹೇಳಿದನಂತೆ. ಆದುದರಿಂದಲೆ ಇನ್ನುಮೇಲೆ ಸಿಂಹಾಸನಾಧಿಕಾರಿ ಪೆದ್ದರಾಯನಂತೆ."

'ಸಿಂಹಾಸನಾಧಿಕಾರಿ ಪೆದ್ದರಾಯನಂತೆ!' ಎಂಬ ಮಾತನ್ನೂ ಕೇಳಿದೊಡನೆಯೆ ರತ್ನಾಂಬಿಕೆ ಎದ್ದು ಕುಣಿದಾಡಬಹುದೆಂದು ಕಮಲಾಂಬಿಕೆ ಭಾವಿಸಿದ್ದಳು. ಆದರೆ ಅವಳ ಮುಖದ ಗಾಂಭೀರ್ಯ ಇದ್ದುದು ಇದ್ದಂತೆಯೇ ಇದ್ದಿತು. ಆಕೆ ತನ್ನ ನೋಟವನ್ನು ಒಳಕ್ಕೆ ತಿರುಗಿಸಿ, ವಿಚಾರಾಕಾಶದಲ್ಲಿಯ ಯಾವು ಯಾವುವೋ ಪಟಗಳನ್ನು ನೋಡಲು ತೊಡಗಿದ್ದಳು. ಎರಡು ಮೂರು ನಿಮಿಷಗಳವರೆಗೂ ಮಾತಿಲ್ಲದೆ ಕುಳಿತಿದ್ದ ರತ್ನಾಂಬಿಕೆ, ಕೊನೆಗೆ ತನ್ನೊಳಗೆ ತಾನೆ ನುಡಿದುಕೊಂಡಳು.

"ನನಗೆ ಮನುಷ್ಯರ ಪರೀಕ್ಷೆಯೆ ಇಲ್ಲವೇನು ಮತ್ತೆ! ಇನ್ನೊಬ್ಬರ ಮಾತನ್ನು ಕೇಳಿ ಕೇಳಿ ಒಂದು ವ್ಯಕ್ತಿಯ ಯೋಗ್ಯತೆಯನ್ನು ನಿರ್ಣಯಿಸಿಬಿಡುವುದೆಂದರೆ ಯುಕ್ತವಾದುದಲ್ಲವೇನೋ ನಿಜ! ಕಮಲಾ, ಹಾಗಾದರೆ .. ಇನ್ನು ಸಾಮ್ರಾಜ್ಯಸಿಂಹಾಸನ ಪೆದ್ದರಾಯನದಾಗುವುದೇನು?"

ಕಮಲಾಂಬಿಕೆ ಎಡಿಸುವ ಕಿರುನಗೆಯೊಂದಿಗೆ ಹೇಳಿದಳು.

“ ಪೆದ್ದರಾಯನದೊಬ್ಬನದೆ ಏಕೆ ? ನಿನ್ನದೂ ಆಗುವುದು ! ”

ರತ್ನಾಂಬಿಕೆಯೂ ಕೊಂಕಿನ ನಗೆಯೊಡನೆ ನುಡಿದಳು.

“ ಹಾಗಾದರೆ ನಾನಿನ್ನು ವಿಜಯನಗರದ ಮಹಾರಾಣಿ ! ”

“ ಮಹಾರಾಣಿಯಲ್ಲದೆ ಇನ್ನೇನು ? ಈಗಿನಿಂದಲೆ ನಮ್ಮಿಂದ ಮಹಾರಾಣಿಯ ಮಾನಸನ್ಮಾನಗಳನ್ನು ಅಪೇಕ್ಷಿಸುತ್ತೀಯೇನು ಮತ್ತೆ ? ಅದೆಲ್ಲ ಹೋಗಲಿಬಿಡು ! ನೀನು ನಮ್ಮ ಮನೆಗೆ ಬರುವುದು ಯಾವಾಗ ? ”

“ ಸಂಕ್ರಮಣದ ದಿನ ಬರುತ್ತೇನೆ. ಆ ದಿನ ನರಸನಾಯಕ ಬಂದಿರುತ್ತಾನಲ್ಲವೇ ? ”

“ ಸಾಕು ಬಿಡಮ್ಮಾ ! ಎಷ್ಟು ನಿನ್ನ ಹುಡುಗಾಟ ? ಬಂದುಬಿಡು ಹಾಗಾದರೆ ಆ ದಿನ ! ಬಾರದೆ ಇದ್ದರೆ ನನ್ನ ಆಣೆ ನೋಡು ನಿನಗೆ ! ”

ಎಂದು ನುಡಿದು, ಕಮಲಾಂಬಿಕೆ ಎದ್ದು, ತನ್ನ ಎಂದಿನ ಉಲ್ಲಾಸದ ನಡಿಗೆಯಲ್ಲಿ ಮನೆಗೆ ಹೊರಟು ಬಿಟ್ಟಳು. ರತ್ನಾಂಬಿಕೆಯು, ಹೋಗುತ್ತಿದ್ದ ಕಮಲಾಂಬಿಕೆಯನ್ನು ಕುರುಡುನೋಟಗಳಿಂದ ನಿಟ್ಟಿಸುತ್ತ ಕುಳಿತಲ್ಲಿಯೆ ಕುಳಿತಿದ್ದಳು.

---

## ೨ನೆಯ ಪರಿಚ್ಛೇದ

ಶಾಂತಿಕುಟೀರವೆಂದರೆ ಅದೊಂದು ವಸಮಂದಿರಕ್ಕೆ ಹೆಸರು. ವಿಜಯನಗರದ ಮೂಡಣದೆಸೆಗೆ, ಪಟ್ಟಣದ ಜನಸಮ್ಮರ್ದವಿಲ್ಲದ ಒಂದು ಹೊರದೋಟದಲ್ಲಿ ಈ ಶಾಂತಿಕುಟೀರವಿದೆ. ಮಲ್ಲಿಕಾರ್ಜುನ ಮಹಾರಾಯನು ಈ ನಿತಾಂತ ರಮಣೀಯವಾದ ಸ್ಥಳವನ್ನು ಆಯ್ದು ಚಿಕ್ಕ ಅರಮನೆಯೊಂದನ್ನು ಕಟ್ಟಿಸಿರುವನು. ರಾಜಕಾರ್ಯವು ಬೇಸರವೆನಿಸಿದಾಗ – ಏಕಾಂತಜೀವನದ ಅಪೇಕ್ಷೆಯಾದಾಗ – ಆ ದೊರೆಯು ಇದೇ ಶಾಂತಿಕುಟೀರದಲ್ಲಿ ಬಂದು ವಸತಿ ಮಾಡಿಕೊಂಡಿರುತ್ತಿದ್ದನು. ಮಲ್ಲಿಕಾರ್ಜುನನು ವೀರಧೀರನಾಗಿದ್ದಂತೆಯೆ ವಿದ್ಯಾವ್ಯಸನಿಯೂ ಅಹುದು. ಬೇರೆ ಬೇರೆ ವಿದ್ಯಾವಿಶಾರದರ ಸಭಾ-ಸಮಿತಿಗಳನ್ನು ನೆರೆಯಿಸಿ, ವಿಚಾರ-ಚರ್ಚೆ-ವಾದಗಳನ್ನಾತ ನಡೆಯಿಸುತ್ತಿ-

ದ್ದುದು, ಇದೇ ವನಪ್ರಾಸಾದದಲ್ಲಿಯೆ! ಈ ವನಪ್ರಾಸಾದಕ್ಕೆ ಶಾಂತಿಕುಟೀರ ರವೆಂದು ಪ್ರೀತಿಯಿಂದ ಹೆಸರಿಟ್ಟವನು ಮಲ್ಲಿಕಾರ್ಜುನ ದೊರೆಯೆ !

ಮಲ್ಲಿಕಾರ್ಜುನ ದೊರೆಯ ಹಿರಿಯ ಮಗನಾದ ರಾಜಶೇಖರನೂ ತನ್ನ ನಿವಾಸಕ್ಕಾಗಿ ಈ ಶಾಂತಿಕುಟೀರವನ್ನೇ ಆಯ್ದುಕೊಂಡಿರುವನು. ತಂದೆ ಯಾವಾಗಲಾದರೊಮ್ಮೆ ಏಕಾಂತಜೀವನವನ್ನು ಅಪೇಕ್ಷಿಸುತ್ತಿದ್ದರೆ ಮಗನು ನಿರಂತರವೂ ಏಕಾಂತಜೀವನಕ್ಕಾಗಿ ಆಶಿಪಡುವವನು. ವಿರೂಪಾಕ್ಷರಾಯನ ವಿಪರೀತವಾದ ಆಡಳಿತವು ರಾಜಶೇಖರನ ಈ ಆಶೆಯನ್ನು ತಡೆದು ಹಿಡಿಯಿತು. ಸಾಮ್ರಾಜ್ಯಪ್ರೇಮವು ಆತನನ್ನು ಆಗಾಗ ಸಮೂಹದಲ್ಲಿ ಕರೆದೊಯ್ಯಲು ತೊಡಗಿತು. ಮಾನವನು ವೈಯಕ್ತಿಕ ಆತ್ಮೋನ್ನತಿಗಾಗಿ ಒಬ್ಬೊಂಟಿಗನಾಗಿ ಬಾಳಬೇಕಾಗಿ ಬಂದರೂ, ಸುತ್ತಣ ವಾತಾವರಣವನ್ನು ಸರಿಗೊಳಿಸಿಕೊಳ್ಳುವುದಕ್ಕೆ ಸಮೂಹದಲ್ಲಿ ಸೇರಿಕೊಳ್ಳಲೇ ಬೇಕೆಂಬ ಮಾತಿನ ಮನವರಿಕೆ ಅವನಿಗೆ ಪೂರ್ಣವಾಗಿ ಆಯಿತು. ಎಂತಲೇ ಸಾಮ್ರಾಜ್ಯಾಭಿಮಾನಿಗಳ ಪಂಗಡಕ್ಕೆ ಸೇರಿಕೊಂಡು, ರಾಜಶೇಖರನು ವಿರೂಪಾಕ್ಷರಾಯನ ಕೊಲೆಯನ್ನು, ತನ್ನ ಕೈಯಿಂದಲೆ ಮಾಡಬೇಕಾಗಿ ಬಂದಿತು. ಈಗ ವಿಜಯನಗರದ ಸಾಮ್ರಾಜ್ಯದ ಬಗೆಗೆ ಆತನು ಕೃತಕೃತ್ಯ—ನಿಶ್ಚಿಂತ. ಅದಕ್ಕಾಗಿಯೆ—ಆಟವಾಡಿ ದಣಿದ ಆಮೆಯು ತನ್ನ ಕೈಕಾಲುಗಳನ್ನು ತನಗಿದ್ದ ಸಹಜಾವರಣದಲ್ಲಿ ಮುದುರಿಸಿ ಕುಳಿತುಕೊಂಡಿರುವಂತೆ — ಇದುವರೆಗೆ ರಾಜಕಾರ್ಯದ ಕಡೆಗೆ ಹರಿಯಿಸಿದ್ದ ತನ್ನ ಮನಸ್ಸಿನ ವಿಕ್ಷೇಪಕಶಕ್ತಿಯನ್ನು ಈಗ ಉಪಸಂಹರಿಸಿಕೊಂಡು, ರಾಜಶೇಖರನು ಈ ಶಾಂತಿಕುಟೀರದಲ್ಲಿ ನೆಲಸಿರುವನು.

ಧನುರ್ಮಾಸದ ಕೊನೆಯ ದಿನಗಳ ಚಳಿ ಎಂತಹದೆಂಬುದನ್ನು ಬೇರೆಯಾಗಿ ಬಣ್ಣಿಸಿ ಹೇಳಬೇಕೇ? ಅಂದಿನ ಚಳಿಗಾಗಿಯೆ ಹೆದರಿಯೇನೋ!.. ಸೃಷ್ಟಿದೇವಿ, ಬೆಳಗಿನ ಎಳನೇಸರನ್ನು ಮುಗಿಲಂಗಳದಲ್ಲಿ ಆಡಲಿಕ್ಕೆ ಕಳುಹಿಸಬೇಕಾದರೆ, ಮಂಜಿನ ಮುಸುಕು ಹೊದ್ದಿಸಿ ಕಳುಹಿಸುವಳು. ಸೂರ್ಯನಿಂದ ಸೆಕೆಯ ಕಿರಣಗಳು ದೊರೆಯಲಾರವೆಂಬುದನ್ನು ಕಂಡ ಲೋಕದ ಜನರು, ಅಗ್ನಿನಾರಾಯಣನನ್ನು ಮೊರೆಹೊಗುವರು. ಆದರೆ ಏನು! ಚಳಿವೆಣ್ಣು ಆತನ ಮನವನ್ನೊಲಿಸಿ ತನ್ನ ಕಡೆಗೆ ಮಾಡಿಕೊಂಡು ಬಿಟ್ಟಿರುವಳು.

ಆ ಜನರು ಅಗ್ನಿನಾರಾಯಣನಿಗೆ ಇಷ್ಟವಾದ ಕಾಣಿಕೆಗಳನ್ನು ಎಷ್ಟೆಷ್ಟು ಸಲ್ಲಿಸಿದರೂ ಆತನ ನೆರವು ಸಾಕಷ್ಟು ಸಿಕ್ಕದೆ ಹೋಗುವುದು. ಗಾಳಿರಾಯನಂತೂ ಮಹಾಚಂಚಲನು. ಒಂದು ಪಕ್ಷವನ್ನು ಹಿಡಿದು ಕೊನೆಯವರೆಗೆ ಅದೇ ಪಕ್ಷದಲ್ಲಿಯೆ ಇರುವುದೆಂದರೆ ಆತನಿಗೆ ಗೊತ್ತೇ ಇಲ್ಲವಲ್ಲವೇ! ಯಾರು ಬಲಿಷ್ಠರಾಗಿ ಕಾಣುವರೋ ಅವರ ಸಹಾಯಕ್ಕೆ ನಿಲ್ಲುವುದು ಆತನ ರೀತಿ! ಜಗತ್ತಿನ ಮೂಲಭೂತದ ಅಭಿಮಾನಿದೇವತೆಯೊಬ್ಬನಲ್ಲಿಯೆ ಈ ಗುಣವಿರುವಾಗ, ಸಾಮಾನ್ಯ ಮಾನವ ವರ್ಗವು ಗೆದ್ದ ಎತ್ತಿನ ಬಾಲ ಹಿಡಿಯುತ್ತಿದ್ದರೆ ಆಶ್ಚರ್ಯವೇನು ?

ಉದ್ಯಮಶೀಲರಾದ ಒಕ್ಕಲಿಗರೆದುರು ಮಾತ್ರ, ಚಳಿವೆಣ್ಣು ನಾಚಿಕೊಂಡು ತಲೆಬಾಗಿ ನಿಲ್ಲುವಳೇನೋ! ಶಾಂತಿಕುಟೀರದ ನೆರೆಹೊರೆಯ ತೋಟಗಳಲ್ಲಿರುವ ತೋಟಿಗರು, ಕೂಗಲಿರುವ ಕೋಳಿಗಳೊಡನೆಯೆ ಹಾಸಿಗೆಗಳನ್ನು ಬಿಟ್ಟು ಎದ್ದು, ತಮ್ಮ ದಿನದ ಕಾರ್ಯಗಳಿಗೆ ಅಣಿಯಾಗುತ್ತಿರುವರು. ಬೆಳಗಾಗಿ ಅರ್ಧಪ್ರಹರವಾಗಿ ಹೋದರೂ ರಾಜಧಾನಿಯ ಮುಖ್ಯ ಮುಖ್ಯ ಬೀದಿಗಳಲ್ಲಿ ಕೂಡ ಜನರ ಸುಳಿದಾಟ ಹೆಚ್ಚಾಗಿ ಕಾಣುತ್ತಿರಲಿಲ್ಲ; ಆದರೆ ಈ ತೋಟಗಳ ಗುಡಿಸಿಲುಗಳಲ್ಲಿ ವಸತಿಮಾಡಿಕೊಂಡಿದ್ದ ತೋಟಗಾರರ ಗಂಡಸರು, ಹೆಂಗುಸರು, ಹುಡುಗರು ಎಲ್ಲರೂ ಎದ್ದು ದಿನದಿನದ ಕೆಲಸಕ್ಕೆ ತೊಡಗಿರುವರು.

ಬೆಳೆಗಳಿಗೆ ಬಂದೆರಗುವ ಹಕ್ಕಿಗಳನ್ನು ಸೋಹುವ 'ಹೋಹೋ!' ಎಂಬ ಉಲಿವು, ಯಾತದಿಂದ ನೀರನ್ನು ಮೇಲಕ್ಕೆತ್ತುತ್ತಿರುವಾಗಿನ ಚಕ್ರಗಳ ಕೀರುಕಿರ್ರೆಂಬ ಕಿರುಚಾಟ, ಉಳುಮೆಯ ಎತ್ತುಗಳನ್ನು ನಡೆಯಿಸುವುದಕ್ಕಾಗಿ ಕೂಗುತ್ತಿದ್ದ ಒಕ್ಕಲಿಗರ ಕೂಗು, ಹೂದೋಟದಲ್ಲಿ ಹೂಗಳನ್ನು ಎತ್ತುತ್ತಿರುವ ಮಾಲೆಗಾತಿಯರ ಬೆಳಗಿನ ಮಂಜುಳಗೀತಗಳ ಇಂಚರ, ತಾಯಂದಿರು ಎದ್ದು ಕೆಲಸಕ್ಕೆ ಹೋಗಿರುವಾಗ – ತೊಟ್ಟಿಲಲ್ಲಿ ಮಲಗಿದ್ದ ಎಳಗೂಸುಗಳು – ಎಚ್ಚತ್ತು ಅಳುತ್ತಿರುವುದರ ಚೀರುದನಿ, ಜೊತೆಯಲ್ಲಿ ಬೆಳಗಿನ ಹಕ್ಕಿಗಳ ಕಲಕಲಧ್ವನಿ, ತುಂಬಿಗಳ ಗುಂಜಾರವ ಇವೆಲ್ಲ ಎಲ್ಲೆಲ್ಲಿಯೂ ಕಿವಿಗೆ ಬಿದ್ದು, ತೋಟಗಳ ಪ್ರದೇಶವೆಲ್ಲ ಚೈತನ್ಯಮಯವಾಗಿ ತೋರುತ್ತಿರುವುದು.

ರಾಜಶೇಖರನು ಬೆಳಗಿನ ವಿಧಿಗಳೆಲ್ಲವನ್ನೂ ತೀರಿಸಿಕೊಂಡು, ಶಾಂತಿ-

ಕುಟೀರದ ಓಲಗಸಾಲೆಯೊಳಕ್ಕೆ ಬಂದಾಗ, ಹೊತ್ತು ನಾಲ್ಕು ಗಳಿಗೆಯೇರಿದ್ದಿತು. ಆಗ ಅವನು ಉಟ್ಟಿದ್ದುದು ಬೆಳ್ಳನೆಯದೊಂದು ದುಕೂಲ! ಹೊತ್ತಿದ್ದೂ ಅದೇ ಬಣ್ಣದ ಒಂದು ಸೆಲ್ಲೆಯು! ಹಣೆಗೆ ಭಸ್ಮದ ಮೂರು ಬೆರಳಿನ ಗುರುತುಗಳಿವೆ. ಕಪ್ಪುಬಣ್ಣದ ನಿಡುಜಡೆಗಳು ಓರಣಗೊಂಡು ಬೆನ್ನು-ಭುಜಗಳ ಮೇಲೆ ಬಿದ್ದುಕೊಂಡಿವೆ. ಜಡೆಯಲ್ಲಿ ಅಡಗಿದ್ದ ಕಿವಿಯ ಕುಂಡಲಗಳ ವಜ್ರಗಳು ಮೋಡದ ಮರೆಯ ಚುಕ್ಕೆಗಳಂತೆ ತೊಳತೊಳಗುತ್ತಲಿವೆ. ಪುಷ್ಟವಾಗಿ ಇದ್ದರೆ ದುಂಡುದುಂಡಾಗಿ ತೋರುವಂತಹ ಮೊಗದ ಮಾಟ; ಚಾಂಚಲ್ಯವನ್ನು ಬಿಟ್ಟುಕೊಟ್ಟು, ಮೆರುಗನ್ನು ಮಾತ್ರ ಇಟ್ಟುಕೊಂಡಿದ್ದ ಮಿಂಚಿನಂತಹ ಕಣ್ಣೋಟ; ಧ್ಯಾನರೇಷೆಗಳನ್ನೋ ಚಿಂತಾರೇಷೆಗಳನ್ನೋ ಮೇಲೆ ಕುಳ್ಳಿರಿಸಿಕೊಂಡುದರಿಂದ – ನಸುವೆ ಕೊಂಕಿದ ನಿಡಿದಾದ ಹುಬ್ಬುಗಳು; ಇವೆಲ್ಲ ಕೂಡಿ 'ಇವನೇನು ರಾಜಪುತ್ರನೋ? ಋಷಿಪುತ್ರನೋ?' ಎಂದು ನೋಡಿದವರೆಲ್ಲರಲ್ಲಿ ಸಂದೇಹವನ್ನು ಹುಟ್ಟಿಸಿ ಬಿಡುವಂತಹದು… ಒಟ್ಟಿನಲ್ಲಿ ರಾಜಶೇಖರನ ರೂಪ.

ಓಲಗಸಾಲೆಯೊಳಕ್ಕೆ ಬಂದ ರಾಜಶೇಖರನು ತನ್ನ ನಿತ್ಯದ ತೂಲಾಸನದಲ್ಲಿ, ದಿಂಬಿಗೆ ಹಿಂಬದಿಯನ್ನು ಹಚ್ಚಿ ಕುಳಿತುಕೊಂಡನು. ಬಳಿಯಲ್ಲಿಯೇ ಇದ್ದ ಪುಸ್ತಕಪೀಠವನ್ನು ಮುಂದಕ್ಕೆ ಸರಿಸಿಕೊಂಡು, ಅದರ ಮೇಲೆ ಇದ್ದ ಓಲೆಗರಿಯ ಪುಸ್ತಕದಲ್ಲಿಯ ಮೊದಲಿನ ಕೆಲವು ಓಲೆಗಳನ್ನು ಮುಗುಚಿಹಾಕಿದನು; ಬಳಿಕ ಒಂದು ಓಲೆಯನ್ನು ಕೈಗೆ ತೆಗೆದುಕೊಂಡು, ಗಂಭೀರವಾದ ಧ್ವನಿಯಲ್ಲಿ ಕಠೋಪನಿಷತ್ತಿನ ಮಂತ್ರವೊಂದನ್ನು ಓದಲು ತೊಡಗಿದನು.

" ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತ
ಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ ||
ಶ್ರೇಯೋಹಿ ದೀರೋऽಭಿಪ್ರೇಯಸೋ ವೃಣೀತೇ
ಪ್ರೇಯೋ ಮಂದೋ ಯೋಗಕ್ಷೇಮಾ ವೃಣೀತೇ ||

ಓದಿ ರಾಜಶೇಖರನು ವಿಚಾರ ಮಾಡಲು ತೊಡಗಿದನು. ಮತ್ತೆ ಒಂದು ಸಲ–ಎರಡು ಸಲ ಇದೇ ಮಂತ್ರವನ್ನು ಗಟ್ಟಿಯಾಗಿ ಓದಿಕೊಂಡು, ಕಣ್ಣೋಟವನ್ನು ಹೃದಯದೊಳಕ್ಕೆ ಕಳುಹಿಸಿದನು. ಆತನ ಮನಸ್ಸು ಮಾತನಾಡಲು ತೊಡಗಿತು.

" ಮಾನವನಿಗೆ ಪ್ರೇಯಸ್ಸೆಂಬುದು ಸಿಹಿಯಾದ ಮದಿರಾಸವ! ಶ್ರೇಯ-

ಸ್ಸೆಂಬುದು ಕಹಿಯಾದ ಅಮೃತಾಸವ. ಮೊದಲನೆಯದು ಬಾಯಿಗೆ ಬೆಲ್ಲದೂಟ ಬಸಿರಿಗೆ ಕಾಲಕೂಟ; ಎರಡನೆಯದು ಬಾಯಿಗೆ ಬೇವು ಬಸಿರಿಗೆ ಮಾವು! ಮೊದಲನೆಯದು ಇಹಲೋಕದ ಆನಂದಕ್ಕೆ ಆವಶ್ಯಕ; ಎರಡನೆಯದು ಪರಲೋಕದ ಆನಂದಾನುಭವಕ್ಕೆ ಕಾರಣ! ಎಂತಲೇ ಈ ಉಪನಿಷ-ನ್ಮಂತ್ರ ಹೀಗೆ ಹೇಳುತ್ತಿರುವುದಲ್ಲವೇ! 'ಈ ಶ್ರೇಯಸ್ಸು ಪ್ರೇಯಸ್ಸುಗಳನ್ನು ಬುದ್ಧಿವಂತನಾದವನು ಸರಿಯಾಗಿ ಪರೀಕ್ಷಿಸಿ, ಇವುಗಳನ್ನು ಹಿಂಜಿ ಹಿಗ್ಗಿಸಿ ನೋಡುವನು. ಪ್ರೇಯಕ್ಕಿಂತ ಶ್ರೇಯವು ಹಿತಕಾರಿಯೆಂದು ತಿಳಿದು, ಅದನ್ನವನು ಪುರಸ್ಕರಿಸುವನು. ಆದರೆ ಇಹಲೋಕವೊಂದರಲ್ಲಿಯೆ ನಂಬುಗೆಯನ್ನಿಟ್ಟ ತಿಳಿಗೇಡಿಗಳು ತಮ್ಮ ಬದುಕಿನ ಯೋಗಕ್ಷೇಮಕ್ಕಾಗಿ ಪ್ರೇಯದ ಬೆನ್ನನ್ನೆ ಹತ್ತುವರು.' ಇದೆಲ್ಲವೂ ಸರಿ! ಆದರೆ ಈಗ ಎರಡು ಲೋಕಗಳಲ್ಲಿಯ ಜೀವನವನ್ನೂ ಸವಿಗೊಳಿಸುವಂತಹ ಮೂರನೆಯದೊಂದು ಮಧ್ಯಮಾರ್ಗವು ಲೋಕಕೆ ಬೇಕಾಗಿದೆ. ಎಲ್ಲೆಲ್ಲಿಯೂ ಯಾವಾಗಲೂ ಬಹುಜನರು ಅಪೇಕ್ಷಿಸುತ್ತಿರುವುದು ಇದನ್ನೆ! ಇಂತಹದೊಂದನ್ನು ಈ ಕಾಲದ ಋಷಿಯೊಬ್ಬ ಯಾವನಾದರೂ ಕಂಡು ಹಿಡಿದರೆ, ಆತನ ಕೀರ್ತಿದುಂದುಭಿ ಮೂರುಲೋಕದಲ್ಲಿಯೂ ಮೊಳಗಬಹುದಾಗಿದೆ. ಸತ್ಯಸಂಶೋಧನೆಗಾಗಿ ಎಡೆಬಿಡದೆ ಹಣುಗಿದ ನಮ್ಮ ಮೊದಲಿಗರು, ಒಂದು ಸುಖಕ್ಕಾಗಿ ಇನ್ನೊಂದು ಸುಖವನ್ನು ಬಲಿಯಾಗಿ ಕೊಟ್ಟ ಹೊರತು ಬೇರೆ ದಾರಿಯೆ ಇಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟಿದ್ದಾರಲ್ಲಾ..! ಆದರೆ ಅವರು ಹೇಳಿದುದೆ ಕೊನೆಯ ಮಾತೇನು? ನನಗೇನೋ ಎನಿಸುತ್ತಿದೆ: ಈಗ ಕಂಡು ಹಿಡಿದ ಸತ್ಯಕ್ಕಿಂತ ಕಾಣಬೇಕಾಗಿದ್ದ ಸತ್ಯ ಇನ್ನೂ ಬಹಳವಿರುವುದೆಂದು! ಅದಕ್ಕಾಗಿ ಈಗ ಬೇಕಾಗಿದೆ ನಮಗೆ..ಅಂದಿನ ಋಷಿಗಳಂತಹ ಸತ್ಯಸಂಶೋಧಕರ ಹಿಂಡು! ಅವರಿಂದ ಈ ಪ್ರೇಯಸ್ಸು ಶ್ರೇಯಸ್ಸುಗಳೆರಡರೊಳಗಿನ ಸಿಹಿತನವನ್ನೂ ಸೇರಿಸಿರುವ ಮೂರನೆಯದೊಂದು ಸತ್ಯಪಥದ ಸಂಶೋಧನವಾಗಬೇಕು! ಆಗಲೆ ಸಮಾಜದಲ್ಲಿ ನಿಜವಾದ ಶಾಂತತೆಯು ನೆಲಸುವುದು. ನಮ್ಮ ಕನ್ನಡ ಸಾಮ್ರಾಜ್ಯವು ಅಂತಹ ಋಷಿಗಳನ್ನು ಒಟ್ಟುಗೂಡಿಸುವ ಕೆಲಸ ಮಾಡಿದರೆ ಎಷ್ಟೊಂದು ಚೆನ್ನಾದೀತು?...."

ರಾಜಶೇಖರನ ವಿಚಾರ ತರಂಗಿಣಿಯು ಯಾವ ತಡೆಯೂ ಇಲ್ಲದಿದ್ದಲ್ಲಿ

ಇನ್ನೂ ಹೇಗೆ ಹೇಗೆ ಸಾಗುತ್ತಿದ್ದಿತೋ ! ಆದರೆ ಒಮ್ಮೆಲೆ ಪೆದ್ದರಾಯನು ಓಲಗಸಾಲೆಯೊಳಕ್ಕೆ ಬಂದ. ರಾಜಶೇಖರನ ದೃಷ್ಟಿ ಕೂಡಲೆ ಹೊರಕ್ಕೆ ಹೊರಳಿದುವು. ಬಂದಿದ್ದ ತಮ್ಮನನ್ನು ಆತನು ಉಚಿತ ಆದರದೊಂದಿಗೆ ಬರಮಾಡಿಕೊಂಡು, ತನ್ನ ಬಲಗಡೆಗಿದ್ದ ಆಸನದಲ್ಲಿ ಕುಳ್ಳಿರಿಸಿದನು. ಬಳಿಕ ಸ್ನೇಹಸ್ವರದಲ್ಲಿ ಪೆದ್ದರಾಯನನ್ನು ಕೇಳಿದನು.

"ಉತ್ತರಕ್ರಿಯೆಯ ಕಾರ್ಯವೆಲ್ಲ ಉಚಿತರೀತಿಯಲ್ಲಿ ಕೊನೆಗೊಂಡಂತೆ ಆಯಿತಲ್ಲವೇ ?"

"ಎಲ್ಲವೂ ಉಚಿತರೀತಿಯಿಂದ ಕೊನೆಗೊಂಡಿತು. ವಿಜಯನಗರದ ದೊರೆಗಳ ಅಂತಸ್ತಿಗೆ ಎಳ್ಳಮೊನೆಯಷ್ಟೂ ಕೊರತೆಯುಂಟಾಗದಂತೆ ಎಲ್ಲ ವಿಧಿಗಳನ್ನೂ ನೆರವೇರಿಸಿ ಆಯಿತು."

"ದೊರೆಯ ಕೊಲೆಯ ಮೂಲಕವಾಗಿ, ಸಾಮ್ರಾಜ್ಯಕ್ಕೆ ವಿಘಾತಕವಾದ ಅಪಶ್ರುತಿಗಳು ಎಲ್ಲಿಯೂ ಕೇಳುತ್ತಿಲ್ಲ ತಾನೇ !"

"ಕೇಳುತ್ತಿಲ್ಲವೆಂದೇ ಹೇಳಬೇಕು. ರಾಜ್ಯಕ್ಕೆ ರಾಜ್ಯವೆ ಉತ್ಸಾಹಗೊಂಡು ಸಾಮ್ರಾಜ್ಯದ ಮಂಗಲಗೀತವನ್ನು ಹಾಡುತ್ತಿರುವಾಗ, ಅಲ್ಲೊಂದು ಇಲ್ಲೊಂದು ಅಪಶ್ರುತಿಯ ಕಿರುದನಿಯೆದ್ದರೂ ಅದರಿಂದ ಏನಾಗಬೇಕಾಗಿದೆ? ಎದ್ದಲ್ಲಿಯೆ ಅದು ಬಿದ್ದುಹೋಗಬಹುದಿಷ್ಟೇ !"

"ಹಾಗೆಂದು ದುರ್ಲಕ್ಷಿಸಿ ನಡೆಯಲಾಗದು ಪೆದ್ದಣ್ಣಾ ! ಕಡಲಿಗೆ ಕಡಲುಹಾಲನ್ನೂ ಒಂದೆ ಒಂದು ತೊಟ್ಟು ಹುಳಿ ಕೆಡಸಿಬಿಡಬಲ್ಲುದು. ಮರದ ಪೊಟ್ಟರೆಯ ಒಂದೆ ಒಂದು ಕಿರುಗಿಡಿ, ಕಾಡುಬೀಡುಗಳನ್ನೂ ಬೇಯಿಸಿಬಿಡಬಹುದು. ದೊರೆಯಾಗಬೇಕಾಗಿದ್ದವನು ಬ್ರಹ್ಮನಂತೆ ಚತುರ್ಮುಖನಾಗಬೇಕು ! ಮಹೇಂದ್ರನಂತೆ ಮೈತುಂಬ ಕಣ್ಣುಳ್ಳವನಾಗಬೇಕು !"

"ದೊರೆಯಾಗಬೇಕಾಗಿದ್ದವನು ಹಾಗೆಲ್ಲ ಆಗಬೇಕಲ್ಲವೇ ?"

"ಅಹುದು ! ನೀನು ಆದರ್ಶನಾದ ದೊರೆಯಾಗಬೇಕೆಂದು ನನ್ನ ಆಂತರ್ಯದ ಆಶೆ."

"ನಾನು ದೊರೆಯಾದರಲ್ಲವೇ ಅದೆಲ್ಲ ಮಾತು ?"

"ಎಂದರೆ?"

"ಎಂದರೆ, 'ಮಲ್ಲಿಕಾರ್ಜುನನ ಸಂತಾನಕ್ಕೆ ಸಾಮ್ರಾಜ್ಯಪದವಿರಬೇಕು"

ಎಂಬುದಿಷ್ಟೆ ನನ್ನ ಆಶೆಯಿದ್ದಿತಲ್ಲದೆ, ನಾನೇ ದೊರೆಯಾಗಬೇಕೆಂದು ಎಂದೂ ಅಪೇಕ್ಷಿಸಿದವನಲ್ಲ!"

"ಅಪೇಕ್ಷಿಸದಿದ್ದರೆ ಏನಾಯಿತು? ಸದ್ಯ ನಿನಗಾಗಿ ಬಡಿಸಿದ್ದ ಎಡೆಯುದು! ನೀನು ಉಣ್ಣಲೇಬೇಕು!"

"ಅಣ್ಣಾಜೀ! ನಾನೂ ನಿಮ್ಮ ಮಾತುಗಳನ್ನೇ ಪ್ರತಿಯಾಗಿ ಹೇಳಿದರೆ. .!"

"ಅದೆಂದಿಗೂ ಸಾಧ್ಯವಿಲ್ಲ. ನನ್ನ ಸಾಮರ್ಥ್ಯ ಅಸಾಮರ್ಥ್ಯಗಳನ್ನು ನಾನು ಚೆನ್ನಾಗಿ ಕಂಡುಕೊಂಡಿದ್ದೇನೆ. ನೋಡು ಪೆದ್ದಣ್ಣಾ! ಕಾಲಕೂಟವನ್ನು ನಿಗ್ರಹಿಸುವಶಕ್ತಿ ಇನ್ನಾವ ದೇವತೆಗಳಲ್ಲಿಯೂ ಇರಲಿಲ್ಲ; ಪ್ರಲಯಭೈರವನಾದ ಶಂಕರನೇ ಅದನ್ನು ಹಿಡಿದಿಡಲು ಶಕ್ತನಾದ. ಸಾಮ್ರಾಜ್ಯವೆಂದರೆ ಇದೂ ಒಂದು ಕಾಲಕೂಟಕ್ಕಿಂತ ಹೆಚ್ಚಿನ ಕಾಲಕೂಟ! ಅದನ್ನು ಹಿಡಿದು ಆಡಿಸಬೇಕಾಗಿದ್ದವನಿಗೆ ಅಹಂಕಾರ– ಅಭಿಮಾನಗಳು ಅವಶ್ಯವಾಗಿ ಬೇಕು!"

"ಯಾವುದಕ್ಕೆ ಯಾವ ಗುಣಬೇಕೆಂಬುದನ್ನು ಹೇಳಬಲ್ಲವರು, ಅದನ್ನು ಸಂಪಾದಿಸಿ ಸಂಗ್ರಹದಲ್ಲಿಟ್ಟುಕೊಳ್ಳಲಿಕ್ಕೆ ಆಗದೇನು?"

"ಗುಣಗಳು ಸಂಪಾದಿಸಿಕೊಳ್ಳತಕ್ಕುವುಗಳಲ್ಲ! ಮಾನವನು, ಜನ್ಮದೊಡನೆಯೆ ತಂದ ಸೃಷ್ಟಿದೇವಿಯ ಬಳುವಳಿಗಳವು! ನೋಡು ಪೆದ್ದಣ್ಣಾ! ನಾಲಗೆ ಮನಸ್ಸಿನ ಬೇಕುಬೇಡಗಳ ಸಂದೇಶವನ್ನು ತಿಳುಹಿಸಲು ಸಮರ್ಥವಾಗಿದ್ದರೂ ಆ ಸಂದೇಶವನ್ನು ಆಚರಣೆಯಲ್ಲಿ ತರಬೇಕಾಗಿದ್ದ ಅಂಗಾಂಗಗಳೆ ಬೇರೆಯಾಗಿಲ್ಲವೇ?"

"ಅಣ್ಣಾಜೀ, ಈ ತೆರದ ಮಾತುಗಳಲ್ಲಿ ನನ್ನ ಮನಸ್ಸು ಅಷ್ಟೊಂದು ಪ್ರವೇಶಿಸಲಾರದು. ಇಷ್ಟೊಂದು ಮಾತ್ರ ನನಗೆ ಎನಿಸುತ್ತಲಿದೆ. ಮಲ್ಲಿಕಾರ್ಜುನ ದೊರೆಯ ಮಕ್ಕಳಲ್ಲಿ ಹಿರಿಯರು ನೀವು! ಸಿಂಹಾಸನವನ್ನು ಏರಬೇಕಾದ ಅಧಿಕಾರ ನಿಮಗೆ ಮೊದಲು ಸಲ್ಲುತ್ತದೆ. ನೀವು ದೊರೆಗಳಾಗಿರಿ! ನಾನು ಸೇನಾನಾಯಕನಾಗಿ ಮಿಕ್ಕುದೆಲ್ಲವನ್ನೂ ನೋಡಿಕೊಳ್ಳುವೆನಂತೆ. ಅಣ್ಣಾಜೀ, ಆಗ ನೋಡಬಹುದು ನೀವು. . ಕರ್ಣಾಟಕ ರಾಜ್ಯಲಕ್ಷ್ಮಿಯ ವೈಭವವನ್ನು! ಹಿಮಾಚಲದಿಂದ ಸೇತುಬಂಧದ ವರೆಗೆ ಸಮಗ್ರಭಾರತದಲ್ಲಿ ವಿಧರ್ಮೀಯರ ಸದ್ದು–ಸುಳಿದಾಟಗಳು, ಎಲ್ಲಿಯೂ ಕಿವಿಗೆ ಕೇಳದಂತೆ–

ಕಣ್ಣಿಗೆ ಬೀಳದಂತೆ ಮಾಡಿಬಿಡುತ್ತೇನೆ. ಇದುವರೆಗಿನ ನನ್ನ ಕನಸುಗಳನ್ನೆಲ್ಲ ಕಾರ್ಯರೂಪದಲ್ಲಿ ತಂದು ತೋರಿಸುತ್ತೇನೆ.''

''ನನಗದು ಬೇಡ ಪೆದ್ದಣ್ಣಾ! ಪಿತೃವಧೆಯ ಪಾತಕವು ನನಗಿದ್ದ ಸಿಂಹಾಸನಾಧಿಕಾರವನ್ನು ಹೊಡೆದುಹಾಕಿಬಿಟ್ಟಿದೆ. ನಿನ್ನ ಮಾತನ್ನು ಕೇಳಿ ನಾನೀಗ ದೊರೆಯಾಗಲಿಕ್ಕೆ ಒಪ್ಪಿಕೊಂಡೆನೆನ್ನು. ಮುಂದಿನ ಕಾಲವು ನನ್ನ ಇತಿಹಾಸವನ್ನು ಹೇಳಬೇಕಾದರೆ ಎಂತಹ ಬಣ್ಣ ಬಳೆಯಬಹುದೆಂಬುದು ನಿನಗೆ ಗೊತ್ತೇ? 'ರಾಜ್ಯಲೋಭದಿಂದ ಚಿಕ್ಕಪ್ಪನನ್ನು ಕೊಂದು ಸಿಂಹಾಸನವನ್ನೇರಿದವನೀತ' ಎಂದು ಅಂದಿನ ಜನರ ಬಾಯಲ್ಲಿ ನನ್ನ ಹೆಸರು ಮೆರೆಯಬಹುದು! ಹಾಗೆ ಮೆರೆಯಿಸಿಕೊಳ್ಳಲಿಕ್ಕೆ ನನಗೆ ಇಷ್ಟವಿಲ್ಲ. ವರ್ತಮಾನಕ್ಕಿಂತಲೂ ಬರಲಿರುವ ಕಾಲಕ್ಕೆ ಹೆದರಬೇಕಾದುದು ಮನುಷ್ಯತ್ವದ ಲಕ್ಷಣವು! ಎಂತಲೇ ನಾನು ಹೇಳುತ್ತಿರುವುದು: ಪಿತೃವಧೆಯಿಂದ ನನ್ನ ಸಿಂಹಾಸನಾಧಿಕಾರವನ್ನು ನಾನು ಕಳೆದುಕೊಂಡಿರುವೆನೆಂದು. ಆದುದರಿಂದಲೇ ಅದು ಈಗ ಪೂರ್ತಿಯಾಗಿ ನಿನ್ನದು! ನಾನು ಅದನ್ನು ಎಂದೂ ಅಪೇಕ್ಷಿಸಲಾರೆ!!

'' ನನಗೆ ಇದೆಯೇ ಅದರ ಅಪೇಕ್ಷೆ ?''

'' ನೀನೂ ಒಲ್ಲೆನೆಂದು ಹೇಳು! ಪ್ರಜೆಗಳು ಇನ್ನಾರನ್ನಾದರೂ ಯೋಗ್ಯರಾದವರನ್ನು ಆಯ್ದು ತಮಗೆ ನಾಯಕನನ್ನಾಗಿ ಮಾಡಿಕೊಳ್ಳಬಹುದು!''

'' ಅದೆಂದಿಗೂ ಆಗದು! ವಿಜಯನಗರದ ಸಿಂಹಾಸನದಲ್ಲಿ ಮಲ್ಲಿಕಾರ್ಜುನನ ಮಕ್ಕಳಲ್ಲದೆ, ಬೇರೆಯವರು ಕುಳಿತುದನ್ನು ಕಂಡು, ಸಹಿಸಿಕೊಂಡಿರುವುದೆಂದರೆ ಅಶಕ್ಯವಾದ ಮಾತು!''

ರಾಜಶೇಖರನು ನಸುವೆ ನಕ್ಕು ನುಡಿದನು.

'' ಇದೇನಿದು? ನಿನ್ನ ಮಾತು ನಿನಗೆಯಾದರೂ ಸರಿಯೆಂದು ತೋರುತ್ತಿದೆಯೇ ಪೆದ್ದಣ್ಣಾ? ಸಿಂಹಾಸನ ನನಗೆ ಬೇಡವೇ ಬೇಡ. ನೀನೂ ಒಲ್ಲೆನೆಂದು ಹೇಳಿದ್ದೀಯೆ! ಈಗ ಮತ್ತೆ ನೀನೆ ಹೇಳುತ್ತಿದ್ದೀಯೆ.. ಇನ್ನೊಬ್ಬರು ಸಿಂಹಾಸನವನ್ನು ಏರಿದುದನ್ನು ನೋಡಲಾರೆನೆಂದು! ನನ್ನ ನಿನ್ನ ಹೊರತು ಮಲ್ಲಿಕಾರ್ಜುನರಾಯನ ಮಕ್ಕಳು ಮೂರನೆಯವರಿಲ್ಲ ತಾನೇ! ಈಗೇನು ಮಾಡಬೇಕು? ಹೇಳು!''

" ಬೇರೆಯೇನೂ ಮಾಡಬಾರದು ! ನೀವೆ ದೊರೆಯಾಗಲಿಕ್ಕೆ ಒಪ್ಪಿಗೆ ಕೊಡಬೇಕು."

" ಆ ಮಾತು ಆಗುವಂತಿಲ್ಲ ಪೆದ್ದಣ್ಣಾ !"

" ಹಾಗಾದರೆ. .!"

"ನೀನೆ ದೊರೆಯಾಗು ! ನನ್ನ ಹಿರಿಯತನದ ಅಧಿಕಾರ ನಡೆಯಿಸ ಬೇಕೆಂದು ನಿನಗೆ ಎನಿಸುತ್ತಿದ್ದರೆ, ನನ್ನನ್ನು ನಿನ್ನ ಸಲಹೆಗಾರನನ್ನಾಗಿ ಮಾಡಿ ಕೊಳ್ಳು ! ಸಾಮ್ರಾಜ್ಯದೇವಿಯ ದೇಹದ ಸಂದೇಶಗಳನ್ನು ನುಡಿಯುವ ನಾಲಗೆಯಾಗಿ ನಾನು ಇರುತ್ತೇನೆ ಬೇಕಾಗಿದ್ದರೆ !"

ಪೆದ್ದಣ್ಣನು ಏನು ಮಾತನಾಡಬೇಕೆಂಬುದನ್ನು ತಿಳಿಯದವನಾಗಿ ವಿಚಾರಮುದ್ರೆಯಿಂದ ಸುಮ್ಮಗೆ ಕುಳಿತುಬಿಟ್ಟನು. ರಾಜಶೇಖರನು ತನ್ನ ಸಹಜದೃಷ್ಟಿಯಲ್ಲಿ ನಸುವೆ ಆತುರಭಾವವನ್ನು ಬೆರಸಿ, ಪೆದ್ದರಾಯನನ್ನು ನಿಟ್ಟಿಸುತ್ತಿದ್ದನು.

---

## ೩ನೆಯ ಪರಿಚ್ಛೇದ

ಅದೇ ದಿನದ ಹಗಲು ಇನ್ನು ಐದಾರು ಗಳಿಗೆಯಷ್ಟು ಉಳಿದಿದೆ. ಸಾಳುವ ನರಸಿಂಹನಾಯಕನು, ತನ್ನ ವಿಶ್ರಾಂತಿಭವನದಲ್ಲಿ – ವಿಚಾರ ಮುದ್ರೆಯನ್ನು ತಳೆದು – ಜೋಲುಮೈಯಿಂದ ದಿಂಬಿಗೊರಗಿ – ಕುಳಿತಿರು ವನು. ಓಲೆಯನ್ನು ಹಿಡಿದುಕೊಂಡಿದ್ದ ಬಲಗೈಯು ತೊಡೆಯಮೇಲೆ ಬಿದ್ದು ಕೊಂಡಿದೆ. ಎಡಗೈ ಬೆರಳುಗಳು ಕಾರಣವಿಲ್ಲದೆ ಎಡಗಿವಿಯ ಹಿಂಬದಿಯನ್ನು ತಿಕ್ಕುತ್ತಲಿವೆ. ಬುದ್ಧಿಕೌಶಲವನ್ನು ಕಾಣಿಸಿಕೊಡುವಂತಹ ಅಗಲವಾದ ಹಣೆಯಲ್ಲಿ, ಹುಬ್ಬುಗಳ ಸಂಕೋಚನ-ವಿಸ್ತರಣಗಳ ಪರಿಣಾಮವು ಆಗಾಗ ಮೂಡಿ ಮರೆಯಾಗುತ್ತಲಿದೆ. ಮುಖದಲ್ಲಿ, ಒಮ್ಮೆ ವಿಚಾರನಿರ್ಣಯದ ಸಮಾಧಾನದ ಚಿಹ್ನೆ ಕಂಡರೆ. . ಇನ್ನೊಮ್ಮೆ ಅಸ್ಥಿರವಿಚಾರದ ಅಸಮಾಧಾ ನದ ಗುರುತುಗಳು ಕಾಣುವವು. ಇದ್ದುದಿದ್ದ ಹಾಗೆಯೆ ಅವನು ಕೈಯೊಳ ಗಿನ ಓಲೆಯನ್ನು ಕಣ್ಣೆದುರು ತಂದುಕೊಂಡ. ಮತ್ತೊಂದು ಬಾರಿ ಮೊದಲಿನಿಂದ ಅದನ್ನು ಓದಲು ತೊಡಗಿದ.

"ಹಿರಿಯರ ಚರಣಸನ್ನಿಧಿಗೆ ತುಳುವ ನರಸಿಂಹನ ಸವಿನಯ ವಂದನೆಗಳು, ತರುವಾಯ .....

ವಿರೂಪಾಕ್ಷರಾಯರ ಕೊಲೆಯ ವಿಷಯದಲ್ಲಿ, ಇತ್ತಣಭಾಗದ ಜನರಲ್ಲಿ ಅನೇಕ ಬಗೆಯ ತರ್ಕವಿತರ್ಕಗಳು ನಡೆಯುತ್ತಲಿವೆ. ದಿನ ದಿನಕ್ಕೂ ಅಲ್ಲದ ಸಲ್ಲದ ಹೊಸ ಸುದ್ದಿಗಳು ಹಬ್ಬಿಹರಡಿ, ಜನರ ಮನಸ್ಸನ್ನು ಪ್ರಕ್ಷುಬ್ಧಗೊಳಿಸುತ್ತಲಿವೆ. ತೈಲಂಗಣದ ಪಾಳೆಯಗಾರರಲ್ಲಿ ಕೆಲವರೂ ಉತ್ಕಲದ ಗಜಪತಿಯ ಪಕ್ಷದವರೂ ಇದೆ ಪ್ರಸಂಗವನ್ನು ಸಾಧಿಸಿ, ತಮ್ಮ ಬೇಳೆಬೇಯಿಸಿಕೊಳ್ಳುವ ಹವಣಿಕೆಯಲ್ಲಿ ಇದ್ದಾರೆಂದು ತೋರುತ್ತದೆ. ಇಲ್ಲಿಯಂತೆಯೆ ಸಾಮ್ರಾಜ್ಯದ ಎಲ್ಲ ಕಡೆಗಳಲ್ಲಿಯೂ ಆಗಿದ್ದರೆ ತೊಂದರೆಯ ಪ್ರಸಂಗವೇ! ಜನರಿಗೆಲ್ಲ ನಿಜವಾದ ಸಂಗತಿ ತಿಳಿದು, ಅವರಿಗೆ ಸಮಾಧಾನವುಂಟಾಗುವಂತೆ, ಬೇರೆಬೇರೆ ಉಪಾಯಗಳನ್ನು ಮಾಡುವುದರಲ್ಲಿ ತೊಡಗಿದ್ದೇನೆ. ಆದುದರಿಂದಲೆ ತಮ್ಮ ಸೂಚನೆಯಂತೆ ಸದ್ಯಕ್ಕೆ ಅಲ್ಲಿಗೆ ಬರಲಿಕ್ಕೆ ಅವಕಾಶವಿಲ್ಲದಂತಾಗಿದೆ.

ನಾನು ಸಂಕ್ರಮಣಕ್ಕೆ ಬಾರದೆ ಇರುವುದರಿಂದ ಕಮಲಾಂಬಿಕೆ ಏನೆಂದುಕೊಳ್ಳುವಳೋ! ಆಕೆಗೊಂದು ಬೇರೆಯಾಗಿ ಓಲೆ ಬರೆಯುವಷ್ಟೂ ನನಗೀಗ ಮನಃಸ್ವಾಸ್ಥ್ಯವಿಲ್ಲದಂತಾಗಿದೆ. ಶ್ರೀಭುವನೇಶ್ವರಿಯು ನಮ್ಮ ಕನ್ನಡ ಸಾಮ್ರಾಜ್ಯವನ್ನು ಈ ಸಂಕ್ರಾಂತಿಕಾಲದಿಂದ ಸುರಕ್ಷಿತವಾಗಿ ಪಾರಾಗಿಸಬೇಕು!"

* * * *

ತೆಲುಗು ಪ್ರದೇಶದಲ್ಲಿದ್ದ ಚಂದ್ರಗಿರಿಯ ಮಂಡಲವು ಮೊದಲಿನಿಂದಲೂ ಸಾಳುವ ನರಸಿಂಹನಾಯಕನ ಮನೆತನಕ್ಕೆ ನಡೆದುಕೊಂಡು ಬಂದಿದ್ದಿತು. ಮಲ್ಲಿಕಾರ್ಜುನ ದೊರೆಯು ತನ್ನ ಮಾಂಡಲಿಕನಾದ ಈ ನರಸಿಂಹನಾಯಕನ ಧೈರ್ಯಶೌರ್ಯಗಳನ್ನೂ ರಾಜಕಾರ್ಯಕೌಶಲವನ್ನೂ ಸಾಮ್ರಾಜ್ಯನಿಷ್ಠೆಯನ್ನೂ ಕಂಡು ಮೆಚ್ಚಿ, ಆತನನ್ನು ವಿಜಯನಗರಕ್ಕೇ ಬರಮಾಡಿಕೊಂಡನು; ಸಾಮ್ರಾಜ್ಯದ ಮುಖ್ಯ ಮಂತ್ರಿಯ ಸ್ಥಳಕ್ಕೆ ಆತನನ್ನು ನಿಯಮಿಸಿಕೊಂಡನು. ಅದು ಮೊದಲಾಗಿ ನರಸಿಂಹನಾಯಕನು ತನ್ನ ಮಂಡಲದ ಆಧಿಪತ್ಯವನ್ನು ನೋಡಿಕೊಂಡಿರುವುದಕ್ಕೆ – ತನ್ನ ತಂಗಿಯ ಗಂಡನಾದ – ತುಳುವ ಈಶ್ವರ

ನಾಯಕನನ್ನು ತನ್ನ ಪ್ರತಿನಿಧಿಯನ್ನಾಗಿ ನಿಯಮಿಸಿದ್ದನು. ಸಮಯ ದೊರೆತಾಗ ತಾನೂ ಒಂದೊಂದು ಸಲ ಅಲ್ಲಿಗೆ ಹೋಗಿ, ಪ್ರಜಾಪ್ರಮುಖರನ್ನು ಕಂಡು, ಸಾಮ್ರಾಜ್ಯಸೇವೆಯ ಕರ್ತವ್ಯನಿಷ್ಠೆಯನ್ನು ಜನರೆಲ್ಲರ ಹೃದಯದಲ್ಲಿ ತುಂಬಿ, ಮರಳಿ ವಿಜಯನಗರಕ್ಕೆ ಬರುವನು.

ಸದ್ಯಕ್ಕೆ ಚಂದ್ರಗಿರಿಯ ಆಧಿಪತ್ಯಕ್ಕೆ ಪ್ರತಿನಿಧಿಯಾಗಿರುವವನು ಮೊದಲಿದ್ದ ತುಳುವ ಈಶ್ವರನಾಯಕನ ಮಗ ನರಸನಾಯಕನೆಂಬವನು. ನರಸಿಂಹನಾಯಕನ ಸ್ವಂತದ ತಂಗಿಯಾದ ಬುಕ್ಕಮ್ಮನ ಹೊಟ್ಟೆಯಲ್ಲಿ ಹುಟ್ಟಿದವನು. ಇದೀಗ ನರಸಿಂಹನಾಯಕನ ಕೈಯೊಳಗಿದ್ದ ಓಲೆ ಇದೇ ತುಳುವ ನರಸಿಂಹನದು; ಚಂದ್ರಗಿರಿಯಿಂದ ಬಂದಿದ್ದಿತು.

ರಾಜಧಾನಿಯಿಂದ ದೂರದಲ್ಲಿದ್ದ ಸಾಮ್ರಾಜ್ಯದ ಬೇರೆ ಬೇರೆ ಪ್ರದೇಶಗಳ ರಾಜಪ್ರತಿನಿಧಿಗಳ ಕಡೆಯಿಂದ – ಈ ಮೊದಲಿನ ಎರಡುಮೂರು ದಿನಗಳಲ್ಲಿ – ಇದೇ ಬಗೆಯ ನಾಲ್ಕಾರು ಓಲೆಗಳು ಬಂದಿದ್ದುವು. ಇಂದು ತನ್ನ ಸ್ವಂತದ ಮಂಡಲವಾದ ಚಂದ್ರಗಿರಿಯ ಕಡೆಯಿಂದಲೂ ಅಂತಹದೆ ಓಲೆ ಬಂದುದರಿಂದ, ಮೊದಲೆ ಅಸ್ಥಿರವಾಗಿದ್ದ ನರಸಿಂಹನಾಯಕನ ಮನಸ್ಸು ಇನ್ನಿಷ್ಟು ಅಸ್ಥಿರತೆಯನ್ನು ಹೊಂದಿದ್ದಿತು. ಓಲೆಯನ್ನು ಮತ್ತೊಂದು ಸಲ ಓದಿಯಾದ ಮೇಲೆ, ಮರಳಿ ಮೊದಲಿನಂತೆಯೆ ಕುಳಿತು ಎಣಿಕೆ ಹಾಕುವುದಕ್ಕೆ ಮೊದಲುಮಾಡಿದ.

"ಸದ್ಯಕ್ಕೆ ಸಾಮ್ರಾಜ್ಯವು ದೇವರಿಲ್ಲದ ಗುಡಿಯಂತಾಗಿದೆ. ಬೇಗನೆ ಯಾರನ್ನಾದರೂ ಸಿಂಹಾಸನದಲ್ಲಿ ಕುಳ್ಳಿರಿಸಿದ ಹೊರತು ಬೇರೆ ಗತಿಯಿಲ್ಲ. ರಾಜಶೇಖರನಂತೂ ಒಪ್ಪಿಕೊಳ್ಳಲೊಲ್ಲ. ಇನ್ನೇನು! ಪೆದ್ದಣ್ಣನಿದ್ದಾನೆ; ದೊರೆಯಾಗಬೇಕೆಂಬ ಮನಸ್ಸೂ ಆತನಿಗೆ ಇಲ್ಲದೆ ಇಲ್ಲ. ರಾಜಶೇಖರನನ್ನು ಬಿಟ್ಟರೆ ಅವನೊಬ್ಬನೆ ಸಿಂಹಾಸನವನ್ನು ಏರುವದಕ್ಕೆ ಅಧಿಕಾರಿ. ಅವನನ್ನೇ ದೊರೆಯನ್ನಾಗಿಮಾಡಿ, ಸಾಮ್ರಾಜ್ಯದ ಪಟ್ಟಾಭಿಷೇಕಸಮಾರಂಭವನ್ನು ಕೂಡಲೆ ನೆರವೇರಿಸಿ ಬಿಡಬೇಕೆಂದರೆ, ಈ ಪೌಷ್ಯಮಾಸವೊಂದು ಕಾಲಿಗೆ ತೊಡಕಾಗಿ ನಿಂತಿದೆ. ಮಾಘಮಾಸವು ಮುಖತೋರಿಸಿದ ದಿನವೇ ಹೇಗಾದರೂ ಮಾಡಿ ಆ ಸಮಾರಂಭವನ್ನು ಜರುಗಿಸಿಬಿಡಬಹುದು; ಆದರೆ ಅದಕ್ಕೆ ಇನ್ನೂ ಹದಿನಾರು ಹದಿನೇಳು ದಿನಗಳ ಕಾಲ ಹೋಗಬೇಕಾಗಿದೆ. ಅಷ್ಟರಲ್ಲಿಯೆ ನಾನು

ಸಾಮ್ರಾಜ್ಯದ ಪ್ರದೇಶವನ್ನೆಲ್ಲ ಸುತ್ತಿಕೊಂಡು ಬರಬೇಕೆಂದರೆ, ಅದೂ ಸ್ವಲ್ಪ ಗಂಡಾಂತರದ ಪ್ರಸಂಗವೇ! ಗತಿಸಿದ ವಿರೂಪಾಕ್ಷರಾಯನ ಪಕ್ಷದ ಜನರು ರಾಜಧಾನಿಯಲ್ಲಿ ಕೆಲವರಾದರೂ ಇದ್ದೆ ಇದ್ದಾರೆ. ಅವರೆಲ್ಲರ ಅಸಂತುಷ್ಟ ಮನಗಳು ಅವರನ್ನು ಸುಮ್ಮನೆ ಕುಳಿತಿರುವುದಕ್ಕೆ ಕೊಡುವುವೇ? ಇನ್ನೊಂದು ವಿಶೇಷ ವಿಷಯವೆಂದರೆ: ಮುಖ್ಯ ದಳಪತಿ ದೇವಣ್ಣನಾಯಕರದೂ ನೆಲೆ ನನಗೆ ಹತ್ತದಂತಾಗಿದೆ. ಹೀಗಿರುವಾಗ ಈಗ ವಿಜಯನಗರವನ್ನು ಬಿಟ್ಟು ಹೋಗುವ ಬಗೆ ಹೇಗೆ? ಸಾಮ್ರಾಜ್ಯದ ಎಲ್ಲ ಕುತ್ತಗಳಿಗೂ ಒಂದೆ ಒಂದು ಹಿರಿಯ ಮದ್ದೆಂದರೆ, ಹೊಸದೊರೆಯ ಸಿಂಹಾಸನಾರೋಹಣದ ಸಮಾರಂಭವು! ಅದು ಆಗುವವರೆಗೆ, ಆಗುವುದು ಆಗಲೆಂದು ಗಟ್ಟಿ ಮನಸ್ಸು ಮಾಡಿ, ಇಲ್ಲಿಂದ ಕಾಲು ಕಿತ್ತದಿರುವುದೇ ಒಳ್ಳೆಯದು.......''

ಹಠಾತ್ತಾಗಿ ಕಮಲಾಂಬಿಕೆ ತಂದೆ ಕುಳಿತಿದ್ದಲ್ಲಿಗೆ ಬಂದಳು. ಆಕೆಯ ಹಜ್ಜೆಗಳ ಉಲುಹನ್ನು ಕೇಳಿ, ಹೊರಳಿ ನಿಂತಿದ್ದ ನರಸಿಂಹನಾಯಕನ ಮುಖವು – ಮಗಳ ಮೆಲುನಗೆಯ ಮುಖವನ್ನು ನೋಡಿದೊಡನೆಯೆ – ಅರಳಿದ ತಾವರೆಯ ಪ್ರಸನ್ನತೆಯನ್ನು ಪಡೆಯಿತು. ಕಣ್ಣಕದಿರುಗಳು ನೆಲೆ ನಿಂತಿದ್ದ ಚಿಂತೆಯನ್ನು ದೂರಕ್ಕೆ ಚೆಲ್ಲಿ, ಮಮತೆಯಿಂದ ಬಲಿದು ನಿಂತುಕೊಂಡುವು. ಮನದಲ್ಲಿ ಕುಣಿದಾಟ ನಡೆಯಿಸಿ, ಕರುಳನ್ನು ತೊತ್ತಳಿದುಳಿಯುತ್ತಿದ್ದ ಯೋಜನೆಯ ಸಂತಾನಗಳು ತಟ್ಟನೆ ಓಡಿಹೋಗಿಬಿಟ್ಟುವು. ಹೃದಯವು ಹಿಗ್ಗಿ ಒಲವಿನ ಹಾಡನ್ನು ಹೇಳುವುದಕ್ಕೆ ತೆರೆದ ಬಾಯಿಂದ ಕುಳಿತಿತು. ಮೈಯ ನರನರಗಳೂ ವೀಣೆಯ ತಂತಿಗಳಂತೆ ಆ ಹಾಡಿನ ಜೊತೆಗೆ ಶ್ರುತಿಯನ್ನು ಮಿಡಿಯಲು ತೊಡಗಿದುವು. ಎಂತಹ ಬುದ್ಧಿಶಾಲಿಯಾದರೇನು! ಎಷ್ಟೊಂದು ರಾಜಕಾರ್ಯತಂತ್ರಿಯಾದರೇನು! ಎಂತಹ ಧೈರ್ಯಶಾಲಿಯಾದ ರಣವೀರನಾದರೇನು! ನರಸಿಂಹನಾಯಕನು ಮಗಳಿಗೆ ತಂದೆ ಸುಳ್ಳೇನು? ತಂದೆಯಾದ ಮೇಲೆ ಮಕ್ಕಳ ಮಮತೆ ಆತನೆದೆಯಲ್ಲಿ ಇರದೆ ಇರುವುದೇನು? ಮಹರ್ಷಿಗಳೆನಿಸಿದ ಕಣ್ವರು ಸಾಕುಮಗಳಾದ ಶಕುಂತಲೆಯ ವಿಷಯದ ಪ್ರೀತಿಯಲ್ಲಿ ತಮ್ಮ ವ್ಯಕ್ತಿತ್ವವನ್ನು ಮರೆತುಬಿಡುತ್ತಿದ್ದರಂತೆ; ಎಂದಮೇಲೆ ನರಸಿಂಹನಾಯಕನು ತನ್ನ ಹೊಟ್ಟೆಯ ಮಗಳ ಮಮತೆಯಲ್ಲಿ ತನ್ನನ್ನು ತಾನು ಮರೆತರೆ ಆಶ್ಚರ್ಯವೇನು?

ನರಸಿಂಹನಾಯಕನದೊಂದು ವಿಚಿತ್ರವಾದ ಸ್ವಭಾವ; ಮಗಳ ಮುಖ ಎದುರಿಗಿದ್ದಾಗ, ಅವಳ ಹೊರತು ಬೇರೆ ಜಗತ್ತೆಲ್ಲವೂ ಆತನಿಗೆ ಶೂನ್ಯ. ಎದುರಿಗಿಲ್ಲದಿರುವಾಗ ಬರೀ ರಾಜಕಾರ್ಯದ ವಿವಿಧ ವಿಚಾರಗಳೆ ಮುಂದೆ ನಿಂತುಕೊಳ್ಳುವುವು. ಆಗ. . ತನಗೊಬ್ಬಳು ಮಗಳಿದ್ದಾಳೆಂಬ ಎಚ್ಚರವೂ ನಾಯಕನಿಗೆ ಇಲ್ಲದೆ ಹೋಗುವುದು. ಇಂದು ತುಳುವ ನರಸಿಂಹನ ಕಾಗದವನ್ನು ಓದುತ್ತಿರುವಾಗ, ಕೊನೆಯಲ್ಲಿ ಕಮಲಾಂಬಿಕೆಯ ಹೆಸರೂ ಬಂದುದರಿಂದ, ನಾಯಕನ ಮಮತೆಯ ಬಳ್ಳಿ ಕುಡಿಬಿಡುವುದಕ್ಕೆ ಹವಣಿಸುತ್ತಿದ್ದಿತು; ಅಷ್ಟರಲ್ಲಿಯೆ ರಾಜಕೀಯ ಸಂಕಟದ ಬಿರುಬಿಸಿಲು ಬಿದ್ದು ಅದನ್ನು ಮುರುಟಿಸಿ ಬಿಡುವುದರಲ್ಲಿದ್ದಿತು. ಆಗಲೆ ಕಮಲಾಂಬಿಕೆಯ ಮುಖದ ಎಳನಗೆಯ ಬೆಳುವೋಡವು ವಾತ್ಸಲ್ಯದ ನೋಟದ ಮಳೆಯನ್ನು ಕರೆಯುತ್ತ ಬರಲು, ಮುರುಟಲಿದ್ದ ಆ ಬಳ್ಳಿ ಒಮ್ಮೆಲೆ ಹಬ್ಬಿ ಹರಡಿ ನನೆಕೊನೆಯೇರಿತು. ನನೆಯು ಅರಳಿ ನಗೆಯರಳಾಗಿ ಕಣ್ಣು-ತುಟಿಗಳಲ್ಲಿ ಕಾಣಿಸಿಕೊಂಡಿತು.

ನರಸಿಂಹನಾಯಕನು ಕಮಲಾಂಬಿಕೆಯನ್ನು ಕರೆದು ಬಳಿಯಲ್ಲಿ ಕುಳ್ಳಿರಿಸಿಕೊಂಡನು. ನೋಡಿ ನೋಡಿ ತಣಿಯದ ಸ್ಥಿರದೃಷ್ಟಿಗಳನ್ನು ಆಕೆಯ ಮೊಗದಲ್ಲಿ ನಿಲ್ಲಿಸಿ, ಸ್ನೇಹಹಸ್ತದಿಂದ ಬೆನ್ನನ್ನು ತಡಹುತ್ತ ಸಲುಗೆಯ ಧ್ವನಿಯಲ್ಲಿ ಕೇಳಿದನು.

"ಇದೇನಮ್ಮಾ? ಒಮ್ಮೆಲೆ ಬಂದು ಬಿಟ್ಟಿದ್ದೀಯೇ"

"ಮತ್ತೇನು? ಮೊದಲೇ ನಿಮ್ಮ ಅಪ್ಪಣೆ ಪಡೆದುಕೊಂಡು ಬರಬೇಕಾಗಿತ್ತೇನು? ಅದನ್ನೂ ಮಾಡಬಹುದಿತ್ತು; ಆದರೆ ಈಗ ನೀವೇನೂ ದಂಡನಾಯಕರ ಅಧಿಕಾರದಲ್ಲಿ ಇಲ್ಲವಲ್ಲ?"

ಕಮಲಾಂಬಿಕೆಯ ನಗೆಮಾತಿಗೆ ನಾಯಕನೂ ನಗೆಯಾಡಿದ.

"ನಾನು ಯಾವ ಅಧಿಕಾರದಲ್ಲಿದ್ದರೇನು? ನಿನಗಿರುವ ಅಧಿಕಾರದ ಎದುರು ಅವೆಲ್ಲ ತಲೆಬಾಗಿ ನಿಲ್ಲಲೆಬೇಕು. ಹೋಗಲಿ ಬಿಡು! ಕಮಲಾ! ಇಂದು ನಿನ್ನ ಮುಖದಲ್ಲಿ. . ಇದೇನು ಇಷ್ಟೊಂದು ಆತುರಭಾವ ನಿಂತುಕೊಂಡಿದೆ?"

"ಎಲ್ಲಿಂದಲೋ ಕುದುರೆಯಾಳು ಬಂದು ಹೋದನಂತೆ, ಅಹುದೇನು?"

"ಅಹುದು!"

"ಚಂದ್ರಗಿರಿಯಿಂದ ಬಂದಿದ್ದನೇನು?"

"ಉಂ‥ ಹೂಂ‥ ಅಹುದು!"

"ಓಲೆಯೇನೂ ಬಂದಿಲ್ಲವೇ? ಅಲ್ಲಿಯ ವರ್ತಮಾನಗಳೇನೇನು?"

"ಬಂದಿದೆ ಓಲೆ! ಅಲ್ಲಿ ತುಂಬ ಮಹತ್ತ್ವದ ಕೆಲಸಗಳಂತೆ ಕಮಲಾ! ಅದಕ್ಕಾಗಿಯೆ ನರಸಿಂಹ–ಸಂಕ್ರಮಣಕ್ಕೆ ಬರಲಿಕ್ಕಾಗುವುದಿಲ್ಲವೆಂದು ಬರೆದಿದ್ದಾನೆ. ಇದು ನೋಡು ಓಲೆ! ನಿನಗೊಂದು ಪತ್ರಬರೆಯುವಷ್ಟೂ ಆತನಿಗೀಗ ಅವಕಾಶವಿಲ್ಲವಂತೆ ನೋಡು!"

ಕಮಲಾಂಬಿಕೆಯ ನಗೆಮುಗುಳು ತಟ್ಟನೆ ಮರೆಯಾಯಿತು. ನಿರಾಶೆಯ ಭಾವದಲ್ಲಿಯೆ ಅವಳು ಓಲೆಯನ್ನು ತೆಗೆದುಕೊಂಡು, ಒಲ್ಲದಮನದಿಂದ ಓದಲು ತೊಡಗಿದಳು. ನರಸಿಂಹನಾಯಕನು ಕಮಲಾಂಬಿಕೆಯ ಈ ನಿರಾಶೆಯ ಜಾಡ್ಯವನ್ನು ಹೇಗೆ ಹೊಡೆದೋಡಿಸಬೇಕೆಂದು ಉಪಾಯಯೋಚನೆಗೆ ತೊಡಗಿದ. ಆಕೆಯು ಓಲೆಯನ್ನೋದಿ ಮುಗಿಸಿ, ನಿಟ್ಟುಸಿರಿಟ್ಟು, ಕರುಣೆಯ ನೋಟದಿಂದ ನೆಲವನ್ನು ನೋಡಲು ತೊಡಗಿದಳು. ನರಸಿಂಹನಾಯಕನು ಸಹಜವಾದ ಧ್ವನಿಯಲ್ಲಿ ಹೇಳಿದ.

"ಬೇಗನೆ ನಾವೆಲ್ಲರೂ ಚಂದ್ರಗಿರಿಗೆ ಹೋಗಬೇಕಾಗಿದೆ ಕಮಲಾ!"

ಮಿಂಚಿನ ಚಾಪಲ್ಯವನ್ನು ತಳೆದು ಕಮಲಾಂಬಿಕೆ ಕೇಳಿದಳು.

"ಏನು? ಚಂದ್ರಗಿರಿಗೆ ಹೋಗಬೇಕಾಗಿದೆ? ಎಂದು? ಯಾವಾಗ?"

"ಇನ್ನು ಇಪ್ಪತ್ತು ದಿನಗಳಾದಮೇಲೆ!"

ಮತ್ತೆ ಕಮಲಾಂಬಿಕೆಯ ಆತುರ ಉಡುಗಿತು. ಎಳೆದೆಳೆದು ಮಾತನಾಡಿದಳು.

"ಇ‥ನ್ನೂ‥ ಇ‥ಪ್ಪ‥ತ್ತು ದಿ‥ನ‥ಗಳೇ!"

"ಅಹುದಮ್ಮಾ! ಪಟ್ಟಾಭಿಷೇಕದ ಸಮಾರಂಭ ನೋಡುವುದು ನಿನಗೆ ಬೇಕಾಗಿಲ್ಲವೆ?"

ಏನು ಮಾತನಾಡಬೇಕೆಂಬುದು ತಿಳಿಯದಾಯಿತು; ಗರಹೊಡೆದವರ ಹಾಗೆ ಕಮಲಾಂಬಿಕೆ ದಿಮ್ಮನೆ ಕುಳಿತುಬಿಟ್ಟಳು. ಮಾತಿನ ಸಂದರ್ಭವನ್ನು ಬದಲಿಸಬೇಕೆಂದು ನರಸಿಂಹನಾಯಕನಿಗೆನಿಸಿತು; ಒಮ್ಮೆಲೆ ಕೂಗಿ ಕರೆದ.

"ಕಮಲಾ!"

"ಏನು ಅಪ್ಪಾಜಿ?"

"ಈ ವೇಳೆಯಲ್ಲಿ·· ಹೇಳಬಹುದಾದ ರಾಗ··ಗಳಲ್ಲಿ··ಎಲ್ಲಕ್ಕೂ ಇಂಪಾದ ರಾಗವು ಯಾವುದು?"

ಸಂಗೀತದ ಮಾತು ಹೊರಟೊಡನೆಯೆ ಕಮಲಾಂಬಿಕೆಯ ಮನಸ್ಸು ಆದರ ಕಡೆಗೆ ತಿರುಗಿತು. ಅವಳನ್ನು ಹಿಡಿದಿದ್ದ ಸಿರಾಶೆಯ ಗರಕ್ಕೆ ಮಂತ್ರವನ್ನೂದಿ ಬಿಟ್ಟಂತಾಯಿತು. ಮತ್ತೆ ಮೊದಲಿನ ಕಮಲಾಂಬಿಕೆಯೆ ಆಗಿ ಮರುಸುಡಿಗೊಟ್ಟಳು.

"ಈ ವೇಳೆಯ ರಾಗಗಳಲ್ಲಿ ನನಗೆ ಹೆಚ್ಚಾಗಿ ಮೆಚ್ಚುಗೆಯಾದುವುಗಳೆಂದರೆ ಹಿಂದೋಳರಾಗವೊಂದು! ತೋಡಿರಾಗವೊಂದು!"

"ಹೀಗೆಯೇನು?·· ನೋಡು·· ಕಮಲಾ! ಇಂದು ಅದೇನೋ ನಿನ್ನ ಬಾಯಿಂದ ಆ ರಾಗಗಳನ್ನು ಕೇಳಬೇಕೆಂದು ಆಶೆಯುಂಟಾಗಿದೆಯಲ್ಲ!"

"ಸರಿ! ಅದೇನು ದೊಡ್ಡ ವಿಷಯ ಅಪ್ಪಾಜೀ! ಸಿಂಗಮ್ಮನಿಗೆ ಹೇಳಿ ತಂಬೂರಿ ತೆಗೆಯಿಸಿಕೊಂಡು ಬರಲೇ?"

"ನೀನೆ ಏತಕ್ಕಾಗಿ ಹೋಗಬೇಕು? ಇನ್ನಾರನ್ನಾದರೂ ಕಳುಹಿಸಿದರೆ ಆಗದೇ? ಚೆನ್ನಯ್ಯಾ! ಚೆನ್ನಯ್ಯಾ!"

ಕೂಗು ಕೇಳಿ ಚೆನ್ನಯ್ಯನು ಒಳಕ್ಕೆ ಬಂದು, ಅಪ್ಪಣೆಯೇನೆಂದು ಕೇಳಿದ. ನರಸಿಂಹನಾಯಕನು ಹೇಳಿದ.

"ಹೋಗು! ಸಿಂಗಮ್ಮನಿಗೆ ಹೇಳು– ತಂಬೂರಿಯನ್ನು ತೆಗೆದುಕೊಂಡು ಇಲ್ಲಿಗೆ ಬರಲಿಕ್ಕೆ ಹೇಳಿದ್ದಾರೆ– ಎಂದು."

ಚೆನ್ನಯ್ಯ ತಲೆಬಾಗಿ ಹೊರಟುಬಿಟ್ಟನು. ಕಮಲಾಂಬಿಕೆಯ ಮುಖವು ಮತ್ತೆ ದುಗುಡದ ತೆಳುದೆರೆಯನ್ನು ಹೊದ್ದುಕೊಂಡಂತೆ ಕಂಡಿತು. ಇನ್ನೇನನಾದರೂ ಮಾತನಾಡಿ ಅದನ್ನು ಮರೆಯಿಸಬೇಕೆಂದಿರುವಷ್ಟರಲ್ಲಿಯೆ ಕಮಲಾಂಬಿಕೆ ಮಾತಿಗೆ ಮೊದಲುಮಾಡಿದಳು.

"ಅಪ್ಪಾಜೀ! ಚಂದ್ರಗಿರಿಗೆ····"

ನರಸಿಂಹನಾಯಕ ಅವಳ ಮಾತನ್ನು ಅಲ್ಲಿಯೆ ತಡೆದು ಕೇಳಿದ.

"ಅಲ್ಲ·· ಇದು ನೋಡು·· ಇನ್ನೊಂದು ಮಾತು ಕಮಲಾ! ಈಗ ನಿನಗೆ ಗೊತ್ತಾಗಿರುವ ರಾಗಗಳು ಎಷ್ಟು?"

"ಸುಮಾರು ಮುನ್ನೂರಕ್ಕೆ ಹೆಚ್ಚಾಗಬಹುದು! ಅಪ್ಪಾಜೀ! ಸಂಕ್ರ

ಮಣದ ಹಬ್ಬಕ್ಕೆ. . . . ”

“ಕಮಲಾ! ಇದು ಕೇಳು!”

“ಏನು ಅಪ್ಪಾಜಿ?”

“ಆ ಮಹಮ್ಮದಿಯ ಸಂಗೀತಗಾರ ಮುಹಬ್ಬತ್ ಖಾನರಿದ್ದಾರಲ್ಲಾ ನಿನಗೆ ಅವರ ಸಂಗೀತ ಹೆಚ್ಚು ರುಚಿಸುವುದೋ? ಏನು· ·ನಮ್ಮ ವೀರೇಶ್ವರ ಶಾಸ್ತ್ರಿಗಳ ಸಂಗೀತವೇ ಹೆಚ್ಚು ರುಚಿಯೆನಿಸುವುದೋ?”

“ಇಬ್ಬರ ರೀತಿಗಳಲ್ಲಿಯೂ ಒಂದೊಂದು ಸೊಗಸಿದೆ ಅಪ್ಪಾಜೀ! ಇಬ್ಬರ ಬಾಯಿಂದಲೂ ಒಂದೆ ರಾಗವನ್ನು ಹೇಳಿಸಿ ಕೇಳಿ ಬೇಕಾದರೆ ನೀವು! ರಾಗಕ್ಕೆ ಹಚ್ಚಬೇಕಾಗಿದ್ದ ಸ್ವರಮಾಲಿಕೆಯೆಲ್ಲವೂ ಒಂದೆ; ಆದರೇನು! ಇಬ್ಬರೂ ಬೇರೆ ಬೇರೆ ರಾಗಗಳನ್ನು ಹೇಳಿದರೆಂದು ಎನಿಸುವಂತಿರುವುದು. ಒಬ್ಬರದು ಸಕ್ಕರೆಯ ಪಾಕ; ಇನ್ನೊಬ್ಬರದು ದ್ರಾಕ್ಷೆಯ ರಸ! ಸವಿಗಾರರಿಗೆ ಎರಡೂ ಬೇಕು! ಎರಡರಲ್ಲಿಯೂ ಸ್ವಲ್ಪ ಸ್ವಲ್ಪ ಭಿನ್ನತೆ ಕಾಣಬಹುದಾದರೂ ‘ಇದು ಒಳ್ಳೆಯದು, ಇದು ಕೆಟ್ಟುದು.’ ಎಂದು ಹೇಳಲಿಕ್ಕೆ ಬರುವಂತಿಲ್ಲ. ಮುಹಬ್ಬತ್ ಖಾನರ ಸಾರಂಗಿಣಿಯು ನಮ್ಮನ್ನು ಒಮ್ಮೆಲೆ ಆನಂದ-ಲೋಕಕ್ಕೆ ಎತ್ತಿಕೊಂಡು ಹೋಗುವುದು. ಶಾಸ್ತ್ರಿಗಳ ವೀಣೆಯು ಒಂದೊಂದೆ ಮೆಟ್ಟಿಲನ್ನೇರಿಸುತ್ತ ಅಲ್ಲಲ್ಲಿಯ ಸೊಗಸಿನ ನಾದಪ್ರದೇಶಗಳಲ್ಲಿ ಸುಳಿದಾಡಿಸುತ್ತ, ಸಂಗೀತಾನಂದದ ವಿವಿಧರೀತಿಗಳ ಅನುಭೂತಿಯನ್ನು ಉಂಟುಮಾಡಿ ಕೊಡುತ್ತ, ಕ್ರಮವಾಗಿ ನಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುವುದು. . . . ”

ನರಸಿಂಹನಾಯಕನು ಮಗಳ ಮಾತುಗಳಿಗೆ ವೈಮನಸ್ಸುಗಳನ್ನು ಮಾರುಗೊಟ್ಟು ಕುಳಿತಿದ್ದನು. ಆಕೆಯ ಉಪನ್ಯಾಸ ಇನ್ನೂ ಮುಂದುವರಿಯಬಹುದಾಗಿದ್ದಿತು. ಅಷ್ಟರಲ್ಲಿಯೆ ಸಿಂಗಮ್ಮ ತಂಬೂರಿಯನ್ನು ತೆಗೆದುಕೊಂಡು ಬಂದು, ಕಮಲಾಂಬಿಕೆಯ ಬಳಿಯಲ್ಲಿ ಇರಿಸಿದಳು; ತಾನು ಬೀಳ್ಕೊಂಡು ಹೊರಟು ನಡೆದಳು. ಕಮಲಾಂಬಿಕೆ ಸರಿಯಾದ ಆಸನದಲ್ಲಿ ಕುಳಿತು, ತಂಬೂರಿಯನ್ನು ಕೈಗೆ ತೆಗೆದುಕೊಂಡಳು. ತಂತಿಗಳನ್ನು ಹಾ—ಗೆ ಮಿಾಟಿ ಮಿಾಟಿ ನೋಡಿ, ಕಿವಿಗಳನ್ನು ತಿರುಹಿ, ಮಣಿಗಳನ್ನು ಅತ್ತಿತ್ತ ಸರಿಸಿ, ಶ್ರುತಿಗಳನ್ನು ಸರಿಪಡಿಸಿಕೊಂಡಳು; ನಿಡಿದಾಗಿರುವ ಸೆಳೆಬೆರಳುಗಳಿಂದ ಎಡೆ

ಬಿಡದೆ ನಾಲ್ಕು ತಂತಿಗಳನ್ನೂ ಮಿಡಿಯಲು ತೊಡಗಿದಳು. ತಂಬೂರಿಯ ಅನಾರತ ನಿನಾದವು ವಿಶ್ರಾಂತಿಭವನದಲ್ಲೆಲ್ಲ ಮರುದನಿಗೊಂಡು ಮೊರೆದು, ಕಮಲಾಂಬಿಕೆಯ ಅಂತರಂಗದಲ್ಲಿ ಸುಪ್ತಭಾವದಲ್ಲಿದ್ದ ಸಂಗೀತಶಾರದೆಯನ್ನು ಏಳೆಂದು ಎಚ್ಚರಿಸಲು ತೊಡಗಿತು.

ಕಮಲಾಂಬಿಕೆಯು ನಿಧಾನವಾಗಿ ತಂಬೂರಿಯ ಶ್ರುತಿಯಲ್ಲಿ ತನ್ನ ಸ್ವರವನ್ನು ಕೂಡಿಸಲು ಮೊದಲುಮಾಡಿದಳು. ಸ್ವರದ ಬೆರಕೆ ಸರಿಯಾಯಿತೆಂದು ಎನಿಸಿದೊಡನೆಯೆ ಒಂದುಸಲ ಹಿಂದೋಲರಾಗಕ್ಕೆ ಹತ್ತುವ ಸ್ವರಗಳ ಆರೋಹಣ ಅವರೋಹಣ ಕ್ರಮವನ್ನು ಹೇಳಿ, ರಾಗಾಲಾಪನೆಗೆ ತೊಡಗಿದಳು. ಹಿಂದೋಲರಾಗವೆಂದರೆ ಮಹಾಗಂಭೀರವಾದ ರಾಗ. ಹೇಳುವವರನ್ನೂ ಕೇಳುವವರನ್ನೂ ಉಯ್ಯಾಲೆಯಲ್ಲಿರಿಸಿ ತೂಗಿದಂತೆ ಮಾಡುವಂತಹದು. ಅದರಲ್ಲಿಯೂ ಸ್ವರಲೋಪ-ಅಪಸ್ವರಗಳಿಲ್ಲದೆ, ತಂಬೂರಿಯೊಂದಿಗೆ ಒಂದಾಗಿ ಹೇಳುತ್ತಿರುವ ಕಮಲಾಂಬಿಕೆಯ ಸವಿಗೊರಲಿನಿಂದ ಹೊರಡುತ್ತಿರುವುದರಿಂದಂತೂ ಆ ರಾಗ ತನಿವಾಲಿನೊಂದಿಗೆ ಬೆರೆತ ಇನಿಜೇನಿನಂತೆ ಸವಿಯೆ ಸವಿಯಾಗಿದ್ದಿತು.

ಸಂಗೀತತರಂಗಿಣಿಯು – ಅದರಲ್ಲಿಯೂ ತನ್ನ ಮಗಳ ಮುಖದಿಂದ ಪ್ರವಹಿಸುತ್ತಲಿದ್ದ ಸಂಗೀತಸುಧಾತರಂಗಿಣಿಯು – ನಾಯಕನ ಹೃದಯವನ್ನು ಚೈತನ್ಯದಿಂದ ತುಂಬಿಬಿಟ್ಟಿತು. ಆತನ ಉಲ್ಲಸಿತ ಹೃದಯದ ಲಾಸ್ಯವನ್ನು ಅನುಸರಿಸಿ, ತೂಗುವ ತಲೆಯು ತಾಲವನ್ನು ಹಾಕಲಾರಂಭಿಸಿತು. ಆಗವನು ಮೈಯೆಲ್ಲವನ್ನೂ ಕಿವಿಯನ್ನಾಗಿಸಿ, ಕಮಲಾಂಬಿಕೆಯ ರಾಗಾಲಾಪನೆಯನ್ನು ಕೇಳುತ್ತಲಿದ್ದ.

ಇದ್ದುದಿದ್ದ ಹಾಗೆಯೆ ಪೆದ್ದರಾಯನು ಅಲ್ಲಿಗೆ ಬಂದನು. ತಾನು ಬಂದುದನ್ನು ನರಸಿಂಹನಾಯಕನಿಗೆ ತಿಳುಹುವುದಕ್ಕೆಂದು ಹೊರಟು ನಿಂತ ಚೆನ್ನಯ್ಯನನ್ನು ಸನ್ನೆಯಿಂದ ಸುಮ್ಮನಿರಿಸಿ, ವಿಶ್ರಾಂತಿಭವನದ ಬಾಗಿಲಿಂದ ಸ್ವಲ್ಪ ದೂರದಲ್ಲಿ ನಿಂತನು; ನಿಂತು ಕಮಲಾಂಬಿಕೆಯ ಸಂಗೀತಕ್ಕೆ ಕಿವಿಗಳೆರಡನ್ನೂ ಕೊಟ್ಟನು. ಒಂದುವರೆ ಗಳಿಗೆ ಕಳೆದುಹೋದರೂ ಒಂದೆ ಒಂದು ಹಿಂದೋಲ ರಾಗವು ಮುಗಿಯಲೊಲ್ಲದು. ಉಸಿರುಸಿರಿಗೂ ಹೊಸ ಹೊಸ ಪರಿಯ ಕುಸುರುಗಳು; ಹೊಸ ಹೊಸ ರೀತಿಯ ತಾನಗಳು. ಮೈಮರೆತು

ಹೋದ ಪೆದ್ದರಾಯನು, ತನಗೆ ತಿಳಿಯದಂತೆಯೆ ಒಂದೊಂದೆ ಅಡಿಯನ್ನು ಮುಂದೆ ಇಡುತ್ತ, ಬಾಗಿಲಿಗೆ ತೀರ ಹತ್ತಿರದಲ್ಲಿ ಯಾವಾಗ ಬಂದು ನಿಂತು ಕೊಂಡಿದ್ದನೇನೋ! ಅವನು ಅಲ್ಲಿ ಬಂದು ನಿಂತುದು ಆ ತಂದೆ-ಮಗಳು ಇಬ್ಬ ರಲ್ಲಿ ಯಾರ ಲಕ್ಷ್ಯಕ್ಕೂ ಬಂದಿರಲಿಲ್ಲ. ಇಬ್ಬರೂ ಸಂಗೀತಶರಧಿಯಲ್ಲಿ ಮುಳುಗಿಮುಳುಗಿ ಏಳಾಯುತ್ತಲಿದ್ದರು. ಕಮಲಾಂಬಿಕೆಯ ಕಿವಿಯಲ್ಲಿ ಕುಣಿಯುತ್ತಿದ್ದ ಅವ್ಯಕ್ತಸ್ವರಗಳನ್ನು ಆಕೆಯ ಕಂಠವು ವ್ಯಕ್ತಪಡಿಸುವುದು. ಅವಳ ತಂದೆಯು ತನ್ನೆಲ್ಲ ಇಂದ್ರಿಯಗಳ ಶಕ್ತಿಯನ್ನೂ ಕಿವಿಯಲ್ಲಿ ಒಟ್ಟು ಗೂಡಿಸಿ, ಆ ವ್ಯಕ್ತಸ್ವರಗಳಿಗೆ ಮಾರುಗೊಟ್ಟು ಕುಳಿತಿದ್ದ.

ಮರೆಯಲ್ಲಿ ನಿಂತಿದ್ದಾಗ ಪೆದ್ದರಾಯನ ಕಿವಿಗಳಷ್ಟೆ ಜಾಗ್ರತವಾಗಿ ದ್ದುವು. ಈಗ ಬಾಗಿಲೆದುರು ಬಂದು ನಿಂತೊಡನೆಯೆ ಆತನ ಕಣ್ಣುಗಳೂ ಎಚ್ಚತ್ತು ಕೆಲಸಮಾಡಲು ತೊಡಗಿದುವು. ಅವುಗಳ ಈಗಿನ ಕೆಲಸವೆಂದರೆ, ಸಂಗೀತದಲ್ಲಿ ತಲ್ಲೀನಳಾಗಿ ಕುಳಿತಿದ್ದ ಕಮಲಾಂಬಿಕೆಯ ಅಂಗಾಂಗಗಳಲ್ಲಿ, ತಮ್ಮ ದೃಷ್ಟಿಶಲ್ಯವನ್ನು ಚುಚ್ಚಿ ಚುಚ್ಚಿ ತೆಗೆಯುವುದು; ಇನ್ನೇನೂ ಇಲ್ಲ. ಜಗತ್ತಿನಲ್ಲಿ ಈ ದೃಷ್ಟಿಶಲ್ಯಗಳದೊಂದು ವೈಶಿಷ್ಟ್ಯವೇನೆಂದರೆ, ಎದುರಾಳಿ ಸಮ್ಮುಖನಾಗಿರುವಾಗ ಮಾತ್ರ ಇವುಗಳ ಏಟಿನ ಪರಿಣಾಮವು ಆತನಿಗೆ ಆಗುವುದು. ವಿಮುಖನಾಗಿರುವಾಗ ಇಲ್ಲವೆ ಅಂತರ್ಮುಖನಾಗಿರುವಾಗ ಈ ದೃಷ್ಟಿಶಲ್ಯಗಳು ಎದುರಾಳಿಯದೊಂದು ನವಿರನ್ನೂ ಅಲುಗಿಸಲಾರವು.

ಪೆದ್ದರಾಯನು ರೆಪ್ಪೆಕದಲಿಸದೆ ನೋಡುತ್ತ ನಿಂತಿದ್ದ. ಅರಗಿನ ಬಣ್ಣದ ಹೊಚ್ಚಹೊಸತಾದ ತಂಬೂರಿಯನ್ನು, ಕಮಲಾಂಬಿಕೆ—ತನ್ನ ಮೈಯ ಆಧಾರ ದಿಂದ—ಮುಂದೆ ನಿಲ್ಲಿಸಿಕೊಂಡಿದ್ದಾಳೆ; ನಸುವೆ ಎಡಕ್ಕೆ ಕೊಂಕಿದ ತಲೆ—ಎಡದ ಹೆಗಲಮೇಲೆ ಹಾಯ್ದುಹೋಗಿದ್ದ — ತಂಬೂರಿಯ ದಂಡಿಗೆಗೆ ಎಡದ ಕಿವಿ ಯನ್ನು ಆನಿಸಿ ನಿಂತಿದೆ. ಸಂಗೀತದ ತನ್ಮಯತೆಯಲ್ಲಿ ಆಕೆಯ ಅರಳುಗಣ್ಣು ಗಳು ಒಮ್ಮೆ ಅರೆಗಣ್ಣು, ಇನ್ನು ಒಮ್ಮೆ ಮುಗಿದ ಕಣ್ಣು ಆಗುತ್ತಲಿವೆ. ಸುಳಿಗುರುಳಿನಿಂದ ಸುತ್ತಿಕೊಂಡು ಇದ್ದ ಹೊನ್ನಬಣ್ಣದ ಹಣೆಯ ಮಧ್ಯದ ಬೊಟ್ಟು, ಆಕೆಯ ಚೆಲುವಿಕೆಯ ಪೂರ್ಣತೆಯನ್ನು ಸಾರಿಹೇಳುತ್ತಲಿದೆ. ಮೆಲ್ಲಗೆ ಒಲೆದಾಡುತ್ತಿದ್ದ ಮೈಯೊಂದಿಗೆ ಕೆಳಗಿವಿಯ ನೀಲರತ್ನದ ಲೋಲಕ ಗಳು ತೂಗಾಡಿ, ತುಂಬುಗೆನ್ನೆಯ ಸೊಗಸನ್ನು ಇಮ್ಮಡಿಗೊಳಿಸುತ್ತಲಿವೆ.

ಬಿಟ್ಟ ಮುಡಿಯು ನಡುಬೆನ್ನಿನೊಡನೆ ಕೆಳಕ್ಕಿಳಿದು, ಅರಳುಮಲ್ಲಿಗೆಯ ಜೊಲ್ಲೆಯದಿಂದ ಕೂಡಿ, ಹಾಸಿದ್ದ ರತ್ನಗಂಬಳಿಯಮೇಲೆ ಗೇಣುದ್ದಕ್ಕೆ ಬಿದ್ದುಕೊಂಡಿದೆ. ಹಾಡುವುದಕ್ಕೆಂದು ನಸುವೆ ತೆರೆದ ಚೆಂದುಟಿಯ ಬಾಯಿ, ಅರಳಿದ ಗುಲಾಬಿಯ ಬೆಡಗನ್ನು ತೋರಿಸುತ್ತಲಿದೆ.

ಕಮಲಾಂಬಿಕೆಯು ಆಗ ಉಟ್ಟದೆಂದರೆ ಚಿನ್ನದ ಚುಕ್ಕಿಗಳುಳ್ಳ ಮುಗಿಲು ಬಣ್ಣದ ರೇಷ್ಮೆಯ ಸೀರೆ; ತೊಟ್ಟುದು ಕಿರುಮುತ್ತು ಕೂಡಿದ ಜರಿಯಂಚಿನ ಕುಪ್ಪಸ; ತಂಬೂರಿಯ ತಂತಿಗಳನ್ನು ಮೀಟುತ್ತಲಿದ್ದ ಬಲಗೈಯ ರತ್ನಕಂಕಣಗಳ ಕಾಂತಿ, ಒಪ್ಪಹಾಕಿದ್ದ ತಂಬೂರಿಯ ಕಾಯ ಬಣ್ಣದಲ್ಲಿ ಮರುಬೆಳಕನ್ನು ಪಡೆದಿದ್ದಿತು. ಸಂಗೀತದ ವೈಮರೆವಿನಲ್ಲಿ ಹಾಗೆ ಹೀಗೆ ಸರಿದಾಡಿ ಹೋಗಿದ್ದ ಎದೆಯ ಸೆರಗಿನಲ್ಲಿ, ಆಕೆಯ ತಾರುಣ್ಯದ ಪೂರ್ಣತೆಯ ಕುರುಹು – ಕಂಡೂ ಕಾಣದಂತೆ – ಹೊರಕ್ಕೆ ಹಣೆಯಿಕ್ಕುತ್ತಿದ್ದಿತು. ಪೆದ್ದರಾಯನಿಗೆ ನರಸಿಂಹನಾಯಕನ ವಿಶ್ರಾಂತಿಭವನವು ಗಂಧರ್ವಲೋಕವೆಂದು ತೋರಿತು. ಹಾಡುತ್ತ ಕುಳಿತಿದ್ದ ಕಮಲಾಂಬಿಕೆಯು ಯಾವಳಾದರೂ ಗಂಧರ್ವಕನ್ನಿಕೆಯಿರಬಹುದೆಂದು ಆಭಾಸವಾಯಿತು.

ಹಿಂದೋಳರಾಗದ ಆಲಾಪನೆ ಒಮ್ಮೆ ಕೊನೆಗೊಂಡಿತು. ತಂದೆ ಮಗಳು ಇಬ್ಬರೂ ಮತ್ತೆ ಈ ಲೋಕಕ್ಕೆ ಇಳಿದುಬಂದರು. ಸಂಗೀತಮೂರ್ಛೆಯಿಂದ ಎಚ್ಚತ್ತ ನರಸಿಂಹನಾಯಕನು ಸಹಜವಾಗಿಯೆ ಪಕ್ಕಕ್ಕೆ ತಿರುಗಿ ನೋಡಿದ. ಬಾಗಿಲಲ್ಲಿ ಪೆದ್ದರಾಯ ನಿಂತುದನ್ನು ಕಂಡ. ಹೆದೆಯು ಹರಿದ ಬಿಲ್ಲಿನಂತೆ ಒಮ್ಮೆಲೆ ಮೇಲಕ್ಕೆ ಎದ್ದುನಿಂತು, ಆತುರದ ಧ್ವನಿಯಲ್ಲಿ ಕೇಳಿದ.

" ಇದೇನು ! ಪೆದ್ದರಾಯರು ಬಂದಿದ್ದಾರಲ್ಲ ! ಯಾವಾಗ ಬರುವುದಾಯಿತು ? ಹಾಗೆಯೇ ನಿಂತಿದ್ದೀರಲ್ಲ ! ಒಳಕ್ಕೆ ಬರಬಾರದೇ ನೀವು ? ಏನು ಚೆನ್ನಯ್ಯಾ ! ಇವರು ಬಂದುದನ್ನು ನನಗೆ ಕೂಡಲೆ ಹೇಳಬಾರದೇ ? "

ತಾನಿರುವುದು ಭೂಲೋಕವೇ ಅಹುದೆಂಬುದರ ಅರಿವು ಪೆದ್ದರಾಯನಿಗೂ ಬೇಗನೆ ಉಂಟಾಯಿತು. ಒಳಕ್ಕೆ ಅಡಿಯಿಡುತ್ತಿರುವಾಗಲೆ ಅವನು ಹೇಳಿದ.

" ಇದೇ ಈಗ ತಾನೆ ಬಂದೆ ನಾಯಕರೆ "

'ಇಂತಹ ದೊಡ್ಡ ಮನುಷ್ಯರೂ ಎಷ್ಟೊಂದು ಸುಳ್ಳು ಮಾತನಾಡು-

ತ್ತಾರಲ್ಲಾ ! ' ಎಂದೋ ಏನೋ ಚೆನ್ನಯ್ಯನ ಮುಖದಲ್ಲಿ ಕೊಂಕಿನ ಕಿರು-ನಗೆ ಮೂಡಿಕೊಂಡಿತು. ಆಗ ಅವನು ಇದ್ದಮಾತನ್ನು ಇದ್ದಂತೆಯೆ ಹೇಳಿದ್ದರೆ ಪೆದ್ದರಾಯನಿಗೆ ಸಮಾಧಾನವಾಗುತ್ತಿದ್ದಿತೋ ಅಸಮಾಧಾನವಾಗುತ್ತಿದ್ದಿತೋ ! ಬಗೆಗೆ ನಿಲುಕದ ವಿಷಯವಿದು.

ನರಸಿಂಹನಾಯಕನು ಪೆದ್ದರಾಯನ ಕೈಹಿಡಿದು ತಾನು ಕುಳಿತಿದ್ದ ಆಸನದಲ್ಲಿಯೆ ಕುಳ್ಳಿರಿಸಿದನು; ತಾನೂ ಬಳಿಯಲ್ಲಿದ್ದ ಇನ್ನೊಂದು ಆಸನದಲ್ಲಿ ಕುಳಿತುಕೊಂಡು, ಚೆನ್ನಯ್ಯನನ್ನು ಕರೆದು ಹೇಳಿದನು.

" ಚೆನ್ನಯ್ಯಾ ಈ ತಂಬೂರಿಯನ್ನು ತೆಗೆದುಕೊಂಡು ಹೋಗಪ್ಪಾ! "

ಕಮಲಾಂಬಿಕೆಯು ಅಷ್ಟರಲ್ಲಿಯೆ ಗುರುತಿಲ್ಲದವರನ್ನು ನೋಡಬಹುದಾದ ಬೆದರುನೋಟಗಳಿಂದ ಒಂದೆರಡು ಸಲ ನೋಡಿ, ಇನ್ನು ತಾನು ಏನು ಮಾಡಬೇಕೆಂಬುದನ್ನು ತಿಳಿಯದವಳಾಗಿ, ಪ್ರಶ್ನಾತುರದೃಷ್ಟಿಗಳಿಂದ ತಂದೆಯನ್ನು ನೋಡಲು ತೊಡಗಿದ್ದಳು. ಚೆನ್ನಯ್ಯ ಬಂದು ತಂಬೂರಿಯನ್ನು ತೆಗೆದುಕೊಂಡು ನಡೆಯಲು, ಅವನನ್ನು ಅನುಸರಿಸಿ ತಾನೂ ಹೊರಟುಬಿಟ್ಟಳು. " ಅಣ್ಣಾಜಿಯವರ ಕಡೆಗೆ ಹೋಗಿ ಬಂದು ಆಯಿತೇನು ? " ಎಂದು ಕೇಳಿದ ನರಸಿಂಹನಾಯಕನ ಮಾತಿನ ಕಡೆಗೆ ಪೆದ್ದರಾಯನ ಲಕ್ಷ್ಯವಿದ್ದಂತೆ ಕಾಣಲಿಲ್ಲ; ಆತನ ಲಕ್ಷ್ಯ ಕಣ್ಣನೋಟದ ಕೋಲುಕುದುರೆಯನ್ನೇರಿ ಹೋಗಿ, ಹೊರಕ್ಕೆ ಹೊರಟು ನಡೆದಿರುವ ಕಮಲಾಂಬಿಕೆಯ ಬಿಡುಮುಡಿಯ ಜೊಲ್ಲೆಯದೊಂದಿಗೆ ಆಟವಾಡುತ್ತಲಿದ್ದಿತು. ನಾಯಕನು ಮತ್ತೆ ಕರೆದ.

" ಪೆದ್ದಣ್ಣಾ ! "

ಪೆದ್ದಣ್ಣ ಬೆಚ್ಚಿಬಿದ್ದವನಾಗಿ–ನರಸಿಂಹನಾಯಕರ ಕಡೆಗೆ ನೋಡಿ – ಹುಚ್ಚುದನಿಯಲ್ಲಿ ಕೇಳಿದ.

" ಏನು ? . . ಆಂ . . ಅಲ್ಲಾ . . ನಾನು ಬಂದುದರಿಂದ . . ನಿಮ್ಮ ಸಂಗೀತ . . ಸಂಗೀತ ನಿಂತುಹೋಯಿತಲ್ಲವೇ ! "

ನರಸಿಂಹನಾಯಕನು ಸಹಜಗಾಂಭೀರ್ಯದಲ್ಲಿ ಹೇಳಿದನು.

" ಯಾರಿಗೆ ಬೇಕಾಗಿದೆ ಪೆದ್ದಣ್ಣಾ ಈಗ ಸಂಗೀತ? ನಾವೆಲ್ಲರೂ ಸದ್ಯಕ್ಕೆ ದಳ್ಳುರಿಯಲ್ಲಿ ಕುಳಿತುಬಿಟ್ಟಿದ್ದೇವೆ. ಇದರಿಂದ ದಾಟಿ ಹೊರಕ್ಕೆ ಬಿದ್ದೆವೆಂದರೆ ಆ ಮೇಲೆ ಎಲ್ಲವೂ ಸಂಗೀತ ರಂಗೀತ! ಏನೋ ಮಗಳನ್ನು

ಮುಂದೆ ಕೂರಿಸಿಕೊಂಡು ಎಷ್ಟೋ ದಿನವಾಗಿದ್ದಿತು. ಹಾಗೆಯೆ ಕುಳಿತಿರುವುದೇನೆಂದು ಹಾಡವ್ವಾ—ಎಂದು ಹೇಳಿದೆ, ಆಯಿತು!"

"ನಿಮ್ಮ ಮಗಳೇನು ಈಕೆ?"

"ಅಹುದು ಮಗಳು! ನೀವು ಅಣ್ಣಾಜಿಯವರಲ್ಲಿಗೆ ಹೋಗಿ ಬಂದಿರಾ?"

ಎಳೆದಾಟದ ಸ್ವರದಲ್ಲಿ ಪೆದ್ದರಾಯನು ಹೇಳಿದ.

"ಊಂ. . ಹೂಂ! ಹೋಗಿ ಬಂದೆ. ಅವರೇನೂ ತಮ್ಮ ನಿರ್ಣಯವನ್ನು ಬಿಟ್ಟು ಅಲುಗಾಡುವಂತೆ ಕಾಣುವುದಿಲ್ಲ."

"ಅಣ್ಣಾಜಿಯವರ ಸ್ವಭಾವವನ್ನು ನಾನು ಮೊದಲಿನಿಂದಲೂ ಬಲ್ಲೆ ಪೆದ್ದಣ್ಣಾ! ನುಡಿದಂತೆ ನಡೆದೇ ಬಿಡುವವರು ಅವರು! ಎಂತಲೇ ನಾನು ಮೊದಲೇ ನಿಮಗೆ ಹೇಳಿದೆ. ಆದರೂ ನೀವು, ಅವರ ಮನಸ್ಸನ್ನು ತಿರುಗಿಸಿಯೆ ಬಿಡುತ್ತೇನೆಂದು ಪಣತೊಟ್ಟು ಹೋದಿರಿ!"

"ಬೇಕಾದ ರೀತಿಯಲ್ಲಿ ಮಾತನಾಡಿ ನೋಡಿದೆ. ಅವರದು ಉಡದ ಹಿಡಿತ."

"ಅದಾಯಿತಲ್ಲ! ಇನ್ನು ಮುಂದೆ ಏನುಮಾಡಬೇಕೆನ್ನುತ್ತೀರಿ?"

"ಬೇರೆ ಇನ್ನೇನು ಮಾಡುವುದು! ಉಪಾಯವಿಲ್ಲದ ಸಂದರ್ಭ. ಅವರು ಒಲ್ಲೆನೆಂದು ಹಟಹಿಡಿದ ಮೇಲೆ ನಾನು ಒಪ್ಪಿಗೆ ಕೊಡಲೇ ಬೇಕು! ಏನೋ, ಅಣ್ಣಾಜಿಯವರು ತಾವೆ ವಿರೂಪಾಕ್ಷರಾಯನ ಕೊಲೆ ಮಾಡಿದುದರಿಂದ, ಸಿಂಹಾಸನದ ಅಧಿಕಾರ ಒಂದು ಬಗೆಯಿಂದ ಅವರದು ಇಮ್ಮಡಿಗೊಂಡಂತಾಗಿದ್ದಿತು. ಅವರ ಕರ್ತೃತ್ವದ ಫಲವನ್ನು ಅನುಭವಿಸುವುದೆಂದರೆ ನನ್ನ ಶಕ್ತಿಯದೊಂದು ಅಪಮಾನವೆಂದು ನನಗೆ ಎನಿಸುತ್ತಿದ್ದಿತು. ಅವರ ನಿಸ್ಪೃಹವೃತ್ತಿ ನಿಜವಾಗಿಯೂ ನನ್ನನ್ನು ಇಂದು ಬೆರಗುಗೊಳಿಸಿ ಬಿಟ್ಟಿತು. ಅವರ ಶಕ್ತಿಯೆದುರು ನನ್ನ ಶಕ್ತಿ ಸಣ್ಣದೆಂದೂ ತೋರಿತು. ಎಂತಲೆ ಅವರ ಮಾತಿನಂತೆ ನಡೆಯಲಿಕ್ಕೆ ಸಿದ್ಧನಾಗಿ, ಸಿಂಹಾಸನಾಧಿಕಾರಕ್ಕೆ ಸಮ್ಮತಿಸುತ್ತಿದ್ದೇನೆ. ಇದನ್ನು ನಿಮಗೆ ತಿಳುಹಿಸಿ ಹೋಗಲಿಕ್ಕೆಂದೇ ಈಗ ಇಲ್ಲಿಯ ವರೆಗೆ ಬಂದಿದ್ದೇನೆ."

"ಆನಂದದ ಸಂಗತಿ! ನೀವೂ ಸಮ್ಮತಿಸದಿದ್ದರೆ ತುಂಬ ತೊಂದರೆಗೆ

ಇಡುತ್ತಿದ್ದಿತು. ಈಪ್ಪೊತ್ತೇ ಚಂದ್ರಗಿರಿಯಿಂದಲೂ ಕಾಗದ ಬಂದಿದೆ. ಇನ್ನುಳಿದ ಕಡೆಗಳಲ್ಲಿಯಂತೆ ಅಲ್ಲಿಯ ಜನರೂ ತುಂಬ ಅಸಂತುಷ್ಟರಾಗಿ ಬಿಟ್ಟಿದ್ದಾರಂತೆ. ತೆಲುಗು ನಾಡಿನ ಪಾಳೆಯಗಾರರೂ ಉತ್ಕಲದ ಗಜಪತಿಯ ಕಡೆಯವರೂ ಅತ್ತಣ ಜನರಲ್ಲಿ, ವಿಜಯನಗರದ ವಿಚಾರದಲ್ಲಿ ಏನೇನೋ ವಿಪರೀತ ಕಲ್ಪನೆಗಳನ್ನು ಹರಡುತಿದ್ದಾರಂತೆ. ಆದುದರಿಂದ ಬೇಗನೆ ಸಾಮ್ರಾಜ್ಯದ ಪ್ರತಿನಿಧಿಗಳು ದಿಕ್ಕುದಿಕ್ಕುಗಳಿಗೂ ಹೋಗಿ, ಅಲ್ಲಲ್ಲಿಯ ಸಾಮಂತ ಸನ್ನೆಯ – ಮಾಂಡಲಿಕರುಗಳನ್ನು ಮಾತನಾಡಿಸಿ ಬಾರದೆ ಗತ್ಯಂತರವಿಲ್ಲ. ಹಾಗೆ ಪ್ರತಿನಿಧಿಗಳನ್ನು ಕಳುಹಿಸುವುದಾದಲ್ಲಿ, ಸಿಂಹಾಸನಾರೋಹಣದ ಸಮಾರಂಭವನ್ನು ಆದಷ್ಟು ಬೇಗನೆ ಜರುಗಿಸದೆ ಹೋದರೆ ಬೇರೆ ಮಾರ್ಗ ವಿಲ್ಲ!"

"ಇನ್ನು ಅದಕ್ಕೆ ಏತಕ್ಕಾಗಿ ತಡೆಯಾಗಬೇಕು! ಕೂಡಲೆ ಅದನ್ನು ತೀರಿಸಿ ಮುಂದಣ ಉದ್ಯಮಕ್ಕೆ ತೊಡಗಬಹುದಲ್ಲವೇ?"

"ನಾನೂ ಅದರ ಯೋಚನೆಯನ್ನು ಮಾಡಿದ್ದೇನೆ. ಪೌಷ್ಯಮಾಸವು ಮುಗಿಯುವ ವರೆಗೆ ಯಾವ ಮಂಗಲಕಾರ್ಯಗಳನ್ನೂ ನಡೆಯಿಸಲಿಕ್ಕೆ ಆಗದು. ಪಂಪಾಪತಿಯು ಮಾಘದ ಮೊದಲನೆಯ ಬೆಳಗನ್ನಷ್ಟು ಸುಸೂತ್ರ ವಾಗಿ ಒದಗಿಸಬೇಕು; ಅಂದೆಯೆ ಪಟ್ಟಾಭಿಷೇಕದ ಸಮಾರಂಭವನ್ನು ನಡೆ ಯಿಸಬಹುದು!"

ಪೆದ್ದರಾಯ ಒಂದೆರಡು ನಿಮಿಷಗಳ ವರೆಗೆ ಯಾವುದೋ ಯೋಚನೆ ಯಲ್ಲಿ ಕುಳಿತಿದ್ದು, ಬಳಿಕ ಭಾರವಾದ ಧ್ವನಿಯಲ್ಲಿ ಹೇಳಿದನು.

"ಆಗಲಿ ನಾಯಕರೇ, ನಾನಿನ್ನು ಹೊರಡಬಹುದಲ್ಲವೇ?"

ನರಸಿಂಹನಾಯಕನೂ ಪೆದ್ದರಾಯನೊಡನೆ ಎದ್ದು, ಹೊರ ಬಾಗಿಲ ವರೆಗೆ ಕಳುಹಿಸುತ್ತ ನಡೆದನು. ಆಗ ಪೆದ್ದರಾಯನು ಕಿತ್ತಲಾಗದ ಅಡಿಗಳನ್ನು ಒತ್ತಾಯದಿಂದ ಎತ್ತಿ ಎತ್ತಿ ಇಡುತ್ತ ಮುಂದುವರಿದಿದ್ದನು.

---

## ೪ನೆಯ ಪರಿಚ್ಛೇದ

ದಳಪತಿ ದೇವಣ್ಣನಾಯಕರು ಪರಂಪರೆಯಿಂದ ಬಂದ ಯುದ್ಧವಿದ್ಯೆಯಲ್ಲಿ ತುಂಬ ಗಟ್ಟಿಗರು. ಬಿಲ್ಲುಬಾಣಗಳನ್ನು ಬಳಸಿ ಮಾಡುವ ಯುದ್ಧವೇ ನಿಜವಾದ ಗಂಡುಸರ ಯುದ್ಧವೆಂದು ಅವರದು ಖಂಡಿತವಾದ ಅಭಿಪ್ರಾಯ. ತಾವು ಇನ್ನಿಷ್ಟು ಪ್ರಯತ್ನಪಟ್ಟಿದ್ದಲ್ಲಿ ಪುರಾಣಕಾಲದ ಸರ್ಪಾಸ್ತ್ರ, ಗರುಡಾಸ್ತ್ರ, ಮೇಘಾಸ್ತ್ರ, ವಾಯುವ್ಯಾಸ್ತ್ರ ಮೊದಲಾದ ಮಂತ್ರಾಸ್ತ್ರಗಳ ಪ್ರಯೋಗವನ್ನೂ ಅರಿತುಕೊಳ್ಳಬಹುದಾಗಿದ್ದಿತೆಂದು ಅವರು ಹೇಳುವರು. ಆದರೆ ತಮಗಿರುವ ಅಸ್ತ್ರವಿದ್ಯಾ ನೈಪುಣ್ಯದ ಮೇಲಷ್ಟೆ ಭರವಸೆಯನ್ನಿಟ್ಟು ಮಿಕ್ಕುದರ ಕಡೆಗೇನು ಅವರು ದುರ್ಲಕ್ಷ್ಯ ಮಾಡಿರಲಿಲ್ಲ. ವಿವಿಧ ಶಸ್ತ್ರ-ಪ್ರಯೋಗದಲ್ಲಿಯೂ ಅಷ್ಟೆ ಕೈಚಳಕವುಳ್ಳವರಾಗಿದ್ದರು. ಅವರ ಕತ್ತಿಯ ವರಸೆಯ ಚುರುಕು, ಎದುರು ನಿಂತವರಿಗೇ ಗೊತ್ತು. ಇಟ್ಟ ಈಟಿಯ ಗುರಿಯು ತಪ್ಪಿದುದನ್ನು ನಾಯಕರು ಕನಸಿನಲ್ಲಿಯೂ ಕಾಣರು. ಇಷ್ಟೆಲ್ಲ ಇದ್ದರೂ ಬಿಲ್ಲುಗಾರಿಕೆಯಲ್ಲಿ ಅವರದು ಹೆಚ್ಚಿನ ಪಕ್ಷಪಾತ. ಅವರಿಗೆ ಈಗ ಐವತ್ತು ವರುಷದ ವಯಸ್ಸು; ಆದರೇನು; ಅವರ ಶಸ್ತ್ರಾಸ್ತ್ರಪ್ರೀತಿ–ಪ್ರಾವೀಣ್ಯಗಳು ಎಂದಿನಂತೆಯೆ ಅಚ್ಚಳಿಯದೆ ಇರುವುವು.

ಪೆದ್ದರಾಯನು ಎಳೆಯತನದಿಂದಲೂ ಯುದ್ಧಪ್ರಿಯನು. ಕತ್ತಿಯ ವರಸೆಯಾಟದಲ್ಲಿ, ಇನ್ನೇತರಲ್ಲಿಯೂ ಇಲ್ಲದಷ್ಟು ಆತನಿಗೆ ಪ್ರೀತಿ; ಎಂತಲೆ ಅವನು ಖಡ್ಗಯುದ್ಧದ ಶಿಕ್ಷಣಕ್ಕಾಗಿ, ದೇವಣ್ಣನಾಯಕರನ್ನು ತನ್ನ ಗುರುಗಳನ್ನಾಗಿ ಮಾಡಿಕೊಂಡಿದ್ದನು. ಪೆದ್ದರಾಯನ ಚುರುಕಿನ ಕೈಯನ್ನೂ ಕೆಚ್ಚಿನ ಎದೆಯನ್ನೂ ಕಂಡಾಗಲೆಲ್ಲ, ದೇವದೇವನ ದರ್ಶನವಾದಷ್ಟು ದೇವಣ್ಣನಾಯಕರಿಗೆ ಆನಂದವೆನಿಸುವುದು. ಅವರು ಎಷ್ಟೋ ಸಲ ಪೆದ್ದರಾಯನ ನೀಳವಾದ ಬಾಹುಗಳನ್ನು ತೆಗೆದುಕೊಂಡು, ಹಣೆಗೆ–ಕಣ್ಣುಗಳಿಗೆ ಭಕ್ತಿಯಿಂದ ಒತ್ತಿಕೊಂಡುದುಂಟು. ಅವುಗಳಿಗೆ ಮೆಚ್ಚಿಕೆಯ ಮುದ್ದಿನ ಉಡುಗರೆ ಕೊಟ್ಟುದೂ ಉಂಟು. ಒಂದೊಂದು ಸಲ ದೇವಣ್ಣ-ನಾಯಕರು ಆನಂದದ ಭರದಲ್ಲಿ ಹೇಳುವರು: ‘ ಪೆದ್ದಣ್ಣಾ ನೀನು ಬಿಲ್ಲುವಿದ್ಯೆಯನ್ನೂ ಅಭ್ಯಾಸಮಾಡಬೇಕಪ್ಪಾ! ’ ಎಂದು. ‘ಬಿಲ್ಲುವಿದ್ಯೆ’ ಎಂಬ ಹೆಸರನ್ನು ಕೇಳಿದೊಡನೆಯೆ ಪೆದ್ದರಾಯನಿಗೆ ವಿನೋದವೆನಿಸುವುದು.

ಸಾಯಲಾಗಿದ್ದ ಮುದುಕಿಯೊಂದನ್ನು ತಂದು ಎದುರು ನಿಲ್ಲಿಸಿ, ‘ಈ ಚೆಲುವೆಯನ್ನು ಮದುವೆಯಾಗಪ್ಪಾ’ ಎಂದು ಹೇಳಿದಾಗಿನಷ್ಟು ನಗೆಬಂದು ಬಿಡುವುದು. ಆಗವನು ಸಲುಗೆಯ ದನಿಯಲ್ಲಿ ನಾಯಕರಿಗೆ ಹೇಳುವನು.

“ಏನು ನಾಯಕರೆ, ಘಟ್ಟೆಂದೊಡನೆಯೆ ಹತ್ತಾರು ಜನರನ್ನು ಸುಟ್ಟುಹಾಕುವ ಕೋವಿಗಳೆದುರು – ಢಡಿಲ್ಲೆಂದೊಡನೆಯೆ ನೂರಾರು ಜನರನ್ನು ಧೂಳಿಪಟಮಾಡುವ ಫಿರಂಗಿಗಳೆದುರು – ನಿಮ್ಮ ಬಿಲ್ಲಿನ ಬಿದಿರು ಕಡ್ಡಿ, ಅಂಬಿನ ಸೂಜಿ ಏನುಮಾಡಲು ಬಲ್ಲುವು ?”

ಹೀಗೆ ಪೆದ್ದರಾಯನು ಬೀಳುಗಳೆದು ಮಾತನಾಡಿದಾಗೆಲ್ಲ ನಾಯಕರ ಹೃದಯದಲ್ಲಿ ಕಳವಳ – ಅಭಿಮಾನಗಳೆರಡೂ ಒಮ್ಮೆಲೆ ಉದ್ರೇಕಗೊಳ್ಳುವುವು. ಆಗ ಅವರು “ಅಯ್ಯೋ ಕಲಿಕಾಲವೇ! ಹಿಂದಿನದೆಲ್ಲದರಲ್ಲಿ ನಂಬುಗೆಯನ್ನಿಡದಿರುವುದು ಇಂದಿನ ಯುಗಧರ್ಮ ಪೆದ್ದಣ್ಣಾ! ನೀನಾದರೂ ಏನು ಮಾಡೀಯೆ !” ಎಂದು ಬಿಸಿಯುಸಿರು ಚೆಲ್ಲುವರು.

ನಾಯಕರ ಮನೆಯ ಓಲಗಸಾಲೆಯಲ್ಲಿಯ ಚಿತ್ರಪಟಗಳೆಲ್ಲ ನೋಡುವಂತಿರುವುವು. ಅವೆಲ್ಲವೂ ದಳಪತಿಗಳ ಧನುರ್ವಿದ್ಯೆಯ ಪ್ರೀತಿಯನ್ನೇ ಸಾರಿ ಹೇಳುವಂತಹವು. ಕೋದಂಡಧಾರಿಯಾದ ಶ್ರೀರಾಮಚಂದ್ರ, ಧನು-ರಾಗಮ ವಿಶಾರದನಾದ ಪರಶುರಾಮ, ಕೌರವಪಾಂಡವರಿಗೆ ಬಿಲ್ಗೊಜರಾಗಿದ್ದ ದ್ರೋಣಾಚಾರ್ಯರು, ದ್ರೋಣಾಚಾರ್ಯರ ಮಣ್ಣಿನ ಮೂರ್ತಿಯನ್ನು ಮುಂದೆ ಇರಿಸಿಕೊಂಡು, ಅಸ್ತ್ರವಿದ್ಯೆಯನ್ನು ಅಭ್ಯಾಸಿಸುತ್ತಿರುವ ಏಕಲವ್ಯ, ಮತ್ಸ್ಯಯಂತ್ರಕ್ಕೆ ಗುರಿಹೊಡೆಯುವುದರಲ್ಲಿದ್ದ ವೀರಪಾರ್ಥ, ಆತನಿಗೆ ಪಾಶುಪತಾಸ್ತ್ರವನ್ನು ಕೊಡಲು ಹೊರಟ ಕಿರಾತವೇಷದ ಮಹಾದೇವ, ಸರ್ಪಾಸ್ತ್ರವನ್ನು ತೊಟ್ಟುನಿಂತ ವೀರಕರ್ಣ, ಶರಪರ್ಯಂಕದಲ್ಲಿ ಮಲಗಿದ ಭೀಷ್ಮಾಚಾರ್ಯರು, ಬೇಡನೊಬ್ಬನ ಬಾಣತಗುಲಿ ಅಸುವನ್ನು ನೀಗಿದ ಶ್ರೀಕೃಷ್ಣ ಈ ಎಲ್ಲ ಚಿತ್ರಗಳು ಅಲ್ಲಿರುವುವು. ನಾಯಕರ ಶಸ್ತ್ರಾಗಾರದಲ್ಲಿಯಂತೂ ಎಲ್ಲೆಲ್ಲಿಯೂ ಕಾಣದಂತಹ ಬಿಲ್ಲು – ಅಂಬುಗಳ ಮಾದರಿಗಳಿವೆ.

ವಿಜಯನಗರದ ಸೈನ್ಯದಲ್ಲಿ ಬಿಲ್ಲಾಳುಗಳ ಸಂಖ್ಯೆ ಬರುಬರುತ್ತ ಕಡಿಮೆಯಾಗುತ್ತ ನಡೆದುದನ್ನು ಕಂಡು, ದೇವಣ್ಣನಾಯಕರು ಮನಮನ-

ದಲ್ಲಿಯೆ ಕೊರಗಿಮರುಗುವರು. ಮಹಮ್ಮದೀಯರ ವಿಷಯದಲ್ಲಿ ನಾಯಕರಿಗಿರುವ ಸಹಜದ್ವೇಷರೋಷಗಳು, ಅವರು ಪರಧರ್ಮೀಯರೆಂಬುದಕ್ಕಾಗಿ ಅಲ್ಲ; ವೈದಿಕಧರ್ಮದ ವಿದ್ರೋಹಿಗಳೆಂಬುದಕ್ಕಾಗಿಯೂ ಅಲ್ಲ; ಅವರು ಬಂದಂದಿನಿಂದ ಬಿಲ್ಲುವಿದ್ಯೆ ಹಿಂದೆ ಬಿದ್ದು, ಕತ್ತಿಕೋವಿಗಳ ಯುದ್ಧವು ಪ್ರಚಾರದಲ್ಲಿ ಬಂದಿತೆಂಬುದಕ್ಕಾಗಿ. ತೋಫುಗಳ ಉಪಯೋಗವನ್ನು ತಮ್ಮ ಸೈನ್ಯದಲ್ಲಿಯೂ ಮಾಡಬೇಕೆಂಬ ವಿಚಾರವನ್ನು ಕನ್ನಡ ಜನರ ತಲೆಯಲ್ಲಿ ತುಂಬಿದ ಪೋರ್ತುಗೀಜರನ್ನಂತೂ ಅವರು, 'ರಾಕ್ಷಸರು, ಪಿಶಾಚಿಗಳು' ಎಂದು ಕ್ರೋಧದ ಕೆಂಗಣ್ಣಿನಿಂದ ಕಾಣುತ್ತಿದ್ದರು.

ಒಂದು ಸಲ ದೇವಣ್ಣನಾಯಕರು ತಮ್ಮ ಸೈನ್ಯದಲ್ಲಿದ್ದ ಬಿಲ್ಲಾಳುಗಳಿಗೆ ಹೆಚ್ಚಿನ ಸಂಬಳ ಸಲ್ಲಬೇಕೆಂದು – ದಂಡನಾಯಕರ ಸ್ಥಳದಲ್ಲಿ ನರಸಿಂಹನಾಯಕರಿದ್ದಾಗ – ಸೂಚನೆ ಮಾಡಿದರು. ನರಸಿಂಹನಾಯಕರಿಗೆ ಇವರ ಸೂಚನೆ ಅಷ್ಟೊಂದು ಅರ್ಥವುಳ್ಳದಾಗಿ ತೋರಲಿಲ್ಲವೇನೋ! ಅದರ ಕಡೆಗೆ ಅವರು ಅಲಕ್ಷ್ಯಮಾಡಿಬಿಟ್ಟರು. ಇದರಿಂದ ದೇವಣ್ಣನಾಯಕರ ಮನಸ್ಸಿನ ಮೂಲೆಯಲ್ಲಿ ಎಲ್ಲಿಯೋ – ನರಸಿಂಹನಾಯಕರ ವಿಷಯವಾಗಿ ಅಸೂಯೆಯ ಕಿಡಿ ಅಂಟಿಕೊಂಡಿತು. ಆಡಳಿತದ ಬೇರೆ ಬೇರೆ ಸಂದರ್ಭಗಳಲ್ಲಿ ಒದಗಿದ ಬೇರೆ ಬೇರೆ ಕಾರಣಗಳ ಕಸದಲ್ಲಿ, ಆ ಕಿಡಿ ಒಳಗೊಳಗೆಯೆ ಹೊತ್ತಲು ತೊಡಗಿತು. ಮೊದಲಿನ ದೊರೆ ವಿರೂಪಾಕ್ಷರಾಯನ ಆಡಳಿತವು ದೇವಣ್ಣನಾಯಕರಿಗೆ ಬೇಕಾಗಿಯೆ ಇದ್ದಿತೆಂದೇನೂ ಹೇಳಲಿಕ್ಕೆ ಬರುವಂತಿಲ್ಲ. ಎಲ್ಲರಂತೆಯೆ ಇವರಿಗೂ ಆ ರಾಯನ ಆಡಳಿತ ಬೇಸರು ಬಂದಿರಬಹುದು. ಆದರೆ ನರಸಿಂಹನಾಯಕನು ದೊರೆಗೆ ವಿರೋಧಿಯಾಗಿ ನಿಂತುದರಿಂದ ಅವನ ಪಕ್ಷದಲ್ಲಿ ಸೇರಲಿಕ್ಕೆ ದೇವಣ್ಣನಾಯಕರ ಮನಸ್ಸು ಒಪ್ಪಿಕೊಳ್ಳಲಿಲ್ಲ. ಎಂತಲೇ ಅವರು ಕೊನೆಯುವರೆಗೆ ವಿರೂಪಾಕ್ಷರಾಯನ ಕಡೆಯುವರಾಗಿಯೆ ಉಳಿದರು.

ತನ್ನ ಪಕ್ಷದ ರಾಯನ ಕೊಲೆಯಾದುದು ದೇವಣ್ಣನಾಯಕರ ಎದೆಯನ್ನು ಯಾವ ಬಗೆಯಿಂದಲೂ ಅಳುಕಿಸಲಿಲ್ಲ. 'ನರಸಿಂಹನಾಯಕನ ಪಕ್ಷಕ್ಕೆ ಜಯದೊರೆಯಿತಲ್ಲಾ!' ಎಂಬ ಕೊರಗು ಮಾತ್ರ ಅವರ ಕರುಳನ್ನು ಹಿಂಡಿ ಹಿಪ್ಪಿಗೊಳಿಸಿ ಬಿಟ್ಟಿತು. ರಾಜಶೇಖರನಲ್ಲಿ ನಾಯಕರಿಗೆ ಹೆಚ್ಚಾಗಿ ಆದರವಿದ್ದಿ-

ತಾದರೂ,ನರಸಿಂಹನಾಯಕನ ಪಕ್ಷದವನಾದುದರಿಂದ ಆತನಿಗೆ ಸಿಂಹಾಸನದ ಅಧಿಕಾರ ಸಿಕ್ಕಬಾರದೆಂದು ಅವರು ಆಶೆಪಡುವವರು. ಈಗ ರಾಜಶೇಖರನು ಸಿಂಹಾಸನವನ್ನೇರಲಿಕ್ಕೆ ಅಸಮ್ಮತಿಸಿದ್ದಾನೆಂಬುದನ್ನು ಕೇಳಿದಾಗಿನಿಂದ, ದಳವಾಯಿಗಳ ದೇಹದಲ್ಲಿ ಮತ್ತೆ ಉತ್ಸಾಹದ ಸಂಚಾರವಾಗಲು ತೊಡಗಿದ್ದಿತು. ಪೆದ್ದರಾಯ – ತನ್ನ ಶಿಷ್ಯನಾದ ಪೆದ್ದರಾಯ – ದೊರೆಯಾಗಲಿದ್ದಾನೆಂಬ ವರ್ತಮಾನವನ್ನು ಕೇಳಿಯಂತೂ, ಹುರುಪಿನಿಂದ ಅವರ ನರನರಗಳೂ ಹಿಗ್ಗಿ ಕುಣಿದಾಡಿದುವು. ಮತ್ತೆ ತಾವು ಮೊದಲಿನಂತೆಯೆ ದಳಪತಿಗಳಾಗಿ ಉಳಿದು, ವಿಜಯನಗರದ ಸಿಂಹಾಸನದ ಸೇವೆಗೆ ಮರಳಿ ಸೊಂಟಕಟ್ಟಿ ನಿಲ್ಲಬೇಕೆಂಬ ನಿರ್ಣಯವನ್ನು ಮಾಡಿಬಿಟ್ಟರು.

ಪೆದ್ದರಾಯನ ಧೈರ್ಯ-ಶೌರ್ಯಗಳು ದೇವಣ್ಣನಾಯಕರಿಗೆ ಮೆಚ್ಚಿಕೆಯಾಗಿ, ಆತನನ್ನು ಸಲುಗೆಯವನನ್ನಾಗಿ ಮಾಡಿಕೊಳ್ಳಲಿಕ್ಕೆ ಹಚ್ಚಿದ್ದುವು. ತಂದೆತಾಯಿಗಳ ಮಮತೆಗೆ ಚಿಕ್ಕತನದಲ್ಲಿಯೆ ಎರವಾಗಿದ್ದ ಪೆದ್ದರಾಯನು, ದೇವಣ್ಣನಾಯಕರ ಮಮತೆಯ ಉಪಚಾರವನ್ನು ಮನವಾರೆ ಬಯಸುತ್ತಿದ್ದನು. ಎಂತಲೆ ತನಗೆ ಬೇಕೆನಿಸಿದಾಗ ದೇವಣ್ಣನಾಯಕರ ಮನೆಗೆ ಬರುವನು. ಮನೆಯ ಜನರೆಲ್ಲರೊಂದಿಗೆ ಮನೆಯವನಾಗಿಯೆ ಬೆರೆತು ಸುಖದುಃಖದಮಾತುಗಳನ್ನಾಡಿ, ಒಲವಿನ ಉಪಚಾರಗಳನ್ನು ಪಡೆದು ಮರಳಿ ಹೋಗುವನು.

ತಮ್ಮ ಮಗಳು ರತ್ನಾಂಬಿಕೆಗೆ – ನಾಯಕರು ಚಿಕ್ಕತನದಿಂದಲೂ ಶಸ್ತ್ರಾಸ್ತ್ರಗಳ ಶಿಕ್ಷಣವನ್ನು ಕೊಡುತ್ತಬಂದಿರುವರು. ತಂದೆ ಮಗಳು ಇಬ್ಬರೂ ಎದುರೆದುರಾಗಿ ನಿಂತು ಎಷ್ಟೋಸಲ ಕತ್ತಿಹರಿಗೆಗಳನ್ನು ತಿರುಹುತ್ತ ಹುಸಿ-ಗಾಳೆಗವನ್ನು ಆಡುವರು. ಇನ್ನೆಷ್ಟೋ ಸಲ ಗಂಡುಡಿಗೆಯನ್ನುಟ್ಟ ರತ್ನಾಂಬಿಕೆಯನ್ನು ನಾಯಕರು ತಮ್ಮೊಡನೆ ಬೇಟೆಯಾಟಕ್ಕೆ ಕರೆದುಕೊಂಡು ಹೋಗುವರು. ಅಲ್ಲಿ ಬೇಟೆಯಾಡುತಿರುವಾಗ ಬಿಲ್ಲುಗಾರಿಕೆಯ ಪೂರ್ಣಾಭಿ-ಮಾನಿಗಳಾದ ನಾಯಕರ ಬಿಲ್ಲಿನ ಗುರಿಯೂ ಒಂದುವೇಳೆ ತಪ್ಪೀತು; ರತ್ನಾಂಬಿಕೆಯ ಗುರಿ ಎಂದೂ ತಪ್ಪದು. ಆಗ ದೇವಣ್ಣನಾಯಕರಿಗೆ ಮಗಳ ವಿಷಯಕ್ಕೆ ತುಂಬ ಅಭಿಮಾನವೆನಿಸುವುದು.

ದೇವಣ್ಣನಾಯಕರ ಮನೆಗೆ ಹೋಗಲಾರಂಭಿಸಿದಂದಿನಿಂದಲೂ ಪೆದ್ದ-ರಾಯನು ರತ್ನಾಂಬಿಕೆಗೆ ಪರಿಚಯದವನಾಗಿದ್ದನು. ಇಬ್ಬರೂ ಜೊತೆಯಾಗಿ

ಇದ್ದುಕೊಂಡು, ನಾಯಕರಿಂದ ಕತ್ತಿಗಾಳಗದ ಬೇರೆಬೇರೆ ಕೈದಿರುಹುಗಳನ್ನು ಹೇಳಿಸಿಕೊಂಡ ದಿನಗಳು ಎಷ್ಟೋ ಇದ್ದುವು. ಒಂದೊಂದು ದಿನ ದೇವಣ್ಣ-ನಾಯಕರು ಅವರಿಬ್ಬರನ್ನೂ ಹುಸಿಗಾಳಗಕ್ಕೆ ನಿಲ್ಲಿಸಿ, ತಾವು ಇಬ್ಬರ ಕೈಚಳಕವನ್ನೂ ಕೌತುಕದಿಂದ ನೋಡುತ್ತ ನಿಂತುಕೊಂಡಿರುವರು. ಏನೆಂದರೂ ರತ್ನಾಂಬಿಕೆಯದು ಹೆಣ್ಣಿನ ಕೈ; ಬೇಗನೆ ಸೋತು ಹೋಗುವದು. ಆಗ ಕಾಳಗದ ದಣಿವಿನಿಂದಲೋ ಸೋತನಾಚಿಕೆಯಿಂದಲೋ ಚೆಂಬಣ್ಣವನ್ನು ತಳೆದ ರತ್ನಾಂಬಿಕೆಯ ಮುಖವನ್ನೆ ನಿಟ್ಟಿಸುತ್ತ ನಿಂತುಕೊಳ್ಳಬೇಕೆಂದು ಪೆದ್ದರಾಯನಿಗೆನಿಸುವುದು; ಪೆದ್ದರಾಯನ ಸಹಜವಾದ ಗಂಭೀರಹಾಸದ ಮುಖವನ್ನೂ ಹರವಾದ ಉಬ್ಬಿದೆದೆಯನ್ನೂ ಪುಷ್ಟವಾದ ನಿಡುದೋಳುಗಳನ್ನೂ ಬಿಡದೆ ನೋಡುತ್ತಿರಬೇಕೆಂದು ರತ್ನಾಂಬಿಕೆಗೆ ಬಯಕೆಯುಂಟಾಗುವುದು. ಆಗ ಇಬ್ಬರೂ ನಗೆಗಣ್ಣುಗಳಿಂದ ಒಬ್ಬರನ್ನೊಬ್ಬರು ನೋಡುತ್ತ ನಿಲ್ಲುವರು. ಅವರು ಹಾಗೆ ನಿಂತುಕೊಂಡಾಗೆಲ್ಲ ದೇವಣ್ಣನಾಯಕರು ಹಗಲುಗನಸುಗಳನ್ನು ಏನೇನನೋ ಕಂಡು, ಹಿಗ್ಗಿದೆದೆಯಿಂದ ಸಮಾಧಾನದ ಉಸಿರುಗಳನ್ನು ಹೊರಕ್ಕೆ ಕಳುಹಿಸುವರು.

ಇಂದು ಹುಣ್ಣಿಮೆ; ಮಧ್ಯಾಹ್ನದ ಹಬ್ಬದೂಟಕ್ಕೆಂದು ದಳಪತಿಗಳು ಪೆದ್ದರಾಯನಿಗೆ ಔತಣ ಕೊಟ್ಟಿದ್ದರು. ಪೆದ್ದರಾಯನು ಸಮ್ರಾಟನಾಗಲಿದ್ದುದು ಇಂದಿನ ಔತಣಕ್ಕೆ ಸ್ವಲ್ಪ ಹೆಚ್ಚಿನ ಮೆರುಗನ್ನು ಹಾಕಿದ್ದಿತು. ಮಮತೆಯ ಸಲುಗೆ – ಸ್ವಾಮಿಯಲ್ಲಿರಬೇಕಾದ ನಿರಪೇಕ್ಷವಾದ ನಿಷ್ಠೆ – ಇವೆರಡರ ಬೆರಕೆ, ಇಂದಿನ ಎಲ್ಲ ಉಪಚಾರಗಳಲ್ಲಿ ಇದ್ದುದನ್ನು ಪೆದ್ದರಾಯನು ಕಂಡುಕೊಂಡ. ಎಂದೂ ಗೊತ್ತಿಲ್ಲದುದರಿಂದ ಇಂದಿನ ರೀತಿಯು ಪೆದ್ದರಾಯನಿಗೆ ಹೇಗೊಹೇಗೋ ಎನಿಸಿತು. ಊಟಕ್ಕೆ ಕುಳಿತಿದ್ದಾಗ ದೇವಣ್ಣನಾಯಕರು ಮಾತಿಗೆ ಮೊದಲು ಮಾಡಿದರು.

"ಏನು ಪೆದ್ದಣ್ಣಾ! ದೊರೆಯಾದ ಮೇಲೆ, ನಿನ್ನನ್ನು ಹೇಗಪ್ಪಾ ಕರೆಯಬೇಕು – ನಾವು?"

"ಹೇಗೆ ಎಂದರೆ?·· ಸಿಂಹಾಸನದಲ್ಲಿ ಕುಳಿತೊಡನೆ ನನ್ನ ಈ ಹೆಸರು ಹೋಗಿಬಿಡುವುದೇನು ಮತ್ತೆ?"

"ಹಾಗಲ್ಲ ಪೆದ್ದಣ್ಣಾ! ನೀನು ಕರ್ಣಾಟಕಕ್ಕೆಲ್ಲ ಸಮ್ರಾಟನಾಗುವವನು

ಅಲ್ಲವೇ?"

"ಸಿಂಹಾಸನದಲ್ಲಿ ಇದ್ದಾಗಷ್ಟು ಸಮ್ರಾಟ; ಇಲ್ಲಿಗೆ ಬಂದಾಗ ನಾನು ನಿಮಗೆ ಪೆದ್ದಣ್ಣನೇ!!

"ನಿನ್ನ ಮನಸ್ಸು ಬಲು ಒಳ್ಳೆಯದಪ್ಪಾ! ನೋಡು ಪೆದ್ದಣ್ಣಾ, ಒಂದು ವಿಷಯವನ್ನು ಮೊದಲೆ ನಿನಗೆ ಹೇಳಿಟ್ಟಿರುತ್ತೇನೆ. ನಿನ್ನ ಆಧಿಪತ್ಯದಲ್ಲಿ ಧನುರ್ವಿದ್ಯೆಗೆ ಹೆಚ್ಚಿನ ಮಾನವು ಇರಲೆ ಬೇಕು! ಸಾಮ್ರಾಜ್ಯದ ಸೈನ್ಯದಲ್ಲಿ ಬಿಲ್ಲಾಳುಗಳ ಸಂಖ್ಯೆಯನ್ನು ಹೆಚ್ಚಿಸಬೇಕು! ನಾಡಿನ ಹಳ್ಳಿಹಳ್ಳಿಗಳಲ್ಲಿಯೂ ಬಿಲ್ಲಾಳುತನವು ಹಬ್ಬುವಂತೆ ಏರ್ಪಾಡು ಮಾಡಿಸಬೇಕು! ನಮ್ಮ ಯುದ್ಧಗಳೆಂದರೆ ನೋಡು ಪೆದ್ದಣ್ಣಾ! ಮೊದಲಿನ ಮಹಾಭಾರತಕಾಲದ ಯುದ್ಧಗಳಂತೆ ಆಗಬೇಕು·· ನಿನ್ನ ಆಡಳಿತದಲ್ಲಿ!"

ಪೆದ್ದರಾಯ ಮೆಲುನಗೆಯಲ್ಲಿ ಮಾತನಾಡಿದ.

"ಮಹಮ್ಮದೀಯರ ಕತ್ತಿಕೋವಿಗಳ ಎದುರು – ಫಿರಂಗಿಗಳ ಎದುರು ನಮ್ಮ ಬಿಲ್ಲಾಳುಗಳು ಏನುಮಾಡಬಲ್ಲರು ನಾಯಕರೇ?"

"ಅದರ ಯೋಚನೆ ನಿನಗೆ ಬೇಡ. ನನಗೇನೂ ಅದು ತಿಳಿಯುವುದಿಲ್ಲವೆನ್ನುತ್ತೀಯೇನು? ಮಹಮ್ಮದೀಯರನ್ನು – ಫಿರಂಗಿಯವರನ್ನು ಈ ದೇಶದಿಂದ ಹೊರಕ್ಕೆಹಾಕುವ ವರೆಗೆ, ಈ ಕತ್ತಿಕೋವಿಗಳನ್ನು ಇಟ್ಟುಕೊಂಡೇ ಇರೋಣ! ಬೇಕಾಗಿದ್ದರೆ ವಿಲಾಯಿತೀ ಜನರಿಗೆ ಹೇಳಿ, ನಾವು ಇನ್ನೂ ಸಾವಿರಾರು ತೋಪುಗಳನ್ನು ತರಿಸಿಕೊಳ್ಳೋಣ ಅದುವರೆಗೆ! ಅವರನ್ನು ಹೊರಕ್ಕೆ ಅಟ್ಟಿಬಿಟ್ಟೆವೋ! ಅವುಗಳ ಮುಖವನ್ನು ಕೂಡ ನೋಡಲಾಗದು! ಜಂಗುತಿನ್ನುತ್ತ ಬಿದ್ದುಕೊಂಡಿರಲಿ·· ತುಂಗಭದ್ರೆಯ ತಿರುಗಣಿಮಡುವಿನ ತಳದಲ್ಲಿ! ಗೊತ್ತಾಯಿತೇ?"

ದೇವಣ್ಣನಾಯಕರ ಮಾತಿಗೆ ಪೆದ್ದರಾಯನು ಸಾಕಷ್ಟು ನಗಬಹುದಾಗಿದ್ದಿತು. ತಾನೂ ಇನ್ನೇನನಾದರೂ ಮಾತನಾಡಿ, ಮತ್ತೆಯೂ ಅವರಿಂದ ಇದೇ ಬಗೆಯ ಮಾತುಗಳನ್ನು ಆಡಿಸಬಹುದಾಗಿದ್ದಿತು. ಆದರೆ ಆಗ ಅದೇನೋ ಒಂದು ಬಗೆಯ ಮಂಕು ಆತನ ಮುಖವನ್ನು ಮುಚ್ಚಿಬಿಟ್ಟಿದ್ದು, ಇನ್ನಾವ ವಿಚಾರಗಳೂ ತಲೆಯೊಳಕ್ಕೆ ಸೇರದಂತೆ ತಡೆದು ಹಿಡಿದಿದ್ದಿತು. ಎಂತಲೇ ಅವನು ಒಲ್ಲದ ಮೆಲುನಗೆ ನಗುತ್ತ ಒಂದೆ ಮಾತನ್ನು ಹೇಳಿದ.

"ಹಾಗೆಯೆ ಆಗಲಿ ನಾಯಕರೆ! ನಾನು ದೊರೆಯಾದಮೇಲೆಯೂ ನೀವೆ ದಳಪತಿಗಳಲ್ಲವೇ?"

ಬರೀ ದಂಡಾಳುಗಳ ಹಣಿದಾಟ – ಸೆಣಸಾಟಗಳನ್ನು ಕಂಡ ದೇವಣ್ಣ ನಾಯಕರ ಸ್ಥೂಲಮನಸ್ಸಿಗೆ ಪೆದ್ದರಾಯನ ಹೃದಯದೊಳಗಿನ ಕಲಕಲಾಟ ಹೇಗೆ ತಿಳಿಯಬೇಕು? ಪೆದ್ದರಾಯನ ಮಾತು ಅವರನ್ನು ಪೂರ್ಣತೃಪ್ತರನ್ನಾಗಿ ಮಾಡಿತು. ಆ ತೃಪ್ತಿಯ ಭರದಲ್ಲಿ 'ತಾವು ಏನೇನು ಊಟ ಮಾಡಿದೆವು? ಯಾವಾಗ ಎದ್ದು ಕೈತೊಳೆದುಕೊಂಡೆವು? ತಾಂಬೂಲವನ್ನು ಹೇಗೆ ಹೇಗೆ ಹಾಕಿಕೊಂಡೆವು?' ಎಂಬುದರ ಎಚ್ಚರವೇ ನಾಯಕರಿಗಿರಲಿಲ್ಲ. ತಾಂಬೂಲ ಸೇವನೆಯಾದೊಡನೆಯೆ ಪೆದ್ದರಾಯನು ನಾಯಕರಿಗೆ ಹೇಳಿದ.

"ನಾನು ರತ್ನಾಂಬಿಕೆಯನ್ನಷ್ಟು ಕಂಡುಬರುತ್ತೇನೆ ನಾಯಕರೇ!"

"ಆಗಲಪ್ಪಾ! ಪೆನುಗೊಂಡೆಯಿಂದ ಅವಳೂ ಮೊನ್ನೆ ತಾನೆ ಬಂದಿದ್ದಾಳೆ. ಬಂದಾಗಿನಿಂದ ನಿನ್ನ ಹೆಸರನ್ನೆ ಕನವರಿಸುತ್ತಿದ್ದಾಳೆ. ಇಲ್ಲಿ ಕೇಳು ಪೆದ್ದಣ್ಣಾ! ವಿರೂಪಾಕ್ಷರಾಯರ ಕೊಲೆಮಾಡಿದವನು ನೀನೆಯೆಂದು ಆಕೆಯ ಕಲ್ಪನೆಯಾಗಿದ್ದಿತು. ಅಲ್ಲವೆಂದು ನಾವು ಎಷ್ಟು ಹೇಳಿದರೂ ಆಕೆಯ ಮನಸ್ಸು ಅದೆಷ್ಟೊ ಹೊತ್ತಿನ ವರೆಗೆ ಒಪ್ಪದೆ ಹೋಯಿತು! ಈಗಲೇ ಹೋಗಿಬರುತ್ತೀಯೇನು ಅಲ್ಲಿ"

"ಅಹುದು!" ಎಂದು ಪೆದ್ದರಾಯನು ನಿಧಾನವಾಗಿ ಅಡಿಗಳನ್ನಿಡುತ್ತ ಯೋಚನೆಯ ನಡಿಗೆಯಲ್ಲಿ ರತ್ನಾಂಬಿಕೆಯ ಅಂತಃಪುರದ ಕಡೆಗೆ ಹೊರಟನು.

---

## ೫ನೆಯ ಪರಿಚ್ಛೇದ

ರತ್ನಾಂಬಿಕೆಯ ಬಳಿಯಡಾಳಿಗದ ಹೊನ್ನಮ್ಮ ಕೇಳಿದಳು.

"ಅಮ್ಮಾಜೀ! ಪೆದ್ದರಾಯರು ಇದೀಗಲೆ ಬರಬಹುದಲ್ಲವೇ?"

"ಹೂಂ! ಬರಬಹುದೆಂದು ಕಾಣುತ್ತದೆ."

"ಇದೇನು ಮಾತು? ಅಮ್ಮಾಜಿಯವರಿಗೆ ಏನಾದರೂ ಕೋಪವೇನು?"

"ಈಗ ನನ್ನಲ್ಲಿ ಕೋಪವನ್ನೇನು ಕಂಡೆ ನೀನು?"

"ಹಾಗಲ್ಲ ಅಮ್ಮಾಜೀ, ಪೆದ್ದರಾಯರು ಬರುವರೆಂದು ತಿಳಿದೊಡನೆಯೆ

ಯಾವಾಗಲೂ ಉಡುಪುತೊಡಪುಗಳನ್ನು ಬದಲಿಸುತ್ತಿರುವುದು ನಿಮ್ಮ ರೀತಿ! ಇಂದು ಹಬ್ಬದ ನೆಪವಿದ್ದರೂ ನಿತ್ಯದ ಉಡುಪುತೊಡಪುಗಳಲ್ಲಿಯೇ ಕುಳಿತು ಬಿಟ್ಟಿದ್ದೀರಲ್ಲಾ! ಅದಕ್ಕೆಂದೆ!''

"ನಾನು ಹೀಗೆಯೆ ಕುಳಿತುಕೊಂಡಿದ್ದರೆ, ಬಂದಿದ್ದವರು ಹಾಗೆಯೆ ಮರಳಿಬಿಡುತ್ತಾರೇನು ಮತ್ತೆ?''

ಹೊನ್ನಮ್ಮನಿಗೆ ರತ್ನಾಂಬಿಕೆಯ ಈ ಹೊಲಬು ತಿಳಿಯದೆ ಹೋಯಿತು. ಒಂದು ನಿಮಿಷ ಸುಮ್ಮನೆ ಇದ್ದು, ಮತ್ತೆ ಕೇಳಿದಳು.

"ತಾಂಬೂಲಕರಂಡಕವನ್ನು ಎಲ್ಲ ಸಾಹಿತ್ಯಗಳಿಂದ ತುಂಬಿ ಇರಿಸಿ ದ್ದೇನೆ; ಉಗ್ರಾಣದಿಂದ ಇನ್ನೇನನಾದರೂ ತರಿಸಬೇಕಾದುದು ಇದೆಯೇನು?''

"ಏನೇನೂ ತರಿಸಬೇಕಾಗಿಲ್ಲ. ನೀನು ಹೊರಟುಹೋಗು·· ಬೇಕಾದರೆ!''

ಒಂದೆರಡು ನಿಮಿಷಗಳ ವರೆಗೆ – ಹೊನ್ನಮ್ಮ – ರತ್ನಾಂಬಿಕೆಯ ಮುಖದ ಕಡೆಗೆ ಬಿಟ್ಟುಬಿಡದೆ ನಿಟ್ಟಿಸಿ ನೋಡಿದಳು. ಅಲ್ಲಿ ಅವಳಿಗೆ ಬೇರೆ ಯೇನು ಕಾಣಬೇಕು? ಎಂದಿನವೇ ತೊಳಗುತಿರುವ ಕಣ್ಣುಗಳ ಜ್ಯೋತಿ; ಎಂದಿನಂತಹದೇ ಗಂಭೀರಸುಂದರವಾದ ಮೊಗದ ಸಿರಿ. ಲೋಕದಲ್ಲಿ ಮನಸ್ಸು-ಹೃದಯಗಳ ಸಂವೇದನೆಗಳನ್ನು ಮುಖದಲ್ಲಿ ಬರೆದುಕೊಳ್ಳುವವರೇ ಬಹು ಜನರು; ಬರೆದುಕೊಳ್ಳದ ರತ್ನಾಂಬಿಕೆಯಂತಹರು ಎಲ್ಲಿಯೋ ಸಾವಿರಕ್ಕೆ ಒಬ್ಬರು ಇರಬಹುದಿಷ್ಟೇ! ವಿಶೇಷವೇನೂ ಇರಲಿಕ್ಕಿಲ್ಲವೆಂದು ಭಾವಿಸಿ, ಹೊನ್ನಮ್ಮ ಅಲ್ಲಿಂದ ಹೊರಟು ನಡೆದಳು. ಆಕೆ ಇಲ್ಲದಂತಾದೊಡನೆಯೆ ರತ್ನಾಂಬಿಕೆಯ ಕದಡುಬಗೆಯು ಆಕೆಯ ಹುಬ್ಬುಗಂಟಿನಲ್ಲಿ ಬಂದು ನಿಂತಿತು. 'ದ್ವೈತ ಸರಿಯೋ? ಅದ್ವೈತ ಸರಿಯೋ?' ಎಂದು ವಿಚಾರಿಸು ತ್ತಿರುವ ವೇದಾಂತಿಯದರಂತೆ ರತ್ನಾಂಬಿಕೆಯದೂ ಮುಖಭಾವವಿದ್ದಿತು. ಆದರೆ ಇವಳೇನು ವೇದಾಂತಿನಿಯಲ್ಲವೆಂಬುದು ರತ್ನಾಂಬಿಕೆಯನ್ನು ಅರಿತ ವರಿಗೆ ಸಂಪೂರ್ಣವಾಗಿ ಗೊತ್ತು!

ಆರೇಳು ನಿಮಿಷಗಳು ಕಳೆದು ಹೋಗಿರಬಹುದು; ಪರಿಚಿತರನ್ನು ಕಾಣುತಿಪುವಾಗಿನ ಕಿರುನಗೆಯ ಮೊಗದಿಂದ ಪೆದ್ದರಾಯನು ಅಲ್ಲಿಗೆ ಬಂದ. ರತ್ನಾಂಬಿಕೆ ತನ್ನ ಯೋಚನೆಯಲ್ಲಿ ತಾನು ಕುಳಿತಿದ್ದರೂ ಮನಸ್ಸಿನ ಒಂದು

ಎಳೆಯುನ್ನು ಆಗಾಗ ಕಣ್ಣನೋಟಗಳೊಂದಿಗೆ ಹೆಣೆದು ಬಾಗಿಲ ಕಡೆಗೆ ಕಳು ಹಿಸಿ, ಪೆದ್ದರಾಯನ ಬರುವಿಕೆಯನ್ನೂ ನಿರೀಕ್ಷಿಸುತ್ತಿದ್ದಳು. ಎದುರು ಬರು ತ್ತಿದ್ದ ಪೆದ್ದರಾಯನ ಮೆಲುನಗೆಗೆ ರತ್ನಾಂಬಿಕೆಯ ಮೆಲುನಗೆಯೂ ಸ್ವಾಗತ ವನ್ನು ಬಯಸಿತು. ಕೂಡಲೆ ಆತುರಭಾವವನ್ನು ಪ್ರಕಟಿಸುತ್ತ ಆಕೆ ಎದ್ದು ಮುಂದುವರಿದು ಬಂದಳು. ಪೆದ್ದರಾಯನು ಒಳಕ್ಕೆ ಬಂದು ಆಸನದಲ್ಲಿ ಕುಳಿತುಕೊಂಡ. ರತ್ನಾಂಬಿಕೆಯೂ ತನ್ನ ಕಣ್ಣಕದಿರುಗಳನ್ನು ಆತನ ಮುಖ ದಲ್ಲಿ ನಿಲ್ಲಿಸಿದ್ದ ಹಾಗೆಯೆ ತನ್ನ ಸ್ಥಳದಲ್ಲಿ ಕುಳಿತುಕೊಂಡಳು. ಆಕೆಯ ಮೊಗದ ಈಗಿನ ಸಂತೃಪ್ತಭಾವವನ್ನು ನೋಡಿದಲ್ಲಿ, ಇದುವರೆಗೆ ವಿಚಾರಿ- ಸುತ್ತಲಿದ್ದ ತೊಡಕಿನ ನಿರ್ಣಯವು ಆಗಿಬಿಟ್ಟಿತೇನೋ . . ಎನ್ನುವಂತೆ ಇದ್ದಿತು. ಬಲಗೈಯ ಕಿರುಬೆರಳಿನಿಂದ ಜರಿದ ಮುಂಗುರಳನ್ನು ಸರಿಮಾಡಿ ಕೊಳ್ಳುತ್ತ, ಕೊಂಕಿದ ಕಣ್ಣನೋಟಗಳನ್ನು ಪೆದ್ದರಾಯನ ನೋಟದೊಡನೆ ಕಾದಾಡಿಸುತ್ತ ಮಾತನಾಡಿದಳು.

"ನೀವು ಇನ್ನಿಷ್ಟು ಹೊತ್ತು ಅಪ್ಪಾಜಿಯವರ ಬಳಿಯಲ್ಲಿಯೆ ಕುಳಿ- ತಿರುತ್ತೀರೇನೋ ಎಂದಿದ್ದೆ. ನಿಮ್ಮ ಸ್ವಾಗತದ ಸಿದ್ಧತೆ ಯಾವುದೂ ಆಗಿಲ್ಲ. ನನ್ನ ಊಟದ ಕಾಲದ ಬಟ್ಟೆಗಳನ್ನು ಕೂಡ ನಾನು ಇನ್ನೂ ಬದಲಿಸಿಲ್ಲ."

ಪೆದ್ದರಾಯನು ಏನನೋ ಮಾತನಾಡಬೇಕೆಂದಿರುವಾಗಲೆ ರತ್ನಾಂಬಿಕೆ ಕುಳಿತಲ್ಲಿಂದ ಎದ್ದು, ಒಂದೆರಡು ಅಡಿ ಮುಂದೆ ಬಂದು, ಎರಡು ಸಲ ಕೂಗಿದಳು.

"ಹೊನ್ನಮ್ಮಾ! ಹೊನ್ನಮ್ಮಾ!"

ಹೊನ್ನಮ್ಮ ಆತುರದಿಂದ ಬಂದು ಕೇಳಿದಳು.

"ಏನು ಅಮ್ಮಾಜೀ?"

"ಇಳಿಹೊತ್ತಿನ ಉಪಾಹಾರಕ್ಕೆ ಬೇಕಾದ ಎಲ್ಲ ಸಿದ್ಧತೆಗಳನ್ನೂ ಮಾಡಬೇಕೆಂದು ಮಲ್ಲಬ್ಬೆಗೆ ತಿಳುಹಿಸು!"

ಹೊನ್ನಮ್ಮನಿಗೆ ಆಶ್ಚರ್ಯ; ತನ್ನ ಯಜಮಾನಿತಿ ಇಂದು ಹೀಗೆ ಏತಕ್ಕಾಗಿ ಮಾಡುತ್ತಿದ್ದಾಳೋ ಎನಿಸಿತು. ಬಳಿಕ "ಒಬ್ಬರ ಅಂತರಂಗ ಇನ್ನೊಬ್ಬರಿಗೆ ಏನು ಗೊತ್ತಾಗುವುದು?" ಎಂದುಕೊಳ್ಳುತ್ತ ಆಕೆ ಉಪ್ಪರಿ- ಗೆಯ ಮೆಟ್ಟಿಲುಗಳನ್ನಿಳಿದು ನಡೆದು ಬಿಟ್ಟಳು. ಪೆದ್ದರಾಯ ಮಾತನಾಡಿದ:

"ಏತಕ್ಕೆ ಬೇಕು ರತ್ನಾ.. ಇಳಿಹೊತ್ತಿನ ಉಪಾಹಾರ! ಇದೀಗಲೆ ಹೊಟ್ಟೆತುಂಬ ಸವಿಯೂಟವಾಗಿದೆ!"

"ಇಳಿಹೊತ್ತಿಗೆ ಇನ್ನೂ ಒಂದು ಪ್ರಹರದ ಅವಕಾಶವಿದೆಯಲ್ಲವೇ?"

ಪೆದ್ದರಾಯ ಉತ್ತರ ಕೊಡದೆ ಸುಮ್ಮಗೆ ಇದ್ದುಬಿಟ್ಟ. ರತ್ನಾಂಬಿಕೆ ಮತ್ತೆ ಕುಳಿತುಕೊಂಡು ಮಾತಿಗೆ ಮೊದಲುಮಾಡಿದಳು.

"ರಾಯಾಜೀ!" ರತ್ನಾಂಬಿಕೆ ಪೆದ್ದರಾಯನನ್ನು ಕರೆಯುವುದು ಹೀಗೆ.

"ರಾಯಾಜೀ! ನೀವು ನನ್ನ ಎದುರು ಪ್ರತಿಜ್ಞೆ ಮಾಡಿದವರು ಅಂದು ರಾಜಧಾನಿಯನ್ನು ಬಿಟ್ಟು ಹೋದಿರಿ! ನನಗೇನೋ ಈ ತುಂಬಿದ ವಿಜಯ-ನಗರ ಒಮ್ಮೆಲೆ ಬರಿದುಬರಿದಾಗಿ ಕಾಣಲು ತೊಡಗಿತು. ಎಂತಲೆ ಪೆನು-ಗೊಂಡೆಯ ಕಡೆಗೆ ಹೊರಟುಹೋದೆ!"

"ಊಂ! ಸರಿ!" ಪೆದ್ದರಾಯನು ನುಡಿದ.

"ಅಲ್ಲಿ ನಮ್ಮ ಸಂಕಣ್ಣ ಮಾವಾಜಿಯವರಿಗೆ ನಿಮ್ಮ ವಿಷಯವನ್ನೆಲ್ಲ ಹೇಳಿದೆ. ವಿರೂಪಾಕ್ಷರಾಯನ ಆಡಳಿತಕ್ಕಾಗಿ ಅವರೂ ಬೇಸತ್ತು ಹೋದ-ವರೆ! ನಿಮ್ಮ ಕಾರ್ಯಕ್ಕೆ ಸಹಾಯಮಾಡುವುದಕ್ಕಾಗಿ ಅವರಿಂದ ಭಾಷೆ-ಯನ್ನು ತೆಗೆದುಕೊಂಡಿದ್ದೆ."

"ಅಣ್ಣಾಜಿಯವರು ಎಲ್ಲ ತೊಡಕನ್ನೂ ಸುಲಭವಾಗಿ ಬಿಡಿಸಿ ಬಿಟ್ಟ-ರಲ್ಲಾ! ನಿಜವಾಗಿ ನೋಡು ರತ್ನಾ! ಅವರೆಂದರೆ ಭೂಮಿಗಿಳಿದು ಬಂದಿದ್ದ ಒಬ್ಬ ದೇವತೆಯೆಂದು ನನ್ನ ಭಾವನೆಯಾಗಿ ಬಿಟ್ಟಿದೆ ನೋಡು!"

"ಹುಂ!" ಬಿಗುಹಿನ ಧ್ವನಿಯಲ್ಲಿ ರತ್ನಾಂಬಿಕೆಯೆಂದಳು.

"ಅರಮನೆಯಲ್ಲಿ ಒಬ್ಬರೆ ಒಬ್ಬರು ನುಗ್ಗಿ, ವಿರೂಪಾಕ್ಷನಂತಹ ಕ್ರೂರನಾದ ವೀರನನ್ನು ಕೊಲ್ಲಬಹುದಾದ ಕೆಚ್ಚು, ನಾಡಿನ ಜನರ ಸಂಕಟ ವನ್ನು ಕಂಡು ಕರಗಿ ಕಣ್ಣೀರಿಡುವ ಮೆಲ್ಪು ಎರಡೂ ಜೊತೆಜೊತೆಯಾಗಿ ಅಣ್ಣಾಜಿಯವರ ಹೃದಯದಲ್ಲಿ ಇವೆ. ತಾನಾಗಿ ಕೊರಳಿಗೆ ಮಾಲೆ ಹಾಕ ಲಿಕ್ಕೆಂದು ಬಂದ ರಾಜ್ಯಲಕ್ಷ್ಮಿಯನ್ನು ಒಲ್ಲೆನೆಂದು ಹಿಂದಿರುಗಿಸುವ ತ್ಯಾಗಿ, ಈ ಕಾಲದಲ್ಲಿ ಇನ್ನೆಲ್ಲಿಯಾದರೂ ಸಿಕ್ಕುವನೇ? ರತ್ನಾ, ಯಾವನೋ ಒಬ್ಬ ರಾಜರ್ಷಿಯು ನಮ್ಮ ಕನ್ನಡನಾಡಿನ ಉದ್ಧಾರಕ್ಕಾಗಿ ಅಣ್ಣಾಜಿಯವರಾಗಿ

ಹುಟ್ಟಿ ಬಂದಿದ್ದಾನೆ...ಇದು ಖಂಡಿತ!"

ರತ್ನಾಂಬಿಕೆ ಬರೀ ತಲೆಕೊಡಹುತ್ತಿದ್ದಳು – ಮಾತ್ರ. ಪೆದ್ದರಾಯ ಕೂಗಿ ಕೇಳಿದ.

"ಏನು ಯೋಚಿಸುತ್ತಿದ್ದೀಯೆ ರತ್ನಾ?"

"ಏನೂ ಇಲ್ಲ! ನಿಮ್ಮ ಮಾತುಗಳನ್ನೆ ಕೇಳುತ್ತಲಿದ್ದೇನೆ."

"ರತ್ನಾ! ಇದುವರೆಗೆ ಅವರನ್ನು ನಾನು ದೊಡ್ಡ ಹೇಡಿಯೆಂದು ಭಾವಿಸಿದ್ದೆ. ಹಾಗೆಂದು ಅವರೆದುರಿನಲ್ಲಿಯೆ ಅವರನ್ನು ಅನೇಕ ಸಲ ಹಳಿದು ಹೀಗಳೆದಿದ್ದೇನೆ ಕೂಡ! ಮಂಗಗಳಿಗೆಲ್ಲಾ ಮಾಣಿಕದ ಬೆಲೆ ಏನು ಗೊತ್ತಾಗಬೇಕು ರತ್ನಾ?"

"ನೀವೇನು ಇನ್ನು ಮೇಲೆ ದೊರೆಗಳಾಗುವವರಿದ್ದೀರೋ? ಹೊಗಳುಭಟರಾಗುವವರಿದ್ದೀರೋ?."

ರತ್ನಾಂಬಿಕೆಯ ಮಾತಿನ ರೀತಿ ಪೆದ್ದಣ್ಣನ ಅಭಿಮಾನದ ಹೃದಯವನ್ನು ಇರಿದು ಇರಿದು ಅಳುಕಿಸಿತು. ಆತನು ಸ್ವಲ್ಪ ಹೊತ್ತು ಹಾಗೆಯೆ ಇದ್ದು, ಬಳಿಕ ಏನನೋ ಮಾತನಾಡಬೇಕೆಂದಿರುವಾಗಲೆ ರತ್ನಾಂಬಿಕೆ ಮತ್ತೆ ಮಾತನಾಡಿದಳು.

"ಅಂತೂ ನಿಮ್ಮ ಪ್ರತಿಜ್ಞಾಪೂರ್ತಿಯ ಹೊರೆಯನ್ನು ಅಣ್ಣಾಜಿಯವರು ಇಳಿಸಿ, ನಿಮಗೆ ಎಲ್ಲವನ್ನೂ ಸುಲಭಮಾಡಿಕೊಟ್ಟರು. ಸಾಮ್ರಾಜ್ಯ-ಮುಕುಟ ಸ್ವಂತದ ಶ್ರಮವೇನೂ ಇಲ್ಲದೆ ನಿಮ್ಮ ತಲೆಯಮೇಲೆ ಬಂದು ಕುಳಿತಿತು. ನಿಮ್ಮ ಅದೃಷ್ಟ ಒಳ್ಳೆಯದು! ಬಹಳ ಒಳ್ಳೆಯದು!"

ರತ್ನಾಂಬಿಕೆಯ ಇವೆಲ್ಲ ಮಾತುಗಳೂ ಮೊನೆಗೊಂಡು ಪೆದ್ದರಾಯನನ್ನು ಚುಚ್ಚಿ ಗಾಯಗೊಳಿಸಿದುವು. ಅವನು ಪಡುತ್ತಿರುವ ಕಳವಳವನ್ನು ಕಂಡು, ತಡೆಯಲಾರದೆಯೊ ಏನೋ..! ರತ್ನಾಂಬಿಕೆ ಮಾತಿನ ರೀತಿಯನ್ನು ಬದಲಿಸಿದಳು.

"ರಾಜಕಾರ್ಯದ ಸಂಪ್ರದಾಯ ಹೀಗೆಯೆ ಇದೆಯಲ್ಲವೇ! ಸೈನ್ಯ-ಸೇನಾಪತಿಗಳು ಯುದ್ಧಮಾಡಬೇಕು! ದೊರೆಯು ದೊರೆಯಾಗಿ–ಸಿಂಹಾಸನದಲ್ಲಿ ಕುಳಿತುಕೊಂಡಲ್ಲಿಯೆ – ಜಯಾಪಜಯಗಳಿಗೆ ಗುರಿಯಾಗಬೇಕು! ಈರೀತಿ ಇಂದಿನದಲ್ಲ, ನಿನ್ನೆಯದಲ್ಲ. ಅದೆಲ್ಲ ಹೋಗಲಿ ರಾಯಾಜೀ!

ಇನ್ನು ಮೇಲೆ ದಂಡನಾಯಕರು ನರಸಿಂಹನಾಯಕರೇ ಆಗುವರಲ್ಲವೇ?"

ನರಸಿಂಹನಾಯಕನ ಹೆಸರು ಹೊರಟೊಡನೆಯೆ ಪೆದ್ದಣ್ಣನಿಗೆ ಯಾವುದೋಮಾತಿನ ನೆಸಪನ್ನು ಬಡಿದು ಎಬ್ಬಿಸಿದಂತಾಯಿತು. ರತ್ನಾಂಬಿಕೆಯ ಮಾತಿಗೆ ಏನಾದರೂ ಉತ್ತರಕೊಡಬೇಕೆಂದು, ವಿಚಾರದ ಗೊಂದಲದ ಧ್ವನಿಯಲ್ಲಿ ಅವನು ಹೇಳಿದ.

"ಅಂ·· ಏನಾಗುವುದೋ ನೋಡಬೇಕು!"

"ಏನಾಗುವುದೋ ನೋಡಬೇಕು! ಇನ್ನು ಯಾರಾದರೂ ಬರಲು ಇರುವರೇ ಆ ಅಧಿಕಾರಕ್ಕೆ?"

"ಇನ್ನು ಯಾರು··? ಹೂಂ! ಇನ್ನು ಯಾರೂ ಇಲ್ಲ! ಅವರಲ್ಲದೆ ಇನ್ನೊಬ್ಬರು ಇದ್ದಾರೆ ಯಾರು?"

ಪೆದ್ದರಾಯನ ಕಡಡಿದ ಬಗೆ, ತನ್ನ ಮಾತುಗಳ ಮೂಲಕವಾದುದೆಂದು ರತ್ನಾಂಬಿಕೆ ಭಾವಿಸಿದಳು. ಈ ಸಂದರ್ಭದಲ್ಲಿ ತಾನು ಹಾಗೆ ಚುಚ್ಚುಮಾತುಗಳನ್ನು ಆಡಬಾರದಾಗಿದ್ದಿತೆಂದು ತನ್ನಲ್ಲಿ ತಾನೆ ಎಂದುಕೊಂಡಳು. ಬಿಟ್ಟ ಬಾಣವನ್ನೂ ಆಡಿದ್ದ ಮಾತನ್ನೂ ತಿರುಗಿ ತೆಗೆದುಕೊಳ್ಳುವುದಾದರೂ ಹೇಗೆ? ಅರೆಗಳಿಗೆಯವರೆಗೆ ಇಬ್ಬರೂ ಮಾತನಾಡದೆ ಕುಳಿತಿದ್ದರು. ಆಗ ರತ್ನಾಂಬಿಕೆಯದು ಒಮ್ಮೆ ಒಳನೋಟ, ಇನ್ನೊಮ್ಮೆ ಹೊರನೋಟ. ಪೆದ್ದರಾಯನು ಬಯಲ ಮೇಲೆ ಮೂಡಿದ್ದ ಅದಾವ ಚಿತ್ರವನ್ನು ನಿಟ್ಟಿಸಿ ನೋಡುತ್ತಿದ್ದನೇನೋ! ರತ್ನಾಂಬಿಕೆ ಮಾತಿಗೆ ಮೊದಲುಮಾಡಿದಳು.

"ರಾಯಾಜೀ, ಪಟ್ಟಾಭಿಷೇಕ......"

ನಡುವೆಯೆ ತಡೆದು ಪೆದ್ದರಾಯನು ಕೇಳಿದನು.

"ನರಸಿಂಹನಾಯಕರ ಮಗಳ ಹೆಸರೇನು ರತ್ನಾ?"

"ಅದೇನು? ಅವಳ ಹೆಸರೇತಕ್ಕೆ ಬೇಕಾಯಿತೀಗ?"

ಇದನ್ನು ಕೇಳುತ್ತಿರುವಾಗ ರತ್ನಾಂಬಿಕೆಯ ನಿಡುನೋಟಗಳು – ಎದುರಿದ್ದವನ ಹೃದಯಪರೀಕ್ಷೆ ಮಾಡುವಾಗಿನ– ಸೂಕ್ಷ್ಮತೆಯನ್ನು ಪಡೆದಿದ್ದುವು. ಬೆಚ್ಚಿಬಿದ್ದವನ ಆತುರದಲ್ಲಿ ಪೆದ್ದರಾಯನು ಕೇಳಿದ.

"ಅವಳ ಹೆಸರನ್ನು ಕೇಳಿದರೆ ಏನಾದರೂ ತಪ್ಪಾಯಿತೇನು?"

"ಹಾಗೇನೂ ಅಲ್ಲ! ಸಮಯ–ಸಂದರ್ಭಗಳಿಲ್ಲದೆ ಇನ್ನೊಬ್ಬರ

ಹೆಸರನ್ನು ತೆಗೆದುಕೊಂಡು ಮಾಡುವುದೇನು?.. ಎಂದೆ."

"ಏನೋ! ಇದುವರೆಗೆ ನಾನು ಅವಳನ್ನು ನೋಡಿರಲಿಲ್ಲ. ಮೊನ್ನೆಯ ದಿನ ತಾನೆ ನೋಡಿದೆ. ಎಂತಲೆ ಕೇಳಿದೆ: ಅವಳ ಹೆಸರೇನೆಂದು!"

"ಮೊನ್ನೆಯ ದಿನವೆ ನೋಡಿದಿರಾ?" ವಿಸ್ಮಯ – ಆತುರಗಳಿಂದ ರತ್ನಾಂಬಿಕೆ ಕೇಳಿದಳು.

"ಅಹುದು! ಕಾರ್ಯಾಂತರದಿಂದ ನರಸಿಂಹನಾಯಕರ ಮನೆಗೆ ಹೋಗಿದ್ದೆ. ಅದೇನೋ ಅಂದು ಆಕೆ, ನಾಯಕರ ವಿಶ್ರಾಂತಿಭವನದಲ್ಲಿಯೇ ಅವರೆದುರು ಹಾಡುತ್ತ ಕುಳಿತಿದ್ದಳು."

"ಹಾಡುತ್ತ ಕುಳಿತಿದ್ದಳೇ?"

"ಅಹುದು ರತ್ನಾ! ತುಂಬ ಚೆನ್ನಾಗಿ ಹಾಡುವಂತೆ ಕಾಣುತ್ತದೆ-ಯಲ್ಲವೆ ಆಕೆ?"

ಎತ್ತಕಡೆಗೋ ನೋಡುತ್ತ ರತ್ನಾಂಬಿಕೆ ಹೇಳಿದಳು.

"ಹೂಂ..! ಹಾಡುತ್ತಿರಬೇಕು.. ಚೆನ್ನಾಗಿ!"

ಮತ್ತೆ ಸ್ವಲ್ಪ ಕಾಲ ಇಬ್ಬರೂ ಸುಮ್ಮಗೆ ಕುಳಿತಿದ್ದರು. ಬಳಿಕ ಒಂದುಬಗೆಯ ಈರ್ಷೆಯ ಧ್ವನಿಯಲ್ಲಿ ರತ್ನಾಂಬಿಕೆ ಕೇಳಿದಳು.

"ನೀವು ಕಮಲಾಂಬಿಕೆಯು ಹಾಡುತ್ತಿರುವುದನ್ನೂ ಕೇಳಿದಿರೇನು?"

"ಏನು ಆಕೆಯ ಹೆಸರು? ಕಮಲಾಂಬಿಕೆಯೆಂದೇ?"

"ಹುಂ! ಕಮಲಾಂಬಿಕೆ" ಎಂದು ನುಡಿದು ತಗ್ಗಿದ ಮೊಗದವಳಾಗಿ ರತ್ನಾಂಬಿಕೆ ಕುಳಿತುಬಿಟ್ಟಳು. ಪೆದ್ದರಾಯನೂ ಹಾಗೆಯೆ ಕುಳಿತಿದ್ದ. ರತ್ನಾಂಬಿಕೆ ಒಮ್ಮೆಲೆ ಹೇಳಿದಳು.

"ರಾಯಾಜೀ! ಇಂದು ನನಗೆ ತುಂಬ ತಲೆನೋವು! ಮಾತುಕತೆ ಒಂದೂ ಸೊಗಸದಾಗಿದೆ. ಸುಮ್ಮಗೆ ಬಿದ್ದುಕೊಂಡಿರಬೇಕು..ಎನಿಸುತ್ತಿದೆ."

"ಅದೇನು? ತಲೆನೋವಿಗೇನು ಕಾರಣ? ಮಲಗಿಕೊಂಡು ಬಿಡು ಹಾಗಾದರೆ! ನಾನೂ ಇಂದು ಶಾಂತಿಕುಟೀರಕ್ಕೆ – ಅಣ್ಣಾಜಿಯವರ ಹತ್ತಿರ – ಹೋಗಬೇಕಾಗಿದೆ."

"ಅಣ್ಣಾಜಿಯವರು ಇರುವುದೆಲ್ಲಿ? ಶಾಂತಿಕುಟೀರದಲ್ಲಿಯಲ್ಲವೇ?"

"ಅಹುದು! ನಿನಗೆ ತಲೆನೋವೆನೋ! ಹೋಗು! ಮಲಗಿ-

ಕೊಂಡುಬಿಡು!"

ಪೆದ್ದರಾಯನು ಎದ್ದು ನಡೆದುಬಿಟ್ಟನು. ದೊರೆಯಾಗಲಿರುವ ಪೆದ್ದ-ರಾಯನ ಇಳಿಹೊತ್ತಿನ ಉಪಾಹಾರಕ್ಕೆಂದು – ಮಲ್ಲಬ್ಬೆ ಅಡಿಗೆಮನೆಯಲ್ಲಿ-ರುಚಿರುಚಿಯ ತಿಂಡಿಗಳನ್ನು ಮಾಡಿಯೆ ಮಾಡುತ್ತಿದ್ದಳು. ಉಪಾಹಾರ ವನ್ನು ಮಾಡಲಿಕ್ಕೆ ತಾನೆ ಹೇಳಿಕಳುಹಿಸಿದ್ದ ಸಂಗತಿ ರತ್ನಾಂಬಿಕೆಗೆ ಜ್ಞಾಪಕವಾದರೂ ಇದ್ದಿತೋ ಇಲ್ಲವೋ!

---

## ೬ನೆಯ ಪರಿಚ್ಛೇದ

ಅಕ್ಕಬಾರದೆ ಇದ್ದರೆ ಅಮಾವಾಸ್ಯೆ ಬಾರದೆ ಇರುವುದೇ? ವಿಜಯ-ನಗರದ ಸಿಂಹಾಸನದಲ್ಲಿ ದೊರೆಯಿಲ್ಲವೆಂದು, ಬರಲಿರುವ ಮಕರ ಸಂಕ್ರ-ಮಣದ ಪರ್ವಕಾಲ ಅದೇತಕ್ಕೆ ತಡೆದು ನಿಂತೀತು? ದೊರೆಗಳ ಊಳಿಗದಾಳು-ಗಳು ಇಲ್ಲದ ಮೋಹಮಾಯೆಗಳಿಗೆ ಮರುಳಾಗಿ ಕರ್ತವ್ಯಚ್ಯುತರಾಗುತಿರು-ವಂತೆ – ದೊರೆಗಳ ದೊರೆ – ಕಾಲರಾಯನ ಉಳಿಗದಾಳುಗಳಾದ ಪಂಚ-ಮಹಾಭೂತಗಳು, ತಮ್ಮ ಕರ್ತವ್ಯವನ್ನು ವಿಾರಿ ನಡೆದುದರ ಕತೆಯನ್ನು ಯಾರಾದರೂ ಕೇಳಿರುವರೇ? ಒಂದರ ಹಿಂದೆ ಒಂದು ದಿನಗಳು ಮರೆಯಾಗಿ, ಮಕರಸಂಕ್ರಮಣದ ದಿನವೂ -- ನಿನ್ನೆಯ ಇರುಳಿನ ತಲೆಯನ್ನು ತುಳಿದು – ಇಂದಿನ ಅರುಣನ ಹೆಗಲನ್ನೇರಿ – ತೊಳತೊಳಗುವ ತೇಜದೊಂದಿಗೆ ಪಂಪಾಪತಿಯ ಸಂದರ್ಶನಕ್ಕೆಂದು ಬಂದುನಿಂತಿತು.

ದಿವ್ಯಜ್ಯೋತಿಯ ದರ್ಶನವೆ ಭಾರತೀಯರ ಆಧ್ಯಾತ್ಮಿಕ ಜೀವನದ ಗುರಿಯಲ್ಲವೇ? ಎಂತಲೆ ಅವರಿಗೆ ಸವಿತೃಮಂಡಲಮಧ್ಯವರ್ತಿಯಾದ ನಾರಾಯಣನೇ ಉಪಾಸ್ಯದೈವತ. ಎಂತೆಂತಹ ರಾಜ್ಯಸಿಂಹಾಸನಗಳನ್ನೂ – ಉರುಳಿಸಿದ – ಹೊರಳಿಸಿದ – ನರಸಿಂಹರು ಭರತಖಂಡದಲ್ಲಿ ಹುಟ್ಟಿ ಹುಟ್ಟಿ ಹೋಗಿರುವರು; ಆದರೆ ಇಲ್ಲಿಯ ಜನತೆಯ ಹೃದಯದಲ್ಲಿಯ ಶ್ರದ್ಧೆ-ಭಕ್ತಿಗಳ ಸಿಂಹಾಸನವನ್ನು ಕಿತ್ತಿ ಉರುಳಿಸಲೆಂದು ಹವಣಿಸಿದವರಲ್ಲಿ, ಯಾರೂ ಸಫಲಪ್ರಯತ್ನರಾದವರಿಲ್ಲ. ಎಷ್ಟೊಂದು ಭೀಕರವಾದ ಸಾಮಾಜಿಕ ವಿಪತ್ತಿಗಳು ಬಂದು ಬಂದು ಒದವಿ ನಿಂತರೂ ಭಾರತೀಯರು ತಮ್ಮ

ಧರ್ಮಾಚರಣೆಯ ಮೇರೆಗಳನ್ನು ದಾಟಿ ನಡೆದವರಲ್ಲ! ಉಪಾಸನೆ ಅರ್ಚನೆಗಳಿಂದ ಮುಖತಿರುಗಿಸಿದವರಲ್ಲ! ವಿಜಯನಗರದ ಸಾಮ್ರಾಜ್ಯಕ್ಕೆ ಒದಗಿದ್ದ ಈಗಿನ ಅಶಾಂತಿಯ ಸಂಕ್ರಾಂತಿಕಾಲ, ತಮ್ಮೆಲ್ಲರ ವೈಯಕ್ತಿಕ ಪೂಜೆ-ಪ್ರಾರ್ಥನೆಗಳಿಂದಲೆ ತೊಲಗಿಹೋಗುವುದೆಂದು ಪ್ರಜೆಗಳೆಲ್ಲರದೂ ಸ್ಥಿರವಾದ ನಂಬುಗೆ. ಎಂತಲೆ ಯಾವ ಕೊರತೆಗಳೂ ಇಲ್ಲದಂತೆ – ರಾಜಧಾನಿಯ ಜನರು – ಮಕರಸಂಕ್ರಮಣದ ಹಬ್ಬದ ವಿಧಿವಿಧಾನಗಳನ್ನು ನೆರವೇರಿಸುವುದರಲ್ಲಿ ಇದ್ದರು.

ತುಂಗಭದ್ರೆಯ ತಡಿಯಲ್ಲಿ ನೋಡಿದರೆ ಪರ್ವಸ್ನಾನದ ಜನರ ಗೊಂದಣವೇ ಗೊಂದಣ! ಹೊಳೆಯ ಮೆಟ್ಟಿಲುಗಟ್ಟೆಯಾವುದೋ? ಹರಿಯುವ ಹೊನಲು ಯಾವುದೋ? ಒಂದೂ ಗೊತ್ತಾಗುವಂತಿರಲಿಲ್ಲ. ಪಂಪಾಪತಿಯ ದೇವಾಲಯದಲ್ಲಿ ನೋಡಿದರೆ – ಹೆಂಗುಸರೆನ್ನದೆ ಗಂಡುಸರೆನ್ನದೆ – ಹಿಂಡು ಹಿಂಡಾಗಿ – ನುಗ್ಗುವ ಅಖಂಡವಾದ ಜನಪ್ರವಾಹಕ್ಕೆ ಮೊದಲು – ಕಡೆ ಕಾಣುತ್ತಿರಲಿಲ್ಲ. ಬೀದಿಬೀದಿಯಲ್ಲಿಯೂ ಹಬ್ಬದ ಉತ್ಸಾಹದ ಕೋಲಾಹಲ; ಮನೆಮನೆಯಲ್ಲಿಯೂ ಉಲ್ಲಸಿತಭಾವದ ಬೆಳವಣಿಗೆ. ಜ್ಯೋತಿರ್ಮೂರ್ತಿಯ ಪೂಜೆಮಾಡಿ ತಣಿದೆವೆಂದು ಹಿರಿಯರಿಗೆ ಹಿಗ್ಗು; ಹಬ್ಬದ ಸವಿಯುಣಿಸು ದೊರೆಯುವುದೆಂದು ಕಿರಿಯರಿಗೆ ಹಿಗ್ಗು; ದಿನಕ್ಕಿಂತ ಒಳ್ಳೆಯ ಸೀರೆಕುಪ್ಪಸ, ಹೊಂದೊಡವು ಹೂಮಾಲೆಗಳನ್ನಿಟ್ಟುಕೊಂಡಿದ್ದೇವೆಂದು ಹೆಣ್ಣುಮಕ್ಕಳಿಗೆ ಹಿಗ್ಗು; ಅಂತೂ ರಾಜಧಾನಿಯೆಲ್ಲವೂ ಹಿಗ್ಗಿನ ಹುಲುಸಾದ ಬೆಳೆಯಿಂದ ತುಂಬಿನಿಂತಿದೆ.

ಜನರು ಕಷ್ಟದಲ್ಲಿರುವಾಗ ಗಳಿಗೆ ಯುಗವಾಗಿ ಪರಿಣಮಿಸುವುದಂತೆ; ಹಾಗೆಯೆ ಹಿಗ್ಗಿನಲ್ಲಿರುವಾಗ ಪ್ರಹರಗಳು ಪಲಪಲಗಳಂತೆ ಹಾರಿಹೋಗುವುದರಲ್ಲಿ ಆಶ್ಚರ್ಯವೇನು? ವಿಜಯನಗರದ ಜನರಿಗೆಲ್ಲ ಎನಿಸುತ್ತಿರಬಹುದು: "ಇಂದೊಂದು ದಿನವಾದರೂ ಸೂರ್ಯ ನಿಧಾನವಾಗಿ ತನ್ನ ರಥ ನಡೆಯಿಸಬಾರದೇ··?" ಎಂದು. ಆದರೆ ಎಂದಿಗಿಂತಲೂ ಇಂದಿನ ಅವನ ಓಟ ಚುರುಕಿನದೆಂದು ಕಂಡಿತು. ಉತ್ಸವಪ್ರಿಯರಾದ ಕೆಲವು ಅಶಕ್ತ ಮನಸ್ಸಿನ ಜನರು, ಸೂರ್ಯನ ಈ ಓಟಕ್ಕಾಗಿ ಅವನನ್ನು ಬೈದು ಶಪಿಸುತ್ತಿರಲೂ ಬಹುದು. ಮೂರು ಪ್ರಹರಗಳು ಮುಗಿದುಹೋದ

ಅರಮನೆಯ ಜಯಘಂಟೆಯ ಶಬ್ದವು ಅನೇಕರಿಗೆ ಸಿಡಿಲಿನ ಸಪ್ಪಳಂತೆ ಎದೆಯನ್ನು ನಡುಗಿಸಿರಬಹುದು. 'ಇನ್ನು ಒಂದೆ ಒಂದು ಪ್ರಹರದ ವರೆಗೆ ಮಾತ್ರ ಈ ದಿನದ ಸಹವಾಸ ನಮಗೆ' ಎಂಬ ಮರುಕದ ಉದ್ಗಾರವನ್ನೂ ತೆಗೆಯಿಸಿರಬಹುದು. ಸುಖದಲ್ಲಿ ದೇವರನ್ನು ಕೊಂಡಾಡಿ ಕೊನೆಯುವುದೂ ಸಂಕಟದಲ್ಲಿ ಅದೇ ದೇವರನ್ನು ಬೀಳುಗಳೆದು ತೆಗಳುವುದೂ ಜನಸಾಮಾನ್ಯರ ಸ್ವಭಾವವೆ ಅಲ್ಲವೆ !

ಮೂರು ಪ್ರಹರದ ಗಂಟೆಯಾಗಿ ಒಂದು ಗಳಿಗೆ ಮುಗಿಯಲು ಬಂದಿದ್ದಿತು. ಆಗ ಕಮಲಾಂಬಿಕೆಯು ತನ್ನ ಅಂತಃಪುರದ ಓಲಗಸಾಲೆಯಲ್ಲಿ – ರತ್ನಾಂಬಿಕೆಯ ಬರುವಿಕೆಯನ್ನು – ಹಾರಯಿಸುತ್ತ ಕುಳಿತಿದ್ದಳು. ಸಿಂಗಮ್ಮ ರತ್ನಾಂಬಿಕೆಯ ಆತಿಥ್ಯಕ್ಕಾಗಿ ಒಂದೊಂದೆ ಸಾಹಿತ್ಯಗಳನ್ನು ಸಜ್ಜುಗೊಳಿಸುವುದರಲ್ಲಿ ಇದ್ದಳು. ಕಮಲಾಂಬಿಕೆಯ ಮಾರ್ಗಪ್ರತೀಕ್ಷೆಯ ದೃಷ್ಟಿ ಬರುಬರುತ್ತ ನೆನಪಿನ ಹೊತ್ತಗೆಯ ಹಾಳೆಗಳನ್ನು ಮಗುಚಿ ಹಾಕುವುದಕ್ಕೆ ತೊಡಗಿತು.

* * * *

"ಕಳೆದ ಮಹಾನವಮಿಯ ಉತ್ಸವಕ್ಕೆಂದು ತುಳುವ ನರಸಿಂಹ ಇಲ್ಲಿಗೆ ಬಂದಿದ್ದ. ಆಗ ಆ ಹಬ್ಬದ ದಿನಗಳೆಲ್ಲವೂ ಹೊಸ ಹೊಸ ಸೊಬಗನ್ನು ಹೊತ್ತುಕೊಂಡು ಬರುತ್ತಿದ್ದುವು. ಎಂತಲೇ ಅಂದಿನ ಹತ್ತು ದಿನಗಳನ್ನೂ ಸುಂದರವಾದ ಒಂದು ಕನಸಿನ ನೋಟದಂತೆ ಕಳೆದೆ; ಆದರೆ ಇಂದಿನ ಮಕರಸಂಕ್ರಮಣದ ಹಬ್ಬ ನನ್ನ ಪಾಲಿನ ಆನಂದೋತ್ಸಾಹಗಳನ್ನು ತೆಗೆದುಕೊಂಡು ಬಂದಿಲ್ಲವೇನು? ಒಬ್ಬಳೆ ಕುಳಿತಿದ್ದರೂ ಮನಸ್ಸು ಬರಿದುಬರಿದಾಗಿ ಎನಿಸುವುದು. ಇನ್ನಾರನ್ನಾದರೂ ಜೊತೆಗೊಂಡು ಕುಳಿತರೂ ಬರಿದುಬರಿದಾಗಿಯೆ ಎನಿಸುವುದು. ಸಿಂಗಮ್ಮನಿಗೊಂದು ಹುಚ್ಚು ! ಊಟ ರುಚಿಯೆನಿಸಿದರೆ ಯಾರಾದರೂ ಉಣ್ಣದೆ ಇರುವರೇ? 'ಸರಿಯಾಗಿ ಉಣ್ಣಲೊಲ್ಲೆಯೇಕೆ?' ಎಂದು ಸುಮ್ಮಸುಮ್ಮನೆ ನನಗೆ ತೊಂದರೆ ಕೊಟ್ಟಳು."

* * * *

"ಮಹಾನವಮಿಗೆ ನರಸಿಂಹ ಬಂದಿದ್ದಾಗ ಒಂದು ದಿನ ವಿಚಿತ್ರವಾಗಿ ಹೋಯಿತು. ಸಿಂಗಮ್ಮ ಆ ದಿನ ನನಗೆ–ಬೇಡಬೇಡವೆಂದರೂ–ಕೇಳದೆ–

ಶ್ರೀಶಾರದಾಂಬೆಯಂತೆ ಉಡುಗೆತೊಡಿಗೆ ಮಾಡಿದಳು. ಎತ್ತರವಾದ ಪೀಠವೊಂದರ ಮೇಲೆ ಕುಳ್ಳಿರಿಸಿ, ಕೈಯಲ್ಲಿ ವೀಣೆಯನ್ನು ತಂದುಕೊಟ್ಟಳು. ನಾನೂ ಬೇಕಾಗಿಯೋ ಬೇಡವಾಗಿಯೋ ಶ್ರೀಶಾರದಾಂಬೆಯ ಠೀವಿಯಲ್ಲಿಯೆ ಕುಳಿತುಕೊಂಡು ಬಿಟ್ಟೆ. ಕೆಟ್ಟ ಮುಖದ ಸಿಂಗಮ್ಮ ಮೊದಲೇ ಹೇಳಿ ಇರಿಸಿದ್ದಳೇನೋ! ಒಮ್ಮಿಲೆ ನರಸಿಂಹ ಕಳ್ಳಹಜ್ಜೆಯಿಡುತ್ತ ಒಳಕ್ಕೆ ನುಗ್ಗಿಬಿಟ್ಟ. ಕೂಡಲೆ ನಾನು ಪೀಠದಿಂದ ಕೆಳಕ್ಕಿಳಿದುಬಿಡಬೇಕೆಂದೆ; ಆದರೆ ಪಾಳು ಸಿಂಗಮ್ಮ, ಹಿಂದೆ ಬಂದು ಗಟ್ಟಿಯಾಗಿ ಹಿಡಿದು ಅಲುಗಾಡದಂತೆ ಮಾಡಿದಳು. ನನ್ನ ಮುಖ ನಾಚಿಕೆಯಿಂದ ಕೆಳಕ್ಕೆ ಬಾಗಿಕೊಂಡಿತು. 'ಬಿಡೇ ಸಿಂಗಮ್ಮಾ!' ಎಂದು ಕೂಗಿದರೆ ಬಿಟ್ಟಾಳೇ ಅವಳು? ಯಾವಾಗಲೂ ಸಿಂಗಮ್ಮನದು ಇಂತಹ ನಗೆಯಾಟವೇ!"

ನರಸಿಂಹ ಬಂದು ನಗುನಗುತ್ತಲೆ ಉದ್ದಕ್ಕೆ ಬಿದ್ದು ಸಾಷ್ಟಾಂಗ ನಮಸ್ಕಾರ ಮಾಡಿ 'ದೇವೀ! ಶ್ರೀಶಾರದಾಂಬಾ! ವಿದ್ಯೆ ಬುದ್ಧಿ ಕೊಡು ತಾಯಿ!' ಎಂದು ಗಟ್ಟಿಯಾಗಿ ನುಡಿದು ಬಿಟ್ಟ. ಆತನು ಹಾಗೆ ನುಡಿದುದರಿಂದ ನನ್ನ ಎದೆಯು ಅರಳಿ, ನಗೆಯಾಗಿ ಹೊರಕ್ಕೆ ಹೊರಡಬೇಕೆಂದರೆ ನಾಚಿಕೆ ಅದನ್ನು ತಡೆದು ಹಿಡಿಯಿತು. ನರಸಿಂಹನದೊಂದು ವಿಚಿತ್ರವಾದ ಸ್ವಭಾವವೇ! ನಾನು ಅದೇ ಪೀಠದಲ್ಲಿ ಹಾಗೆಯೆ ಕುಳಿತಿದ್ದು, ಸಂಗೀತಕ್ಕೆ ಆರಂಭಿಸಬೇಕೆಂದು ಬಲುವೆುಮಾಡಲು ತೊಡಗಿದ. ಸಿಂಗಮ್ಮನೂ ಆತನ ಅಭಿಪ್ರಾಯವನ್ನು ಎತ್ತಿಹಿಡಿದು, ನನ್ನನ್ನು ಒತ್ತಾಯಪಡಿಸಲು ತೊಡಗಿದಳು. ನಿರುಪಾಯಳಾಗಿ ವೀಣೆಯನ್ನು ಸರಿಪಡಿಸಿಕೊಂಡು ನುಡಿಸಲು ಮೊದಲು ಮಾಡಿದೆ. ನಾಚಿಕೆಯಿಂದ ಕಂಪಿಸುತ್ತಲಿದ್ದ ಬೆರಳುಗಳು ಮೊದಮೊದಲು ಸ್ವಲ್ಪ ಅಡೆತಡೆ ಮಾಡಿದುವು. ಬಳಿಕ ಬಳಿಕ ಬೆರಳುಗಳು ಸುಲಭವಾಗಿ ಮೆಟ್ಟಿಲು ಮೆಟ್ಟಿಲುಗಳಲ್ಲಿ ಹರಿದಾಡಲು ತೊಡಗಿದುವು. ಅಂದಿನದೊಂದು ಆಶ್ಚರ್ಯದ ಸಂಗತಿಯೆ! ಆ ದಿನ ನಾನು ನುಡಿಸಿದ್ದಂತೆ ಮೋಹನ–ದೇವಗಾಂಧಾರೀ ರಾಗಗಳನ್ನು ಅದುವರೆಗೆ ನಾನೆಂದೂ ನುಡಿಸಿರಲಿಲ್ಲ; ಆ ಮೇಲೆಯೂ ಎಷ್ಟೆಷ್ಟು ಪ್ರಯತ್ನಮಾಡಿದರೂ ನುಡಿಸುವುದಕ್ಕಾಗಿಲ್ಲ. ಸಂಗೀತ ಮುಗಿದೊಡನೆಯೆ ಅಂದು ನರಸಿಂಹ ಆಡಿದ ಮಾತು ಎಷ್ಟು ಚೆನ್ನಾಗಿದ್ದಿತು! ಅಂತೆ: "ಹೆಂಗುಸರು ಬರೀ ಶ್ರೀಶಾರದಾಂಬೆಯರಾಗಿ ವೀಣೆ

ತೆಗೆದುಕೊಂಡು ಕುಳಿತಿದ್ದರೆ ನಡೆಯದಂತೆ; ಸಂದರ್ಭವೊದಗಿದಾಗ ಅವರು ಪ್ರಳಯದುರ್ಗೆಯರಾಗಿ ಶಸ್ತ್ರಗಳನ್ನು ಹಿಡಿದು ನಿಲ್ಲುವವರೂ ಆಗಿರಬೇಕಂತೆ!"

*   *   *   *

"ಮರುದಿನವೆ ದುರ್ಗಾಷ್ಟಮಿ. ಅಂದು ಸಿಂಗಮ್ಮ ನನಗೆ ದುರ್ಗೆಯ ವೇಷ ಹಾಕಿದಳು. ಇನ್ನೂ ಆರುಕೈಗಳನ್ನು ಕಟ್ಟಿ, ಎಂಟುಕೈಗಳಲ್ಲಿಯೂ ಒಂದೊಂದು ಆಯುಧವನ್ನು ಕೊಟ್ಟು ನಿಲ್ಲಿಸಿದಳು. ಈ ವೇಷವನ್ನು ನೋಡಿದಾಗ ನರಸಿಂಹ ಏನು ಹೇಳುವನೋ ಕೇಳಬೇಕೆಂದು ಕಿವಿಗಳು ತವಕದಿಂದ ನರ್ತಿಸುತ್ತಿದ್ದುವು. ಮುನ್ನಿನ ದಿನದಂತೆಯೆ ಆತನು ಅಲ್ಲಿಗೆ ಬಂದ. ಕಣ್ಣಿಟ್ಟು ಎಲ್ಲವನ್ನೂ ನೋಡಿದ. ಕಿರುನಗೆ ನಗುತ್ತ ಹೀಗೆ ಹೇಳಿದ.

"ಈ ಶಕ್ತಿದೇವತೆಯ ಕೈಯೊಳಗಿನ ನಿರ್ಜೀವ ಶಸ್ತ್ರಗಳಿಗಿಂತ, ಮುಖದಲ್ಲಿಯ ಈ ಮುಗುಳುನಗೆಯ ಸಜೀವ ಶಸ್ತ್ರ ಹೆಚ್ಚು ಘಾತುಕವಾದುದು!"

ನಾನು ನಾಚಿದವಳಾಗಿ ಒಮ್ಮೆಲೆ ಮುಖ ತಗ್ಗಿಸಿ ನಿಂತೆ. ಆಗ ನರಸಿಂಹ ಸಿಂಗಮ್ಮನ ಕಡೆಗೆ ಹೊರಳಿ ಮಾತನಾಡಿದ.

'ಸಿಂಗಮ್ಮಾ! ನೀನು ದೇಹವನ್ನು ಮಾತ್ರ ದುರ್ಗೆಯಂತೆ ಮಾರ್ಪಡಿಸಿರುತ್ತೀಯೆ! ಅದೇನೋ ಆಯಿತು! ಈ ದೇಹದೊಳಗಿನ ಮನಸ್ಸು–ಹೃದಯಗಳನ್ನು ದುರ್ಗೆಯ ಮನಸ್ಸು–ಹೃದಯಗಳಂತೆ ಮಾರ್ಪಡಿಸುವ ಶಕ್ತಿ ನಿನ್ನಲ್ಲಿ ಇದೆಯೇನು?'

ಸಿಂಗಮ್ಮನೂ ಮಾತಿಗೇನು ಕಡಿಮೆಯವಳೇ? ಹೆದರದೆ ಆಕೆ ಹೇಳಿದಳು.

'ನಿಮ್ಮ ಜೊತೆ ಬೆರೆತರೆ ಆ ಮಾರ್ಪಾಡು ತನ್ನಿಂದ ತಾನೆ ಆಗುತ್ತದೆ. ಇನ್ನಾವ ಶಕ್ತಿಯ ಕಾರಣವೂ ಅದಕ್ಕಿಲ್ಲ.'

ಸಿಂಗಮ್ಮನ ಮಾತಿಗೆ ನರಸಿಂಹ ಸುಮ್ಮಗೆ ನಕ್ಕುಬಿಟ್ಟ...."

*   *   *   *

ಇದ್ದುದಿದ್ದ ಹಾಗೆಯೆ ರತ್ನಾಂಬಿಕೆ ಓಲಗ ಸಾಲೆಯೊಳಕ್ಕೆ ಬಂದಳು. ಆಕೆಯ ಹಜ್ಜೆಯ ಸಪ್ಪಳ ಕಮಲಾಂಬಿಕೆಯ ನೋಟವನ್ನು ಹೊರಕ್ಕೆ ಕರೆದು ತಂದಿತು. ಕೂಡಲೆ ಅವಳು ಹಾರಿಬಿದ್ದವಳಂತಾಗಿ ಎದ್ದು, "ಬಾ ರತ್ನಾ!

ಅದೇನು ? ಬರಲಿಕ್ಕೆ ಹೊತ್ತಾಯಿತಲ್ಲವೆ ? " ಎಂದು ನುಡಿನುಡಿಯುತ್ತಲೆ ಮುಂದುವರಿದು ಬಂದು, ರತ್ನಾಂಬಿಕೆಯ ಕೈಹಿಡಿದು ಕರೆದುಕೊಂಡು ಹೋದಳು. ಇಬ್ಬರೂ ಒಂದೆ ಆಸನದಲ್ಲಿ ಕುಳಿತುಕೊಂಡಾದಮೇಲೆ ರತ್ನಾಂಬಿಕೆ ಮಾತನಾಡಿದಳು.

"ಬೇಗನೆ ಹೊರಡಬೇಕೆಂದರೆ ಹೊರಡುವುದಕ್ಕೇ ಆಗಲಿಲ್ಲ!"

ಮೂದಲಿಕೆಯ ಮೆಲುನಗೆಯೊಂದಿಗೆ ಕಮಲಾಂಬಿಕೆಯೆಂದಳು.

"ಸರಿಯಮ್ಮಾ! ಹೇಗೆ ಆಗಬೇಕು ಬೇಗನೆ ಹೊರಡಲಿಕ್ಕೆ ?"

ವಿಷಾದಮಿಶ್ರಿತ ಗಂಭೀರಭಾವದಲ್ಲಿ ರತ್ನಾಂಬಿಕೆ ಕೇಳಿದಳು.

"ಅಂದರೆ ಏನಮ್ಮಾ ನಿನ್ನ ಮಾತು ಕಮಲಾ?"

"ಅಂದರೆ. . ಅಂದರೆ ಮಂದಿರದ ಮುಂದೆ ಹಂದರ ಹಾಕಬೇಕು ..ಎಂತ"

"ಏನೋ ಅಮ್ಮಾ! ನಿನ್ನ ಹುಡುಗಾಟವೇ ಅರ್ಥವಾಗಲೊಲ್ಲದು!"

"ನಿಜ ಹೇಳು ರತ್ನಾ! ಪೆದ್ದರಾಯರು ನಿಮ್ಮ ಮನೆಗೆ ಬಂದಿರಲಿಲ್ಲವೆ ? ಅವರು ಬಂದಿದ್ದರೆಂತಲೆ ಹೊರಡಲಿಕ್ಕೆ ಹೊತ್ತಾಗಲಿಲ್ಲವೇ ?"

"ಏನೇನೋ ಹುಚ್ಚು ಹುಚ್ಚು ಕಲ್ಪನೆ ನಿನ್ನದು. ಈಗ ಮೂರುದಿನಗಳಿಂದ ನಾನು ಅವರ ಮುಖವನ್ನು ಕೂಡ ನೋಡಿಲ್ಲ."

ರತ್ನಾಂಬಿಕೆಯ ಸಪ್ಪೆ ಸಪ್ಪೆಯಾದ ಧ್ವನಿಯನ್ನು ಕೇಳಿ, ಕಮಲಾಂಬಿಕೆ ಆಕೆಯ ಮುಖದ ಕಡೆಗೆ–ನಸುವೇಳೆ–ನಿಡುನೋಟಗಳಿಂದ ನೋಡಿದಳು. ಬಳಿಕ ಆತುರದ ಧ್ವನಿಯಲ್ಲಿ ಕೇಳಿದಳು.

"ಅದೇತಕ್ಕೆ ರತ್ನಾ! ಇಂದು ನಿನ್ನ ಮುಖ ದಿನದ ಹಾಗೆ ಇಲ್ಲವಲ್ಲ!"

"ಹಬ್ಬವಲ್ಲವೇ ಇಂದು ? ಅದಕ್ಕಾಗಿ ಮತ್ತೊಂದು ಹೊಸ ಮುಖವನ್ನು ಇಟ್ಟುಕೊಂಡು ಬಂದಿದ್ದೇನೆ."

"ಹಾಗಲ್ಲ ರತ್ನಾ! ನಿನ್ನ ಮುಖದಲ್ಲಿ–ಉಡುಗೆ ತೊಡಿಗೆಗಳಲ್ಲಿ ಇಂದು ಉತ್ಸಾಹದ ಗುರುತೇ ಕಾಣುತ್ತಿಲ್ಲ. ಅದೇತಕ್ಕೆ ಹೀಗೆ ?. . ಎಂದು ಕೇಳಿದೆ."

"ಉತ್ಸಾಹವೆಂದರೆ ನೋಡು ಕಮಲಾ! ಅದೂ ಒಂದು ಹಣ ಹೊನ್ನು ಇದ್ದಂತೆ. ಇದ್ದಾಗ ಬೇಕಾದ ಹಾಗೆ ವೆಚ್ಚಮಾಡಿ, ಇಲ್ಲದೆ ಇದ್ದಾಗ ಮನದಲ್ಲಿ ಮರುಗುತ್ತ ಕುಳಿತುಕೊಳ್ಳುವ ಅತಿವ್ಯಯಿಯಂತೆ ನನ್ನ ಹಾಡು ಆಗಬಾರದೆಂದು ನನ್ನ ಅಪೇಕ್ಷೆ. ಎಂತಲೇ ನನ್ನ ಉತ್ಸಾಹವನ್ನು, ಆವಶ್ಯಕವೆಂದು

ತೋರಿದಾಗ ಮಾತ್ರ, ಮಿತವಾಗಿ ವೆಚ್ಚ ಮಾಡಬೇಕೆಂದು ನಿಶ್ಚಯಿಸಿಕೊಂಡಿದ್ದೇನೆ. "

"ಯಾವಾಗಲೂ ನೋಡುತ್ತೇನೆ, ಏನೇನೋ ನನಗೆ ತಿಳಿಯದಂತಹ ಮಾತುಗಳನ್ನೆ ಆಡುತ್ತಲಿರುತ್ತೀಯೆ ರತ್ನಾ! ನಿನ್ನ ಮಾತು ಅರ್ಥವಾಗುವಂತೆ ನಾನು ಏನು ಮಾಡಬೇಕು?"

"ನನ್ನ ಮಾತುಕೇಳುವುದನ್ನು ಬಿಟ್ಟು ಬಿಡಬೇಕು!"

"ಇದೇನು ರತ್ನಾ, ನಿನ್ನ ಮಾತುಗಳಲ್ಲಿ ಅದೇತಕ್ಕೊ ವಿಷಾದವು ಹಣೆಯಿಕ್ಕುತ್ತಿದೆ."

"ಇತ್ತೀಚೆಗೆ ನಿನ್ನ ಕಣ್ಣು ಬಲು ಚುರುಕಾಗಿವೆಯಲ್ಲವೇ ಕಮಲಾ. ." ಮುಂದೆ ಏನು ಮಾತನಾಡಬೇಕೆಂಬುದು ತಿಳಿಯದೆ ರತ್ನಾಂಬಿಕೆಯು, ತನ್ನ ಎಂದಿನ ಉತ್ಸಾಹದ ತೆರೆಯನ್ನು ಹೊದ್ದುಕೊಳ್ಳಬೇಕೆಂದು ಹವಣಿಸಿದಳು. ಚೆನ್ನಾಗಿ ಸಾಧಿಸಲಿಲ್ಲ; ಮುಖದ ತೆರೆ ಮುದುಮುದುರಿದಂತೆ ಆಯಿತು. ಕಮಲಾಂಬಿಕೆ ಆಕೆಯ ಮುಖದ ತಿರುಹುಮುರುಹುಗಳನ್ನು ನಿಟ್ಟಿಸುತ್ತ ಸುಮ್ಮಗೆ ಕುಳಿತಿದ್ದಳು. ಒಂದೆರಡು ನಿಮಿಷ ರತ್ನಾಂಬಿಕೆಯೂ ಬಯಲು ನೋಟದ ಬೆರಗುಗಣ್ಣುಗಳಿಂದ ಕುಳಿತಿದ್ದು, ಬಳಿಕ ಕಮಲಾಂಬಿಕೆಯನ್ನು ಕೇಳಿದಳು.

"ಕಮಲಾ ನೀನು ಶಾಂತಿಕುಟೀರವನ್ನು ನೋಡಿದ್ದೀಯಾ?"

"ಅನೇಕ ಸಲ ನೋಡಿದ್ದೇನೆ. ನಾನು ಆಗಾಗ ಅಲ್ಲಿಗೆ ಹೋಗಿ ಬರುತ್ತಿರುತ್ತೇನೆ. . ಅಣ್ಣಾಜಿಯವರನ್ನು ಕಾಣಲಿಕ್ಕೆ."

"ಹೀಗೇನು?" ಎಂದು ಕೇಳಿ ರತ್ನಾಂಬಿಕೆ ಮತ್ತೆ ಕ್ಷಣಹೊತ್ತು ಸುಮ್ಮಗೆ ಕುಳಿತಳು. ಕಮಲಾಂಬಿಕೆ ಕೇಳಿದಳು.

"ಈಗೇತಕ್ಕೆ ಬೇಕು ಶಾಂತಿಕುಟೀರ ನಿನಗೆ ರತ್ನಾ?" ನಿಧಾನವಾಗಿ ತಲೆ ಅಲ್ಲಾಡಿಸುತ್ತ ಅವಳು ಹೇಳಿದಳು.

"ಬೇಕಾಗಿದೆ. . ಒಂದು ಕೆಲಸಕ್ಕಾಗಿ,"

"ಅದೇನು ಕೆಲಸ?"

"ಅದೇನು ಕೆಲಸವೇ? ಅಂ. . ಅಣ್ಣಾಜಿಯವರನ್ನು ಕಂಡು ಕ್ಷಮೆ ಬೇಡಬೇಕಾಗಿದೆ."

"ಅದೇಕೆ? ಅವರಲ್ಲಿ ಕ್ಷಮೆಯನ್ನು ಏತಕ್ಕಾಗಿ ಬೇಡಬೇಕು?"

"ಇದುವರೆಗಿನ ನನ್ನ ತಪ್ಪುತಿಳಿವಳಿಕೆಗಾಗಿ"

"ಅದೇನಮ್ಮಾ ನಿನ್ನ ತಪ್ಪುತಿಳಿವಳಿಕೆ?"

"ನಾನು ಇದುವರೆಗೆ ಅವರನ್ನು ಹೇಡಿಗಳೆಂದು ತಿಳಿದಿದ್ದೆ"

"ಹಾಗೆ ಬಹುಜನರು ತಿಳಿದಿದ್ದರಂತೆ; ಅದನ್ನವರು ಎಂದೂ ಮನಸ್ಸಿಗೆ ತಂದಂತೆ ಕಾಣೆ."

"ಇನ್ನೂ ಒಂದು ಮಾತಿದೆ ಕಮಲಾ! ನನ್ನ ಕರುಳಲ್ಲಿಯ ಉರಿಯೊಂದನ್ನು ಅವರು ಕಡಿಮೆ ಮಾಡಿದರು; ಅದಕ್ಕಾಗಿ ಅವರನ್ನು ಪ್ರತ್ಯಕ್ಷವಾಗಿ ಕಂಡು ಅಭಿನಂದಿಸಬೇಕಾಗಿದೆ."

"ಅದಾವುದು ರತ್ನಾ ನಿನ್ನ ಕರುಳುರಿ?"

"ನೀನೀಗ ಕೇಳಬೇಡ ಕಮಲಾ, ಇನ್ನೊಬ್ಬರಿಗೆ ಅದು ತಿಳಿಸತಕ್ಕಂತಹದಲ್ಲ, ನೀನು ಇನ್ನೆಂದಾದರೂ ಶಾಂತಿಕುಟೀರಕ್ಕೆ ಹೋಗುತ್ತೀಯೇನು?"

"ನಿನಗೂ ಬರಬೇಕಾಗಿದ್ದರೆ ನಾಳೆಯದಿನವೇ ಹೊರಡೋಣ. ಅಣ್ಣಾಜಿಯವರನ್ನು ಕಂಡಾಗಲೆಲ್ಲ ನನಗೂ ಒಬ್ಬ ಹಿರಿಯಣ್ಣನಿದ್ದಾನೆಂದು ಮನಸ್ಸು ನಲಿದಾಡುವುದು ನಾನಲ್ಲಿಗೆ ಹೋಗುವೆನೆಂದರೆ ಅಪ್ಪಾಜಿಯವರು ಎಂದೂ ಅಡ್ಡಗಿಸರು. ಆನಂದದಿಂದ ಒಪ್ಪಿಗೆ ಕೊಡುವರು.'

"ಹಾಗಿದ್ದರೆ ನಾಳೆಗೆ ಹೋಗಿಬರೋಣವೇ?"

"ಆಗಲಿ ಹೋಗೋಣ"

ರತ್ನಾಂಬಿಕೆಯ ಹೃದಯವನ್ನು ಹಿಗ್ಗಿಸಿ ಹೊರಕ್ಕೆ ಹೊಮ್ಮಿದ ಉತ್ಸಾಹವು ಮುಖದಲ್ಲಿ ನರ್ತನಮಾಡಿತು. ಅವಳು ಕೃತಜ್ಞತೆಯ ಕಣ್ಣುಗಳಿಂದ ಕಮಲಾಂಬಿಕೆಯನ್ನು ನೋಡುತ್ತ ಏನನ್ನೋ ಹೇಳುವವಳಿದ್ದಳು. ಅಷ್ಟರಲ್ಲಿಯೆ ಪೆದ್ದರಾಯನ ಪಾಕಶಾಲೆಯ ಆಳಿ ಲಚ್ಚಮ್ಮ ಅಲ್ಲಿಗೆ ಬಂದು, ಕಮಲಾಂಬಿಕೆಗೆ ತಲೆಬಾಗಿ ವಂದಿಸಿ ಹೇಳಿದಳು.

"ಅಮ್ಮಾಜೀ! ದೊರೆಗಳು ಸಂಕ್ರಮಣದ ಉಡುಗೊರೆಯೆಂದು ಇವುಗಳನ್ನು ತಮಗೆ ಸಲ್ಲಿಸಲು ಹೇಳಿಕಳುಹಿಸಿದ್ದಾರೆ."

ಮಾತಿನ ಕೊನೆಯೊಂದಿಗೆ ಲಚ್ಚಮ್ಮ ಸುಂದರವಾದ ದಂತದ ಸಂಪುಟವೊಂದನ್ನು ರತ್ನಾಂಬಿಕೆಯ ಮುಂದೆ ಇರಿಸಿದಳು. ರತ್ನಾಂಬಿಕೆ ಅಚ್ಚರಿ-

ಗೊಂಡು ಕೇಳಿದಳು.

"ಯಾವ ದೊರೆಗಳು ಕಳುಹಿಸಿದ್ದಾರೆ!"

"ಪೆದ್ದರಾಯ ದೊರೆಗಳು ಅಮ್ಮಾಜೀ!"

ಕಮಲಾಂಬಿಕೆಗಿಂತ ಹೆಚ್ಚು ಅಚ್ಚರಿಪಟ್ಟವಳಾಗಿ ರತ್ನಾಂಬಿಕೆ ಒಮ್ಮೆಲೆ ಕೇಳಿದಳು.

"ಯಾರು ? ಪೆದ್ದರಾಯರು ಕಳುಹಿಸಿದ್ದಾರೆ!"

"ಅಹುದು ಅಮ್ಮಾಜೀ!"

ರತ್ನಾಂಬಿಕೆಯ ಎದೆ ದಡದಡಿಸಿತು; ಮನಸ್ಸಿನ ಅಸ್ಥಿರತೆ ಮುಖದಲ್ಲಿ ಮೂಡಿಕೊಳ್ಳದೆ ಹೋಗಲಿಲ್ಲ; ಕಣ್ಣಿನ ಹೊಳಪು ಹೆಚ್ಚಾದಂತೆ ಕಂಡಿತು. ಕಮಲಾಂಬಿಕೆ ಆತುರಭಾವದಲ್ಲಿಯೆ ಆ ದಂತದ ಸಂಪುಟವನ್ನು ಕೈಗೆ ತೆಗೆದು ಕೊಂಡಳು. ಮೇಲುಮುಚ್ಚಳವನ್ನು ತೆಗೆದು ನೋಡಿದಳು. ಒಳಕ್ಕೆ ಸಕ್ಕರೆಯೆಳ್ಳುಗಳ ಜೊತೆಯಲ್ಲಿ ರತ್ನಮಾಲಿಕೆಯೊಂದು ಮೆರುಗು ಹರಿಯಿ-ಸುತ್ತ ಕುಳಿತಿದ್ದಿತು. ಅದನ್ನು ಕಮಲಾಂಬಿಕೆ ಕೈಯಲ್ಲಿ ತೆಗೆದುಕೊಂಡು ದಿಟ್ಟಿಸಿ ದಿಟ್ಟಿಸಿ ನೋಡಿದಳು. ಬಳಿಕ ನೋಡುವುದಕ್ಕಾಗಿ ರತ್ನಾಂಬಿಕೆಯ ಕಡೆಗೆ ಕೊಡಲೆಂದು ಕೈ ಮುಂದೆ ಮಾಡಿ ಕೇಳಿದಳು.

"ನೋಡು! ಚೆನ್ನಾಗಿದೆಯಲ್ಲವೇ ?"

"ಅಹುದು! ಚೆನ್ನಾಗಿದೆ!" ಎಂದಿಷ್ಟು ಮಾತ್ರ ರತ್ನಾಂಬಿಕೆ ಹೇಳಿ ದಳು. ರತ್ನಮಾಲೆಯನ್ನು ಕೈಯೊಳಕ್ಕೆ ತೆಗೆದುಕೊಳ್ಳಲೆ ಇಲ್ಲ. ಆಗ ಅವಳ ಮೆದುಳನ್ನು ಒಂದು ಯೋಚನೆ ಕೊರೆಯುವುದಕ್ಕೆ ಆರಂಭಿಸಿದ್ದಿತು. ಅದಾವು ದೆಂದರೆ:—

"ಇಂದಿನ ಹಬ್ಬದ ಊಟಕ್ಕೆಂದು – ನಾನಾಗಿಯೆ – ಎಷ್ಟೊಂದು ಕಳವಳದ ಬಿನ್ನಹದೊಂದಿಗೆ ಹೇಳಿಕಳುಹಿಸಿದರೂ ಮನೆಗೆ ಬಾರದೆ ಇದ್ದವನು, ಇಲ್ಲಿ ತಾನಾಗಿಯೆ ಸಂಕ್ರಮಣದ ಹಬ್ಬದ ಉಡುಗೊರೆ ಕಳುಹಿಸಿದ್ದಾ-ನಲ್ಲವೇ ?"

ಕಮಲಾಂಬಿಕೆಯ ಆಜ್ಞೆಯಂತೆ ಲಚ್ಚಮ್ಮ ಹೊರಟು ಹೋದಳು. ಸಿಂಗಮ್ಮ ಬಂದು ಇಬ್ಬರನ್ನೂ ಉಪಾಹಾರಕ್ಕೆಂದು ಎಬ್ಬಿಸಿದಳು. ಎಷ್ಟೆಷ್ಟು ಬಲುಮೆ ಮಾಡಿದರೂ ರತ್ನಾಂಬಿಕೆ ಉಪಾಹಾರಕ್ಕೇಳಲಿಕ್ಕೆ ಸಮ್ಮತಿಸ-

ಲೊಲ್ಲಳು. 'ನೀನು ಬಾರದಿದ್ದರೆ ನಾನೂ ಹೋಗುವುದಿಲ್ಲವೆಂದು ಹಿಡಿದಿದ್ದ ಕಮಲಾಂಬಿಕೆಯ ಹಟವನ್ನು ನಡೆಯಿಸಬೇಕೆಂದೋ, ಕಮಲಾಂಬಿಕೆಯೊಡನೆ ತಾನು ಶಾಂತಿಕುಟೀರಕ್ಕೆ ಹೋಗಬೇಕಾಗಿದೆ. . ಎಂಬ ಮಾತು ಜ್ಞಾಪಕಕ್ಕೆ ಬಂದೋ ರತ್ನಾಂಬಿಕೆಯು ಕೊನೆಗೆ ಒಪ್ಪಿಕೊಂಡಳು. ಇಬ್ಬರೂ ಪಕ್ಕದ ಕಿರುಮನೆಯೊಳಕ್ಕೆ ಹೋಗಿ ತಿಂಡಿಯ ತಟ್ಟೆಗಳಿಗೆ ಕೈನೀಡಿದರು.

---

## ೭ನೆಯ ಪರಿಚ್ಛೇದ

ಶಾಂತಿಕುಟೀರಕ್ಕೆ ಸಮೀಪದಲ್ಲಿಯೆ ಅನಾಥನಿಲಯವಿದೆ. ರಾಜಶೇಖರನು ತನಗೆ ಅರಮನೆಯಿಂದ ಸಿಕ್ಕುತ್ತಿದ್ದ ಬತ್ಯವನ್ನು ವೆಚ್ಚಮಾಡಿ ಈ ಅನಾಥನಿಲಯವನ್ನು ನಡೆಯಿಸಿದ್ದ. ನಾರಾಯಣ ಪಂಡಿತರು ಈ ನಿಲಯದ ವ್ಯವಸ್ಥೆಯನ್ನು ನೋಡುತಿರುವರು. ನಾರಾಯಣ ಪಂಡಿತರ ತಂದೆ ಆಯುರ್ವೇದದಲ್ಲಿ ತುಂಬ ಗಟ್ಟಿಗರು. ಮಲ್ಲಿಕಾರ್ಜುನ ದೊರೆಗಳಿದ್ದಾಗ ಅವರು ಒಂದು ಸಲ ಶ್ರೀರಂಗಪಟ್ಟಣಕ್ಕೆ ಹೋಗಿರಲು, ಅಲ್ಲಿ ನಾರಾಯಣ ಪಂಡಿತರ ತಂದೆಯುವರು ಎಂದರೆ ಗೋವರ್ಧನ ಪಂಡಿತರು ನೋಡಲಿಕ್ಕೆ ಸಿಕ್ಕರು. ಅಲ್ಲಿಯೆ ಅವರ ಪರಿಚಯವಾಗಿ, ಪಂಡಿತರ ಆಯುರ್ವೇದದ ನಿದಾನ ಚಿಕಿತ್ಸೆಗಳಲ್ಲಿಯ ಹೊಸ ಹೊಸ ಸಂಶೋಧನೆಗಳನ್ನು ಕಣ್ಣಾರೆ ನೋಡಿದರು; ಗುಣೈಕ ಪಕ್ಷಪಾತಿಗಳಾದ ಆ ದೊರೆಗಳು ಸಂಗ್ರಹದಲ್ಲಿರಬೇಕಾದ ವ್ಯಕ್ತಿಯೆಂದು ಪಂಡಿತರನ್ನು ರಾಜಧಾನಿಗೆ ಕರೆದುಕೊಂಡು ಬಂದು, ತಮ್ಮ ಆಶ್ರಯದಲ್ಲಿ ಇಟ್ಟುಕೊಂಡರು. ಇದೇ ಗೋವರ್ಧನ ಪಂಡಿತರು ಬರೆದ 'ಮಾನವ ದಿನಚರ್ಯೆ' 'ತ್ರಿದೋಷ ಮೀಮಾಂಸೆ' 'ವನೌಷಧೀ ವಿಜ್ಞಾನ' ಎಂಬ ಗ್ರಂಥಗಳು ವಿಜಯನಗರದ ಪಂಡಿತ ವರ್ಗಕ್ಕೆಲ್ಲ ಮಾನ್ಯ ಗ್ರಂಥಗಳಾಗಿದ್ದುವು. ಅಂತಹ ಗೋವರ್ಧನ ಪಂಡಿತರ ಮಕ್ಕಳು ನಾರಾಯಣ ಪಂಡಿತರು. ತಂದೆಯ ಗುಣಗಳೆಲ್ಲ ಇವರಲ್ಲಿ ಇಳಿದು ಬಂದಿದ್ದುವು. ಇನ್ನೊಂದು ಇವರಲ್ಲಿಯ ಹೆಚ್ಚಿನ ಗುಣವೆಂದರೆ: ತಮ್ಮ ಆಯುರ್ವೇದದ ಅಭ್ಯಾಸ ಅನುಷ್ಠಾನಗಳೊಂದಿಗೆ ದೀನಾನಾಥರಿಗೆ ನೆರವಾಗಬೇಕೆಂಬ ಮರುಕ. ಈ ಮರುಕದ ಮೂಲಕವೆ ಇವರು ರಾಜಶೇಖರನ ಅನಾಥನಿಲಯದ

ವ್ಯವಸ್ಥಾಪಕತ್ವವನ್ನು ತಾವಾಗಿಯೆ ಕೈಕೊಂಡಿದ್ದರು. ಅವರ ವಸತಿ ಶಾಂತಿ ಕುಟೀರದ ಪಕ್ಕದ ಚಿಕ್ಕ ಮನೆ.

ಮಕರಸಂಕ್ರಮಣದ ಮರುದಿನದ ಮೊದಲನೆಯ ಪ್ರಹರ ಮುಗಿಯಲು ಬಂದಿದೆ. ಆಗ ಶಾಂತಿಕುಟೀರದ ಮೊಗಸಾಲೆಯಲ್ಲಿ ರಾಜಶೇಖರನು ನಾರಾಯಣ ಪಂಡಿತರ ಜೊತೆಗೆ ಮಾತನಾಡುತ್ತ ಕುಳಿತಿದ್ದನು.

"ಪಂಡಿತರೆ, ಯಾವ ಜಾತಿ–ಪಂಥಗಳ ಭೇದವನ್ನೂ ನಾವು ಎಣಿಸ ಕೂಡದು. ನಿಲಯದಲ್ಲಿ ಎಲ್ಲರಿಗೂ ಆಶ್ರಯ ದೊರೆಯುತ್ತಿರಬೇಕು. ಅನಾಥರೆಂದರೆ ಅವರದೆಲ್ಲ ಒಂದೆ ಜಾತಿ"

"ಹಾಗಲ್ಲ ಅಣ್ಣಾಜೀ! ಹಾವು, ಚೇಳು, ಹುಲಿಗಳು ಅನಾಥವಾಗಿವೆಯೆಂದು ಯಾರಾದರೂ ಅವುಗಳನ್ನು ಹಾಲಿಟ್ಟು ಸಲುಹಬಹುದೇ? ಮಹಮ್ಮದೀಯರಿಗೆ ನಮ್ಮಲ್ಲಿ ಆಶ್ರಯದೊರೆಯುವುದೆಂದರೆ, ನನಗೆ ಹೇಗೊ ಹೇಗೋ ಎನಿಸುತ್ತಲಿದೆ. ಕನ್ನಡಿಗರ ವಿಷಯಕವಾದ ದ್ವೇಷವು ಅವರ ನವಿರು-ನವಿರುಗಳಲ್ಲಿ ತುಂಬಿ ಹರಿಯುವುದು. ನಾವು ಹಾಕಿದ ಅನ್ನ ನಮಗೆ ವಿಷಫಲ ಕೊಡಬಾರದು ಇಷ್ಟೆ!"

"ಎರಡು ಧರ್ಮದವರಲ್ಲಿಯೂ ಒಬ್ಬರೊಬ್ಬರ ವಿಷಯದಲ್ಲಿ ವಿಚಿತ್ರವಾದ ತಪ್ಪು ಕಲ್ಪನೆಗಳು ತುಂಬಿ ಕುಳಿತಿವೆ. ಅದರಿಂದಲೆ ಮಹಮ್ಮದೀಯರು ಕನ್ನಡಿಗರನ್ನು–ಕನ್ನಡಿಗರು ಮಹಮ್ಮದೀಯರನ್ನು ಹಗೆಯ ಕಣ್ಣುಗಳಿಂದ ನೋಡುತ್ತಲಿದ್ದಾರೆ. ಏಟಿಗೆ ಏಟು, ಮುಯ್ಯಿಗೆ ಮುಯ್ಯಿ . . ಎಂಬುದು ಜನಸಾಮಾನ್ಯರ ಸ್ವಭಾವವೇ ಅಲ್ಲವೇ? ಎರಡೂ ಧರ್ಮಗಳಲ್ಲಿಯ ತಿಳಿದವರೆನಿಸಿಕೊಳ್ಳುವವರು ತಮ್ಮ ತಮ್ಮ ಜನರ ಮನಸ್ಸಿನಲ್ಲಿ ಮಾನವ ಬಂಧುತ್ವದ–ಸಹಿಷ್ಣುತೆಯ ಕಲ್ಪನೆಯನ್ನು ಪಸರಿಸುವ ಕೆಲಸ ಮಾಡುತ್ತ ಬಂದಿದ್ದರೆ ಇಂತಹ ಪರಿಸ್ಥಿತಿ ಉಂಟಾಗುತ್ತಿರಲೆ ಇಲ್ಲ! ಇದು ನೋಡಿ! ಈಗ. .ಬೇರೆ ಬೇರೆ ರಾಜ್ಯಗಳ ಸುವ್ಯವಸ್ಥೆಗಾಗಿ ದೊರೆಗಳು ಬೇಕು; ಆದರೆ ಆ ಆ ರಾಜ್ಯಗಳ ಜನರು ನಮ್ಮ ದೊರೆ–ತಮ್ಮ ದೊರೆ ಎಂಬ ಅಭಿಮಾನಕ್ಕೆ ಬಿದ್ದು ಬಡಿದಾಡಲಿಕ್ಕೆ ತೊಡಗಿದರೆ ತಪ್ಪು ಯಾರದು? ಹಾಗೆಯೆ ಈ ಧರ್ಮಗಳ ವಿಚಾರ! ಅಲ್ಲಲ್ಲಿಯ ದೇಶ-ಕಾಲ-ಪರಿಸ್ಥಿತಿಗಳನ್ನು ಅನುಸರಿಸಿ, ಅಲ್ಲಲ್ಲಿಯ ಸಮಾಜದ ಧಾರಣೆಗಾಗಿ ಬೇರೆ ಬೇರೆ ಧರ್ಮಗಳು ತಲೆದೋರುವುವು;

ಈ ಧರ್ಮಧರ್ಮಗಳ ಅನುಯಾಯಿಗಳು ಒಟ್ಟುಗೂಡಿ ಬದುಕಬೇಕಾದಾಗ, 'ನಮ್ಮ ಧರ್ಮ, ತಮ್ಮ ಧರ್ಮ' ಎಂದು ಒಬ್ಬರ ತಲೆಯನ್ನು ಒಬ್ಬರು ಚಚ್ಚಲು ತೊಡಗಿದರೆ, ಸಮಾಜದಲ್ಲಿ ಶಾಂತತೆ ಹೇಗೆ ಉಳಿದೀತು? ವಿಜಯನಗರದ ಕರ್ಣಾಟಕ ಸಾಮ್ರಾಜ್ಯವು ಕೈಕೊಂಡು ನಿರ್ವಹಿಸಬೇಕಾಗಿದ್ದ ಮುಖ್ಯ ಕಾರ್ಯವೆಂದರೆ ತನ್ನ ಪ್ರಜೆಗಳಿಗೆ ಮಾನವಬಂಧುತ್ವದ ಪಾಠವನ್ನು ಕೊಡುವುದು! ಪಂಡಿತರೆ, ನಿಮ್ಮಂತಹ ತಿಳಿದವರಾದರೂ ಇಂತಹ ಸಂಕುಚಿತ ವಿಚಾರಕ್ಕೆ ಅವಕಾಶ ಕೊಡಲಾಗದೆಂದು ನನ್ನ ಅಪೇಕ್ಷೆ!"

"ನಿಮ್ಮ ಮಾತು ಸರಿ ಅಣ್ಣಾಜೀ! ಆದರೆ ಒಂದು ಧರ್ಮದವರಲ್ಲಿ ಮಾನವಬಂಧುತ್ವದ ವಿಚಾರವು ಬಳೆದು, ಇನ್ನೊಂದು ಧರ್ಮದವರು ಇದ್ದಂತೆಯೆ ಇದ್ದುಬಿಟ್ಟರೆ ಎಂತಹ ವಿಪರೀತ ಸಂದರ್ಭವೊದಗೀತು?"

"ಅದೇನು? ಎಂತಹ ವಿಪರೀತ ಸಂದರ್ಭ ಒದಗೀತು.. ಎನ್ನುತ್ತೀರಿ ನೀವು?"

"ವಿಶ್ವಬಂಧುತ್ವದ ವಿಚಾರವಿದ್ದ ಜನರು, ಅದು ಇಲ್ಲದ ಧರ್ಮದವರಿಂದ ಏಟುತಿಂದರೂ ಸುಮ್ಮಗೆ ಇದ್ದುಬಿಡಬೇಕೆಂದು ನಿಮ್ಮ ಅಭಿಪ್ರಾಯವೇನು!"

"ಅಹುದು! ತಾಳ್ಮೆಯಿದ್ದಲ್ಲಿ ಹಗೆತನದ ಆಟವು ನಡೆಯದು!"

"ನನಗೆ ಎಂದೂ ಹೀಗೆ ಎನಿಸದು. ಹಗೆತನವು ತಾಳ್ಮೆಯನ್ನು ಹೇಡಿತನವೆಂದು ಹೀಗಳೆಯುವುದು! ನಿರಾತಂಕವಾಗಿ ಮೇಲೆಬಿದ್ದು ತಾಳ್ಮೆಯುಳ್ಳವರನ್ನು ತಳಕ್ಕೊತ್ತಿಬಿಡುವುದು!"

"ನಮಗೆ ಆ ತಾಳ್ಮೆಯ ತಪಸ್ಸಿನ ಪರಿಚಯವೇ ಇಲ್ಲವಾಗಿದೆ ಪಂಡಿತರೆ! ಹೇಡಿಗಳ ಹೆದರುಗುಳಿ ತಾಳ್ಮೆಗೂ ಕೆಚ್ಚೆದೆಯ ಬಂಟನ ಅಲುಗದ ಮನದ ತಾಳ್ಮೆಗೂ ನೆಲಮುಗಿಲುಗಳಿಗಿರುವಷ್ಟು ಅಂತರವಿದೆ. ಅಜಾತಶತ್ರುವಾದ ಧರ್ಮರಾಜನ ಸಹನೆಯನ್ನು ಹೇಡಿತನವೆಂದು ನಾವು ಹೇಳಬಹುದೇ?"

"ಹೇಡಿತನವೆಂದು ಹೇಳಲಿಕ್ಕೆ ಆಗುವುದಿಲ್ಲವೇನೋ ಸರಿ! ಆದರೆ 'ಅಂತೂ ಇಂತೂ ಕುಂತಿಯ ಮಕ್ಕಳಿಗೆ ರಾಜ್ಯವಿಲ್ಲ' ಎಂಬ ಗಾದೆಹುಟ್ಟಲಿಕ್ಕೆ ಧರ್ಮರಾಜನ ಸಹನೆಯೆ ಕಾರಣವಾಗಿದೆ ನಿಜ!"

ಪಂಡಿತರ ಮಾತು ರಾಜಶೇಖರನ ಮನಸ್ಸನ್ನು ಸ್ವಲ್ಪಕಾಲದ ವರೆಗೆ ತಡೆದುನಿಲ್ಲಿಸಿತು. ಒಂದೆರಡು ನಿಮಿಷ ವಿಚಾರಮಾಡಿ, ಬಳಿಕ ಅವನು ಮಾತನಾಡಿದ.

"ಆ ಗಾದೆ ಎಲ್ಲಿ ಹುಟ್ಟಿದೆಯೆಂಬುದನ್ನು ಕಂಡುಹಿಡಿದಿದ್ದೀರಾ ನೀವು ಪಂಡಿತರೇ? ಅದು ಹುಟ್ಟಿದುದು ರಜೋವೃತ್ತಿಯವರ ನಿಟ್ಟುಸಿರಿನ ಗಾಳಿಯಲ್ಲಿ! ಜನಸಾಮಾನ್ಯದ ಕಳವಳದ ಕಡಲಿನಲ್ಲಿ! ಪಾಂಡವರೆಲ್ಲರು—ಅವರಲ್ಲಿಯೂ ಧರ್ಮರಾಯನು ಪಡೆದ ಜೀವನ್ಮುಕ್ತಿಸಾಮ್ರಾಜ್ಯ, ಸಾಮಾನ್ಯ ಜನರ ಕಣ್ಣೆದುರು ಬಂದು ನಿಲ್ಲದು. ಅವರು ಪಟ್ಟ ವನವಾಸದ ಸುಖದುಃಖ, ಕಾಳಗದ ಕಷ್ಟನಷ್ಟ, ಇದೇ ಭವ್ಯವಾಗಿ ಮೂಡಿ ನಿಲ್ಲುವುದು!"

ಪಂಡಿತರು ಮುಂದೆ ಮಾತನಾಡದೆ ಸುಮ್ಮಗೆ ಕುಳಿತರು; ಆದರೆ ರಾಜಶೇಖರನ ಮಾತಿನಿಂದ ಅವರ ಮನಸ್ಸಮಾಧಾನವಾದಂತೆಯೇನೂ ಕಾಣಲಿಲ್ಲ. ರಾಜಶೇಖರನು ಆ ಮಾತಿನ ಮುಖವನ್ನು ಬದಲಿಸಲೆಂದೋ ಏನೋ ಮುಂದೆ ಕೇಳಿದನು.

"ಪಂಡಿತರೆ, ಮೊನ್ನೆಯ ದಿನ ಹೆತ್ತಿದ್ದಾಳಲ್ಲ! ಆ ಮರ್ನಾಟ ದೇಶದ ಹೆಂಗುಸು! ಆಕೆ ಕೂಸಿನೊಡನೆ ಸೌಖ್ಯವಾಗಿದ್ದಾಳೆ ತಾನೇ?"

"ಸೌಖ್ಯವಾಗಿದ್ದಾಳೆ; ಈಗ ಆಕೆಯ ವಿಷಯವನ್ನೇ ವಿಚಾರಮಾಡಿ ಅಣ್ಣಾಜೀ! ಅವಳೊಬ್ಬ ವಿಧವೆ! ಯಾವನೋ ಒಬ್ಬ ಮಹಮ್ಮದೀಯ ಅವಳ ಮೇಲೆ ಬಲಾತ್ಕಾರಮಾಡಿದನಂತೆ. ಸ್ವಜನಬಹಿಷ್ಕೃತಳಾದ ಆಕೆ ದಿಕ್ಕುದೆಸೆ ಕಾಣದೆ ಬಿಕ್ಕೆಬೇಡುತ್ತ ಇಲ್ಲಿಗೆ ಬಂದುಬಿಟ್ಟಿದ್ದಾಳಂತೆ ಪಾಪ!"

"ಯಾವ ಸಮಾಜದಲ್ಲಿಯೆ ಆಗಲಿ, ನೀಚ ಜನರು ಯಾವಾಗಲೂ ಇದ್ದೆ ಇರುವರು. ನಮ್ಮವರು ಮಾಡಿದ್ದ—ಮಾಡುತ್ತಿರುವ ಇಂತಹ ಅನ್ಯಾಯಗಳಿಗೇನೂ ಕೊರತೆಯಿಲ್ಲವಲ್ಲ! ವಿಜಯನಗರದ ಸಮ್ರಾಟನೆನಿಸಿ-ಕೊಳ್ಳುವ ವಿರೂಪಾಕ್ಷಮಹಾರಾಯನೇ ಎಷ್ಟೊಂದು ಜನರ ಹಾಲಿನಂತಹ ಬಾಳಿನಲ್ಲಿ ವಿಷಬೆರಸಿಲ್ಲ? ನಿಮಗೆ ಅರಿಯದ ಸಂಗತಿಯೇನೂ ಇದಲ್ಲ!"

ಪಂಡಿತರು ಮತ್ತೆಯೂ ಅತೃಪ್ತಭಾವದವರಾಗಿ ಸುಮ್ಮಗೆ ಕುಳಿತರು. ಆಗಲೆ ಕುಟೀರದಲ್ಲಿಯ ಕೆಲಸಗಾರನೊಬ್ಬ ಬಂದು ಹೇಳಿದ.

"ಕಮಲಮ್ಮಣ್ಣಿಯೋರು ಬಂದಿದ್ದಾರೆ ಬುದ್ದೀ.. ತಮ್ಮನ್ನು

ಕಾಣಲಿಕ್ಕೆ!"

"ಅವರನ್ನು ಇಲ್ಲಿಗೆ ಕಳುಹಿಸು! ಪಂಡಿತರೇನು ಹೊರಗಿನವರೇ ಆಕೆಗೆ?"

"ಜೊತೆಗೆ ಇನ್ನೊಬ್ಬರು ಯಾರೋ ಅಮ್ಮಣ್ಣಿಯೋರು ಇದ್ದಹಾಗಿದೆ ಬುದ್ದೀ!"

"ಸರಿ! ನಾನೂ ಈಗ ಹೊರಡಲೆ ಬೇಕು! ರೋಗಿಗಳ ಪತ್ಥ್ಯದ ವೇಳೆಯಾಗಿದೆ" ಎಂದು ನುಡಿದು, ರಾಜಶೇಖರನನ್ನು ಬೀಳ್ಕೊಂಡು, ಪಂಡಿತರು ಹೊರಟರು. ಅವರು ಹೊರಟುಹೋದ ಒಂದೆರಡು ನಿಮಿಷ-ಗಳಲ್ಲಿಯೆ ಕಮಲಾಂಬಿಕೆ ರತ್ನಾಂಬಿಕೆಯನ್ನೊಡಗೊಂಡು ಒಳಕ್ಕೆ ಬಂದಳು. ರಾಜಶೇಖರನು ಸಲುಗೆಯ ದನಿಯಲ್ಲಿ 'ಬಾ, ಕಮಲಾಜೀ!' ಎಂದು ಕರೆದು, ಕೂಡಲೆ 'ಬನ್ನಿ ತಾಯೀ!' ಎಂದು ರತ್ನಾಂಬಿಕೆಯನ್ನು ಬರಮಾಡಿ-ಕೊಂಡನು. ಇಬ್ಬರೂ ರಾಜಶೇಖರನಿಂದ ಸ್ವಲ್ಪ ದೂರಕ್ಕೆ ಕುಳಿತು-ಕೊಂಡರು. ರಾಜಶೇಖರನು ಕೇಳಿದ.

"ಏನು ಕಮಲಾಜೀ, ಈಗ ಬಂದಿದ್ದೀರಿ? ಇವರು ಯಾರೋ ಇದುವರೆಗೆ ನೋಡಿದಂತಿಲ್ಲ!"

"ನಾನು ಆಗಾಗ ಹೇಳುತ್ತಿದ್ದೆನಲ್ಲ 'ರತ್ನಾಂಬಿಕೆ' ಎಂದು? ಅವಳೇ ಇವಳು. ದಳಪತಿ ದೇವಣ್ಣನಾಯಕರ ಮಗಳು! ನಿಮ್ಮನ್ನು ಅವಶ್ಯವಾಗಿ ಕಾಣಬೇಕಾಗಿದೆಯೆಂದು ನನ್ನೆದುರು ಹೇಳಿದಳು; ಕರೆದುಕೊಂಡುಬಂದೆ."

ರಾಜಶೇಖರನು 'ಹೊಸಪರಿಚಯ' ಎಂಬ ಭಾವವನ್ನು ಹೊರ-ಹೊಮ್ಮಿಸುತ್ತಿರುವ ಕಣ್ಣುಗಳನ್ನು ರತ್ನಾಂಬಿಕೆಯ ಕಡೆಗೆ ಹೊರಳಿಸಿದನು. ರತ್ನಾಂಬಿಕೆ – ಆ ಮೊಗಸಾಲೆಯಲ್ಲಿ ರಾಜಶೇಖರನ ಮುಖವೊಂದರ ಹೊರತು ಇನ್ನೇನೂ ನೋಡಬೇಕಾದುದಿಲ್ಲವೆಂದು ಭಾವಿಸಿಬಿಟ್ಟಿದ್ದಳೇನೋ! ರೆಪ್ಪೆಯಲುಗದ ಕಣ್ಣುಗಳಿಂದ ಅವನನ್ನು ನೋಡಿಯೆ ನೋಡುತ್ತಿದ್ದಳು. ರಾಜಶೇಖರನು ಆಕೆಯನ್ನು ಕೇಳಿದ.

"ನನ್ನನ್ನು ಕಾಣಬೇಕಾದ ಆವಶ್ಯಕತೆಯೇ ನಿಮಗೆ?"

ರತ್ನಾಂಬಿಕೆ ಗಾಂಭೀರ್ಯದಿಂದ ಹೇಳಿದಳು.

"ಅಹುದು!"

"ಅದೇನು?"

ಕಮಲಾಂಬಿಕೆ ನಡುವೆ ಮಾತನಾಡಿದಳು.

"ರತ್ನಾಂಬಿಕೆಗೆ ನಿಮ್ಮಲ್ಲಿ ಕ್ಷಮಾಯಾಚನೆ ಮಾಡಬೇಕಾಗಿದೆಯಂತೆ."

"ಅದೇತಕ್ಕಾಗಿ ಕ್ಷಮಾಯಾಚನೆ?"

ರತ್ನಾಂಬಿಕೆಯ ಕಣ್ಣುಗಳು ಮಾತ್ರ ಅಶ್ರುತವಾಣಿಯಲ್ಲಿ ಏನೇನೋ ಮಾತನಾಡುತ್ತಿದ್ದುವು; ಆದರೆ ತುಟಿಗಳು ಅಲುಗದೆ ಇದ್ದುವು. ಕಮಲಾಂಬಿಕೆಯೆ ಮತ್ತೆ ನುಡಿದಳು.

"ಬರೀ ಕ್ಷಮಾಯಾಚನೆಯಷ್ಟೇ ಅಲ್ಲ! ಈಕೆ ನಿಮಗೆ ತನ್ನ ಕೃತಜ್ಞತೆಗಳನ್ನು ಸಲ್ಲಿಸಬೇಕಾಗಿದೆಯಂತೆ"

"ಕೃತಜ್ಞತೆಗಳನ್ನು ಸಲ್ಲಿಸುವುದು ಏತಕ್ಕಾಗಿ?"

ರತ್ನಾಂಬಿಕೆ ನಿಡಿದಾಗಿ ಉಸಿರೊಂದನ್ನು ಚೆಲ್ಲಿ ಹೇಳಿದಳು.

"ನನ್ನ ಪ್ರತಿಜ್ಞೆಯೊಂದನ್ನು ನೀವು ಪೂರಯಿಸಿದ್ದೀರಿ!"

"ಅದಾವುದು ನಿಮ್ಮ ಪ್ರತಿಜ್ಞೆ? ನಾನೇನು ಪೂರಯಿಸಿದ್ದೇನೆ?"

"ವಿರೂಪಾಕ್ಷರಾಯನನ್ನು ಈ ಲೋಕದಿಂದ ಇಲ್ಲದಂತಾಗಿಸಿದ್ದೀರಿ!"

"ಆತನ ದುರಾಚಾರದ ಉರಿಯ ಸೆಕೆಯನ್ನು ನೀವೂ ತಗುಲಿಸಿಕೊಂಡವರೇನು?"

ರತ್ನಾಂಬಿಕೆ ರೋಷದ ಮಾತುಗಳ ಕಿಡಿಗಳನ್ನೇ ಕಾರಿದಳು.

"ಬರೀ ಸೆಕೆಯನ್ನಷ್ಟೆ ತಗುಲಿಸಿಕೊಂಡವಳಲ್ಲ! ಆತನ ದುರಾಚಾರದ ಬೆಂಕಿಯ ಬಲುಮೆಯಿಂದ ಇದುವರೆಗೂ ಕರುಳುಗಳನ್ನು ಸುಟ್ಟುಕೊಳ್ಳುತ್ತಿರುವವಳು!

ಕಮಲಾಂಬಿಕೆ ಯಾವ ಆಲೋಚನೆಯಲ್ಲಿ ಇದ್ದಳೇನೋ! ನಡುವೆ ಒಮ್ಮೆಲೆ ಕೇಳಿದಳು.

"ಅಣ್ಣಾಜೀ! ಅಂದು ನಿಲಯಕ್ಕೆ ಬಂದಿದ್ದಳಲ್ಲ! ಬಸಿರೆಯಾಗಿದ್ದ ಭಿಕ್ಷುಕಿ? ಆಕೆ ಹೆತ್ತಿರಬಹುದಲ್ಲವೇ?"

"ಮೊನ್ನೆಯ ದಿನವೆ ಗಂಡುಮಗುವೊಂದನ್ನು ಹೆತ್ತಿದ್ದಾಳೆ; ಕೂಸು ಬಲು ಮುದ್ದುಮುದ್ದಾಗಿದೆಯಂತೆ ನೋಡು ಕಮಲಾಜೀ!"

"ನಾನು ಇದೀಗಲೆ ಹೋಗಿ ನೋಡಿ ಬರುತ್ತೇನಮ್ಮಾ ರತ್ನಾ!"

ಎಂದು ಕಮಲಾಂಬಿಕೆ ಅಲ್ಲಿಂದ ಎದ್ದು ಹೊರಟುಬಿಟ್ಟಳು. ಒಂದೆರಡು ನಿಮಿಷ ಅಲ್ಲಿ ಮೌನತೆಯು ಆಟವಾಡಿತು. ಬಳಿಕ ರಾಜಶೇಖರನು ಸಹಜವಾದ ಶಾಂತಸ್ವರದಲ್ಲಿಯೆ ಕೇಳಿದ.

"ಅಮ್ಮಾಜೀ, ನೀವು ಕರುಳು ಸುಟ್ಟುಕೊಳ್ಳುತ್ತಿರುವುದರ ಕಾರಣದ ಕತೆಯನ್ನು ನಾನು ಕೇಳಬಹುದೇ?"

"ನೀವು ಕೇಳುವುದಕ್ಕೆ ಮೊದಲೆ ಅದನ್ನು ಹೇಳಬೇಕೆಂದಿದ್ದೆ. ಎಂತಲೆ ನಿಮ್ಮ ಪರಿಚಯವನ್ನು ಆಶಿಸಿ ಇಲ್ಲಿಯವರೆಗೆ ಬಂದಿದ್ದೇನೆ." ಮಾತಿನ ಕೊನೆ ಯೊಂದಿಗೆ ಆಶೆಯ ನೋಟಗಳಿಂದ – ರತ್ನಾಂಬಿಕೆಯು – ರಾಜಶೇಖರನನ್ನು ನೋಡಲು ತೊಡಗಿದಳು. ರಾಜಶೇಖರನು ತನ್ನಲ್ಲಿ ತಾನೆ ಎಂದುಕೊಂಡ."

"ವಿರೂಪಾಕ್ಷ ಚಿಕ್ಕಪ್ಪಾಜಿ ಎಲ್ಲೆಲ್ಲಿ ಎಂತೆಂತಹ ಏಟುಗಳನ್ನು ಕೊಟ್ಟು, ರೋಷ – ಶೋಕಗಳ ಜ್ವಾಲಾಮುಖಿಗಳನ್ನು ನಿರ್ಮಾಣಮಾಡಿ ಬಿಟ್ಟಿದ್ದಾನೋ!"

ರತ್ನಾಂಬಿಕೆ ಕರುಣಾಸ್ವರದಲ್ಲಿ ಕೇಳಿದಳು.

"ನಮ್ಮ ಅಕ್ಕಮ್ಮ ಒಬ್ಬಾಕೆಯಿದ್ದುದು ಗೊತ್ತಿದೆಯಲ್ಲವೇ ನಿಮಗೆ?"

"ದೇವಣ್ಣನಾಯಕರ ಹಿರಿಯ ಮಗಳೊಬ್ಬಳನ್ನು ದುರ್ಗದ ಚಿಕ್ಕಣ್ಣ ನಾಯಕರಿಗೆ ಕೊಟ್ಟಿದ್ದಿತೆಂಬುದನ್ನು ಕೇಳಿದ್ದೇನೆ."

"ಸ-ರೀ! ಚಿಕ್ಕಣ್ಣನಾಯಕರು ತೀರಿಹೋದೊಡನೆಯೆ ಅಕ್ಕಮ್ಮ ಅವರ ಇಚ್ಛೆಯನ್ನು ನಡೆಯಿಸುವುದಕ್ಕಾಗಿ ಸತಿಹೋಗಲಿಲ್ಲ. ಇಲ್ಲಿಯೆ ಬಂದು – ಕಣ್ಣೀರಿನಿಂದ ತನ್ನ ಬಾಳನ್ನು ತೊಳೆದುಕೊಳ್ಳುತ್ತ – ನಮ್ಮ ಮನೆ ಯಲ್ಲಿಯೆ ಇದ್ದುಬಿಟ್ಟಿದ್ದಳು. ಆಕೆಯ ಚೆಲುವಿಕೆ ಬೇಕಾಗಿ ಹೇಳಿ ಮಾಡಿಸಿ- ದಂತಹದು. ಚೆಲುವಿಕೆಗೆ ನೂರುಮಡಿಯಾಗಿ ಶುಚಿಜೀವನದಲ್ಲಿ ಆಶೆ ಯುಳ್ಳವಳದು. ವಿರೂಪಾಕ್ಷರಾಯನ ಕಿವಿಗೆ ನಮ್ಮ ಅಕ್ಕನ ಚೆಲುವಿಕೆಯ ಸುದ್ದಿ ಯನ್ನು ಯಾರು ಹತ್ತಿಸಿದರೇನೋ ಹತ್ತಿಸಿದರು. ಮೂರನೆಯ ನಾಲ್ಕನೆಯ ಸ್ಥಾನದಲ್ಲಿದ್ದ ನಮ್ಮ ಅಪ್ಪಾಜಿಯವರಿಗೆ ಮುಖ್ಯ ದಳಪತಿಯ ಸ್ಥಾನವು ದೊರೆಯಿತು. ವಿರೂಪಾಕ್ಷರಾಯನ ಘೋರತರವಾದ ಪಾತಕದ ಕಾರ್ಯಕ್ಕೆ ಅಪ್ಪಾಜಿಯವರ ಬುದ್ಧಿಯ ಕುರುಡುತನವು ನೆರವುಕೊಟ್ಟಿತು. ನೈವೇದ್ಯ- ಪಾತ್ರದಂತಹ ಅಕ್ಕಮ್ಮನ ಶುದ್ಧವಾದ ಶರೀರಕ್ಕೆ ಒಂದೆ ಒಂದು ಸಲ

ಆ ನಾಯಿಯು ಮೈಲಿಗೆಯಾಯಿತು. ಆಗ ಅಕ್ಕಮ್ಮನ ಜೀವನದ ಒಂದೊಂದು ಕ್ಷಣವೂ ಅವಳಿಗೆ ಬೇಸರವಾಗಿಹೋಯಿತು. ಮುಂದೆ ಎರಡನೆಯ ದಿನವೆ ಆಕೆ–ಮನೆಯಲ್ಲಿ ಯಾರಿಗೂ ತಿಳಿಯದಂತೆ–ವಿಷದ ಮದ್ದನ್ನು ಅರೆದು ಕುಡಿದುಬಿಟ್ಟಳು. ನನಗೊಬ್ಬಳಿಗೆ ಮಾತ್ರ ಆಕೆ ತನ್ನ ಕರುಳು ಕುದಿಯು-ವಂತಹ ಕತೆಯನ್ನು ಹೇಳಿದಳು. 'ನೀನಾದರೂ ಜಾಗ್ರತಳಾಗಿದ್ದು ಪವಿತ್ರಳಾಗಿ ಉಳಿಯಬೇಕು!'' ಎಂದು ಎಚ್ಚರುಕೊಟ್ಟಳು. ಕೊನೆಗೆ ಪ್ರಾಣವು ದೇಹದಿಂದ ಹೊರಕ್ಕೆ ಹೋಗುವುದಕ್ಕೆ ಮೊದಲು, ನನ್ನನ್ನು ಆಕೆ ಬಳಿಯಲ್ಲಿ ಕರೆದಳು. 'ರತ್ನಾ ನೀನು ಹೇಗಾದರೂ ಮಾಡಿ ವಿರೂಪಾಕ್ಷರಾಯನ ಮುಯ್ಯನ್ನು ತೀರಿಸಬೇಕು!' ಎಂದು ಹೇಳಿ, ಅದರಂತೆ ನನ್ನಿಂದ ಪ್ರತಿಜ್ಞೆ ಮಾಡಿಸಿದಳು. ನೋಡಿ! ಅವನು ಒಂದು ಸಾಮ್ರಾಜ್ಯದ ದೊರೆ; ನಾನು ಒಂದು ಅಸಹಾಯಿಯಾದ ಹೆಣ್ಣು! ಏನು ಮಾಡಬೇಕು ನಾನು? ಈಗ ಎರಡು ವರುಷಗಳಿಂದಲೂ ಆ ಪ್ರತಿಜ್ಞೆಯನ್ನು ಪೂರಯಿಸುವುದಕ್ಕಾಗಿ ಹೊಂಚುಹಾಕುವುದರಲ್ಲಿದ್ದೆ. ತಂದೆತಾಯಿಗಳು ಈ ಅವಧಿಯಲ್ಲಿಯೆ ನನ್ನನ್ನು ಮದುವೆಮಾಡಿಕೊಡಬೇಕೆಂದು ಹವಣಿಸಿದರು. ಅದೆಂದಿಗೂ ಆಗದೆಂದು ನಾನು ಹಟವನ್ನು ಹಿಡಿದುಬಿಟ್ಟೆ. ಆದರೆ ನನಗೆ ಗೊತ್ತಿಲ್ಲದಂತೆಯೆ ನೀವು ನನ್ನ ಆ ಪ್ರತಿಜ್ಞಾಭಾರವನ್ನು ಇಳುಹಿಸಿ ಬಿಟ್ಟಿದ್ದೀರಿ! ಅದಕ್ಕಾಗಿ ನನ್ನ ಕೃತಜ್ಞತೆಗಳನ್ನು ಸಲ್ಲಿಸಬೇಕೆಂದು ಬಂದೆ!''

"ನಾನು ಅದನ್ನು ನಿಮ್ಮೊಬ್ಬರದೆ ಕಾರ್ಯವೆಂದು ಮಾಡಿಲ್ಲ. ಇದು ವರೆಗೆ, ನಿಮ್ಮ ಈ ಕಳವಳದ ಕಥೆಯ ಕಲ್ಪನೆ ಕೂಡ ನನಗೆ ಇರಲಿಲ್ಲ. ಸಾಮ್ರಾಜ್ಯದ ಜನತೆಯ ಮನಸ್ಸನ್ನು ತುಳಿದು ನಡೆಯುತ್ತಿದ್ದ ವಿರೂಪಾಕ್ಷ-ರಾಯನ ಪತನಕಾಲ ತನ್ನಿಂದ ತಾನೆ ಬಂದು ಒದವಿ ನಿಂತಿದ್ದಿತು. ನೆಪ ಮಾತ್ರ ನನ್ನದಾಯಿತು. ಅದಕ್ಕಾಗಿ ಕೃತಜ್ಞತೆ ಸಲ್ಲಿಸಬೇಕಾದ ಕಾರಣವೇನು? ಅಮ್ಮಾಜೀ! ನಿಜವಾಗಿಯೂ ನಿಮ್ಮ ಅಕ್ಕಮ್ಮನ ಕತೆಯು ಕರುಳನ್ನು ಸುಟ್ಟುಬಿಡುವಂತಹದೇ! ವಿರೂಪಾಕ್ಷರಾಯನಿಂದ ಅನ್ಯಾಯಗಳು ಎಷ್ಟೋ ನಡೆದುಹೋಗಿವೆ. ಈ ಮೊದಲು ನಾನು ಕೇಳಿದ್ದ ಆ ಅನ್ಯಾಯದ ಕತೆಗಳೆಲ್ಲ ವನ್ನೂ ಮರೆಯಿಸಿ ನಿಲ್ಲುವಂತಹದು ನೀವೀಗ ಹೇಳಿದುದು!''

ರತ್ನಾಂಬಿಕೆ ಬರೀ ಬಿಸಿಯಾದ ಉಸಿರೊಂದನ್ನು ಹಾಕಿ, ನಸುವೆ ತಗ್ಗಿದ

ಮೊಗದವಳಾಗಿ ಸುಮ್ಮಗೆ ಕುಳಿತಳು. ರಾಜಶೇಖರನು ಮರುಕವನ್ನು ಸೂಸುವ ಮೊಗದಿಂದ ಯೋಚನಾಲೋಕದತ್ತ ಕಣ್ಣಿಟ್ಟು ಕುಳಿತನು. ನಾಲ್ಕೈದು ನಿಮಿಷಗಳು ಹೀಗೆಯೆ ಕಳೆದುಹೋದುವು. ಅಷ್ಟರಲ್ಲಿಯೆ ಹೊರಟುಹೋಗಿದ್ದ ಕಮಲಾಂಬಿಕೆ ಮರಳಿ ಅಲ್ಲಿಗೆ ಬಂದಳು. ಬಂದವಳೆ ತನ್ನ ಸ್ವಾಭಾವಿಕ ಲೀಲಾಧ್ವನಿಯಲ್ಲಿ ಕೇಳಿದಳು.

"ರತ್ನಾ! ಆ ಕೂಸು ಎಷ್ಟು ಚೆನ್ನಾಗಿದೆಯೆನ್ನುತ್ತೀಯೆ! ನೀನೂ ನೋಡಬೇಕು ಅದನ್ನು! ಪಾಪ! ಆ ಕೂಸಿನ ತಾಯಿ ವಿಧವೆಯಂತೆ ನೋಡು!"

ರತ್ನಾಂಬಿಕೆ ಕಮಲಾಂಬಿಕೆಯನ್ನು ನೋಡುತ್ತ ತಲೆ ಅಲ್ಲಾಡಿಸಿ ವಿಷಾದದ ನಗೆ ನಕ್ಕಳು ಮಾತ್ರ. ಮಾತನೇನೂ ಆಡಲಿಲ್ಲ. ಕಮಲಾಂಬಿಕೆ ರಾಜಶೇಖರನಿಗೆ ಹೇಳಿದಳು.

"ಅಣ್ಣಾಜೀ! ಎರಡು ಪ್ರಹರಕ್ಕೆ ಬಂದಿತು. ಮನೆಗೆ ಇನ್ನು ಹೊರಡುತ್ತೇವೆ."

ರಾಜಶೇಖರನನ್ನು ಬೀಳ್ಕೊಂಡು ಇಬ್ಬರೂ ಎದ್ದು ಹೊರಟು, ಬರುವಾಗ ತಂದಿದ್ದ ತೆರೆಯ ತೇರಿನಲ್ಲಿ ಕುಳಿತರು. ತೇರು ಮುಂದುವರಿಯಿತು, ಕಳುಹಿಸಲಿಕ್ಕೆಂದು ಹೊರಕ್ಕೆ ಬಂದು ನಿಂತಿದ್ದ ರಾಜಶೇಖರನನ್ನು ರತ್ನಾಂಬಿಕೆಯು,ತೆರೆಯ ಜಾಳಿಗೆಗಳೊಳಗಿಂದ ನೋಡಿಯೆ ನೋಡುತ್ತಿದ್ದಳು. ಕಮಲಾಂಬಿಕೆಯು ಹೇಳುತ್ತಿದ್ದ ಆ ಕೂಸಿನ ತಾಯಿಯ ಕತೆಯ ಕಡೆಗೆ ಆಕೆಯ ಲಕ್ಷ್ಯವೇ ಇರಲಿಲ್ಲ.

---

## ೬ನೆಯ ಪರಿಚ್ಛೇದ

ಪ್ರಕೃತಿದೇವಿ ಮಾನವನ ಮನಸ್ಸಿಗೆ ಆಶೆಯೆಂಬ ಹುಟ್ಟುಜೊತೆಗಾತಿಯೊಬ್ಬಳನ್ನು ಗಂಟುಹಾಕಿ, ಪ್ರಪಂಚದಲ್ಲಿ ಇಲ್ಲದ ತೊಡಕನ್ನು ಉಂಟುಮಾಡಿ ಇಟ್ಟಿದ್ದಾಳೆ. ಆಶೆಯ ಅಪೇಕ್ಷೆಗಳಿಗೆ ಮೊದಲಿಲ್ಲ, ಕೊನೆಯಿಲ್ಲ. ಚಂಡಿಯಾದ ಹೆಂಡತಿ, ಮೃದುಹೃದಯದ ಗಂಡನನ್ನು ತನ್ನ ಕೈಗೊಂಬೆಯನ್ನು ಮಾಡಿ ಕುಣಿದಾಡಿಸುತ್ತಿರುವಂತೆ, ಈ ಆಶೆ ಮನುಷ್ಯರ ಮನಸ್ಸನ್ನು

ಒಂದು ಅಪೇಕ್ಷೆಯಿಂದ ಇನ್ನೊಂದು ಅಪೇಕ್ಷೆಯ ಕಡೆಗೆ – ಎಡೆಬಿಡದೆ ಎಳೆದಾಡಿ – ಕುಣಿದಾಡಿಸುವುದು. ಆಶೆಯ ರಾಜ್ಯದಲ್ಲಿ ತೃಪ್ತಿ – ತುಷ್ಟಿಗಳೆಂಬಿವು ಇಲ್ಲವೆ ಇಲ್ಲ. ಆಶೆಯ ಒಂದು ಬಯಕೆ ಪೂರ್ತಿಯಾಗುವುದೇ ತಡೆ; ಅದರ ಪೂರ್ತಿಯ ಗರ್ಭದಲ್ಲಿಯೆ ಇನ್ನೊಂದು ಬಯಕೆಯ ಆರಂಭ ವಿರುವುದು. ಮೊದಲಿನ ಬಯಕೆ ನೆರವೇರಿದ ಆನಂದಾನುಭವವನ್ನು ಕೂಡ ಮರೆತು – ಮನಸ್ಸು – ಇನ್ನೊಂದನ್ನು ಬೆಂಬತ್ತಿ ಕೊರಗಿ ಮರುಗಲು ತೊಡಗುವುದು.

ಪೆದ್ದರಾಯನ ಮನದ ಆಶೆಯಂತೆ ವಿರೂಪಾಕ್ಷರಾಯನ ಆಡಳಿತದ ಕೊನೆಯಾಯಿತು. ತಂದೆಯನ್ನು ಕೊಂದು ಅಣ್ಣತಮ್ಮಂದಿರಿಬ್ಬರನ್ನೂ ದೇಸಿಗರನ್ನಾಗಿ ಮಾಡಿದ್ದುದರ ಮುಯ್ಯನ್ನು, ದೊರೆಯ ಕೊಲೆಯ ಮೂಲಕವಾಗಿ ಮುಟ್ಟಿಸಿದಂತಾಯಿತು. ಪೆದ್ದರಾಯನ ಪ್ರತಿಜ್ಞೆಯಂತೆ ಮಲ್ಲಿಕಾರ್ಜುನನ ಮನೆತನಕ್ಕೆ ಸಾಮ್ರಾಜ್ಯಸಿಂಹಾಸನದ ಅಧಿಕಾರವು ಬಂದಿತು. ಅದರಲ್ಲಿಯೂ ಒಳಗೊಳಗೆಯೆ ಜಿನುಗುದನಿಯಲ್ಲಿ ಗುಣುಗುಡುತ್ತಿದ್ದ ಆತನ ಆಶೆಯ ಕಿವಿಮಾತಿನಂತೆ, ಸಾಮ್ರಾಜ್ಯಮುಕುಟ ತನ್ನ ತಲೆಯನ್ನೇ ಅಲಂಕರಿಸಲಿದ್ದಿತು. ಇನ್ನೇನು ಎಂಟು ದಿನಗಳು ಕಳೆದು ಹೋದರೆ ಮರುದಿನವೆ ಮಾಘಮಾಸದ ಮೊದಲುದಿನ. ಪಟ್ಟಾಭಿಷೇಕದ ಸಮಾರಂಭ ಆವೊತ್ತು ನೆರವೇರಬೇಕೆಂದು ನಿರ್ಣಯವಾಗಿ ಬಿಟ್ಟಿದ್ದಿತು. ಕರ್ಣಾಟಕ ರಾಜ್ಯಲಕ್ಷ್ಮಿ ಅಂದು ಪೆದ್ದರಾಯನ ಕೈಹಿಡಿಯುವವಳು. ದಕ್ಷಿಣಭಾರತದ ಪ್ರದೇಶವೆಲ್ಲವೂ ಅಂದು ಆತನ ರಾಜಚ್ಛತ್ರದ ಅಡಿಯಲ್ಲಿ ನಿಂತಿರಬೇಕಾದುದು.

ಪಟ್ಟಾಭಿಷೇಕಸಮಾರಂಭದ ಔತಣದೋಲೆಗಳು ಈಗಾಗಲೆ ಸಾಮ್ರಾಜ್ಯದಲ್ಲಿಯ ಎಷ್ಟೋ ಜನ ಮಾಂಡಲಿಕ, ಸಾಮಂತ, ಮನ್ನೆಯರ ಕಡೆಗೆ ಹೋಗಿವೆ. ಇನ್ನೂ ಹೋಗುವುದರಲ್ಲಿವೆ. ಸಮಾರಂಭದ ಸಿದ್ಧತೆಯು ರಾಜಧಾನಿಯಲ್ಲಿ ಹಲವು ಮುಖಗಳಿಂದ ನಡೆದಿದೆ.

ಮೂರು ಪ್ರಹರಗಳು ಮುಗಿದು ಹೋದುವು; ಆದರೂ ಪೆದ್ದರಾಯನು ಪರ್ಯಂಕದಲ್ಲಿ ಬಿದ್ದುಕೊಂಡಿದ್ದವನು ಬಿದ್ದುಕೊಂಡಿದ್ದಂತೆಯೆ ಇರುವನು. ಉದ್ದಕ್ಕೆ ಕಾಲುನೀಡಿಕೊಂಡು ಅಂಗತ್ತಲಾಗಿ ಮಲಗಿಕೊಂಡಿದ್ದಾನೆ.

ತಲೆದಿಂಬಿನ ಮೇಲಿದ್ದ ತಲೆಯ ಕೆಳಕ್ಕೆ – ಒಂದರಲ್ಲೊಂದು ಬೆರಳುಗಳನ್ನು ಹೆಣೆದುಕೊಂಡ ಅಂಗೈಯ ಜೊತೆಯನ್ನು ಇರಿಸಿಕೊಂಡಿದ್ದಾನೆ. ಅಲುಗದ ನೆಟ್ಟನೋಟವನ್ನು, ಶಯ್ಯಾಗಾರದ ಮೇಲಣ ದಂತದ ಜಂತಿಯೊಂದರಲ್ಲಿ ನಿಲ್ಲಿಸಿಬಿಟ್ಟಿದ್ದಾನೆ. ಎಡದ ಅಡಿಯ ಮೇಲೆ ಏರಿಕುಳಿತಿದ್ದ ಬಲದ ಅಡಿಯನ್ನು ಇಷ್ಟವಿದ್ದೊ ಇಲ್ಲದೆಯೋ – ನಿಧಾನವಾಗಿ ಕುಣಿಸುತ್ತಲಿದ್ದಾನೆ. ಆಶೆಗಳೆಲ್ಲ ನೆರವೇರಿದ ಸಂತೃಪ್ತಭಾವ ಆತನ ಮೊಗದಲ್ಲಿ ನಸುವೂ ಕಾಣುತ್ತಿರಲಿಲ್ಲ. ಚಿಂತಾರೇಷೆಗಳು ಮಾತ್ರ ಹುಬ್ಬುಹಣೆಗಳಲ್ಲಿ ಮೂಡಿ – ಒಂದು ನಿಮಿಷ ಕೂಡ ಮರೆಗೊಳ್ಳದೆ ನಿಂತುಬಿಟ್ಟಿವೆ. ಆತನ ಒಳದನಿ ಹೀಗೆ ಹೀಗೆ ನುಡಿಯುತ್ತಿದ್ದಿತು.

"ರತ್ನಾಂಬಿಕೆಯ ಜೊತೆಯಲ್ಲಿ ನಾನು ಕಳೆದ ಕಾಲವು ಎಷ್ಟೊಂದು! ಕಮಲಾಂಬಿಕೆಯನ್ನು ಕಂಡುದು ಮಾತ್ರ ಒಂದೆ ಒಂದು ಸಲ. ರತ್ನಾಂಬಿಕೆ ನನ್ನೆದುರು ಸುಖದುಃಖದ ಸಂಗತಿಗಳನ್ನು ಹೇಳಿದುದೆಷ್ಟು! ಚಿಂತಾಜಡನಾಗಿರುವಾಗ ಕಾರ್ಯೋನ್ಮುಖನಾಗುವಂತೆ ನನಗೆ ಹುರುಪುಗೊಟ್ಟುದೆಷ್ಟು? ಸ್ವಜನಶೂನ್ಯನಾಗಿ ತೊಳಲುತ್ತಿದ್ದ ನನಗೆ ಒಲವಿನ ಆದರೋಪಚಾರಗಳನ್ನು ಸಲ್ಲಿಸಿದುದೆಷ್ಟು! ಆದರೆ ಎಲ್ಲವೂ ವಿಚಿತ್ರ...! ಇದುವರೆಗೆ ನನ್ನ ಹೃದಯಪಟದಲ್ಲಿ ಎಡೆಬಿಡದೆ ಮೂಡಿನಿಂತುಕೊಂಡಿದ್ದ ರತ್ನಾಂಬಿಕೆಯ ಮೂರ್ತಿಯನ್ನು ಪೂರ್ತಿಯಾಗಿ ಮರೆಮಾಡಿ, ಅಲ್ಲಿ ಕಮಲಾಂಬಿಕೆಯ ಮೂರ್ತಿ ನಿಂತುಬಿಟ್ಟಿದೆ. ಇಬ್ಬರ ಚೆಲುವನ್ನೂ ತುಲನೆಮಾಡಿನೋಡಬೇಕೆಂದು, ರತ್ನಾಂಬಿಕೆಯ ರೂಪವನ್ನು ನೆನಪಿನಲ್ಲಿ ತಂದುಕೊಳ್ಳಬೇಕೆಂದು ಪ್ರಯತ್ನಿಸಿದರೆ, ಅಲ್ಲಿ ಬಂದು ನಿಂತಿರುವವಳೂ ಕಮಲಾಂಬಿಕೆಯೆ ಆಗಿರುವಳು. ಒಂದು ಕ್ಷಣದ ನೆನಹು ಇದುವರೆಗಿನ ನನ್ನ ಜೀವನದ ನೆನಹನ್ನೆಲ್ಲ ನುಂಗಿಕುಳಿತಿದೆ...! ನನ್ನ ಎದೆಯ ಕೊರೆತವೆಲ್ಲ ಕೊನೆಗಂಡಿತೆಂದು ಸಮಾಧಾನದಲ್ಲಿರುವಾಗಲೆ ಇದೊಂದು ಹೊಸ ದುಗುಡ ಒಳಹೊಕ್ಕು ಜೀವವನ್ನು ಕೊರೆಯುತ್ತಲಿದೆ. ಇದುವರೆಗಿನ ಕೊರೆತಗಳೆಲ್ಲದರ ಕೊನೆಯಾದಂತೆ ಈ ಹೊಸ ಕೊರೆತದ ಕೊನೆಯನ್ನೂ ಕಾಣುವ ದಿನವನ್ನು ನೋಡಬಹುದೇ ನಾನು..? ಅಹಹ! ಆ ದಿನವು ನನ್ನ ಬದುಕಿಗೆ ಎಂತಹ ಸವಿಯನ್ನು ಒದವಿಸಿ ತರಬಹುದು!............."

ಪೆದ್ದರಾಯನ ಅಂತರಂಗದ ಮಾತಿನ ಪ್ರವಾಹ ಇನ್ನೂ ಮುಂದು ವರಿಯ ಬಹುದಾಗಿದ್ದಿತು. ಬಾಗಿಲಾಳು ಮೆಲ್ಲಗೆ ಒಳಕ್ಕೆ ಬಂದ. ಪೆದ್ದರಾಯ ಕಣ್ಣು ತೆರೆದೇ ಮಲಗಿದುದನ್ನು ಕಂಡು 'ಬುದ್ಧೀ' ಎಂದು ಕರೆದ. ಆತ ತನ್ನ ಕಡೆಗೆ ಹೊರಳಿನೋಡಿದೊಡನೆಯೆ ಪೊಡಮಟ್ಟು ಬಿನ್ನಹ ಮಾಡಿದ.

"ಈಶ್ವರನಾಯಕರು ಬಂದಿದ್ದಾರೆ ಬುದ್ಧೀ!

ಸ್ವಲ್ಪಕಾಲ ಯೋಚಿಸಿ ಕೂಡಲೆ ರಾಯನು ಹೇಳಿದ.

"ಹೋಗು! ಇಲ್ಲಿಗೇ ಬರುವಂತೆ ಅವರಿಗೆ ಹೇಳು!"

ಸೇವಕನು ಹೊರಟುಹೋದೊಡನೆಯೆ ಪೆದ್ದರಾಯನು ಬಿದ್ದುಕೊಂಡಿದ್ದಲ್ಲಿಯೆ ಎದ್ದು ಕುಳಿತ; ಒಂದೆರಡು ನಿಮಿಷಗಳಲ್ಲಿಯೆ ಈಶ್ವರನಾಯಕನು ಒಳಕ್ಕೆ ಬಂದ.

ಈಶ್ವರನಾಯಕನು ವಿಜಯನಗರದ ಮುಖ್ಯಸೈನ್ಯದಲ್ಲಿ ಐನೂರು ಜನ ರಾವುತರ ದಳಕ್ಕೆ ಮೇಲಾಳಾಗಿದ್ದನು. ಇವನು ದಳವಾಯಿ ದೇವಣ್ಣ ನಾಯಕರಿಗೆ ದೂರದ ಸಂಬಂಧಿ. ರತ್ನಾಂಬಿಕೆಯಿಂದ ಸಹೋದರಪ್ರೀತಿ-ಯನ್ನು ಪಡೆಯುತ್ತಿರುವವನು. ಪೆದ್ದರಾಯನಿಗೆ ಮೊದಲಿನಿಂದಲೂ ಅಂತ-ರಂಗದ ಸ್ನೇಹಿತನು. ಇಬ್ಬರೂ ಸಾಮಾನ್ಯವಾಗಿ ಒಂದೆ ವಯಸ್ಸಿನವರು. ವಿರೂಪಾಕ್ಷರಾಯನನ್ನು ಸಿಂಹಾಸನದಿಂದ ತಳ್ಳಿ, ಸಾಮ್ರಾಜ್ಯವನ್ನು ಮರಳಿ ಕಿತ್ತುಕೊಂಡೇ ಬಿಡುವೆನೆಂದು ಪ್ರತಿಜ್ಞೆಮಾಡಿ ಹೊರಟಿದ್ದ ಪೆದ್ದರಾಯನಿಗೆ, ಈಶ್ವರನಾಯಕನ ಸಹಾಯದ ಆಶ್ವಾಸನವು ಸಂಪೂರ್ಣವಾಗಿ ಇದ್ದಿತು. ತಾನು ವಿಜಯನಗರದ ದಂಡನಾಯಕನಾಗಬೇಕೆಂಬ ಮಹತ್ವಾ-ಕಾಂಕ್ಷೆಯೆ ಅವನನ್ನು ಈ ಸಹಾಯದ ಆಶ್ವಾಸನಕ್ಕೆ ಸಿದ್ಧನನ್ನಾಗಿ ಮಾಡಿದ್ದಿತು. ಈ ಮಹತ್ವಾಕಾಂಕ್ಷೆ ಈಶ್ವರನಾಯಕನ ಮನಸ್ಸಿನಮೇಲೆ ಯಾವಾಗಲೂ ತನ್ನ ಆಡಳಿತ ನಡೆಯಿಸಿ, ಅವನನ್ನು ಅತೃಪ್ತಹೃದಯ ನನ್ನಾಗಿಸಿ ಬಿಟ್ಟಿದ್ದಿತು.

ವಿರೂಪಾಕ್ಷರಾಯನ ಕೊಲೆಯಾಗುವುದಕ್ಕೆ ಮೊದಲು ಪೆದ್ದರಾಯ ತನ್ನವರೆನಿಸಿಕೊಳ್ಳುವ ಎಲ್ಲರೆದುರೂ, ರಾಜಶೇಖರನನ್ನು ಹೇಡಿಯೆಂದು ಹೀಗಳೆದು ನುಡಿಯುತ್ತಿದ್ದ. ಅದರಂತೆಯೆ ಈಶ್ವರನಾಯಕನ ಎದುರೂ ಎಷ್ಟೆಷ್ಟೋ ಹೀಯಾಳಿಸಿ ನುಡಿದಿದ್ದ. ಇದರ ಪರಿಣಾಮ ಈಶ್ವರನಾಯಕನ

ಮನಸ್ಸಿನ ಮೇಲೆ ಸಾಕಷ್ಟು ಆಗಿದ್ದಿತು. ಅಲ್ಲದೆ ತಾನು ಈರ್ಷೆ – ಮತ್ಸರ ಗಳಿಂದ ನೋಡುತ್ತಿದ್ದ ನರಸಿಂಹನಾಯಕನಿಗೆ, ರಾಜಶೇಖರನು ತೀರ ಬಳಿಯ ಸ್ನೇಹಿತನೆಂಬುದಂತೂ ಅವನ ಮನಸ್ಸಿನ ಪರಿಣಾಮವನ್ನು ಪರಿಪುಷ್ಟಗೊಳಿಸಿ ಬಿಟ್ಟಿದ್ದಿತು. 'ರಾಜಶೇಖರ' ಎಂದು ಯಾರಾದರೂ ಹೆಸರುಗೊಂಡರೆ ಸಾಕು! ತಿರಸ್ಕಾರ ರೋಷಗಳ ಚಿಹ್ನೆಗಳು ಕಾಣುವುವು·· ಈಶ್ವರನಾಯಕನ ಮುಖದ ಮೇಲೆ. ರಾಜಶೇಖರನ ವಿಷಯದಲ್ಲಿ ಪೆದ್ದಣ್ಣನ ಅಭಿಪ್ರಾಯವು ಈಗ ಮಾರ್ಪಟ್ಟಂತೆ ಆಗಿದ್ದಿತಾದರೂ ಈಶ್ವರನಾಯಕನ ಅಭಿಪ್ರಾಯ ಇದ್ದಂತೆಯೆ ಇದ್ದುಬಿಟ್ಟಿದ್ದಿತು. ಒಳಕ್ಕೆ ಬಂದೊಡನೆಯೆ ಪೆದ್ದರಾಯನು ನಾಯಕನನ್ನು ಸ್ನೇಹಹಾಸ್ಯದೊಂದಿಗೆ ಬರಮಾಡಿಕೊಂಡು, ಸಮೀಪ ದಲ್ಲಿಯೆ ಇದ್ದ ಪೀಠದಲ್ಲಿ ಕುಳ್ಳಿರಿಸಿದನು. ಇಬ್ಬರಲ್ಲಿಯೂ ಮಾತಿಗೆ ಮೊದ ಲಾಯಿತು. ಈಶ್ವರನಾಯಕನು ಹೇಳಿದ:–

"ಪೆದ್ದಣ್ಣಾ, ಕೊನೆಗೂ ವಿಜಯನಗರಕ್ಕೆ ಒದಗಿದ್ದ ಇನ್ನೊಂದು ಗಂಡಾಂತರವೂ ದೂರವಾಗಿ ಹೋಯಿತೆಂದು, ಮತ್ತೆ ಮತ್ತೆ ಆನಂದ ನನಗೆ!"

"ಇನ್ನೊಂದು ಗಂಡಾಂತರ ಯಾವುದು ಈಶ್ವರಾ?"

"ಯಾವುದೆಂದು ಕೇಳುತ್ತೀರಲ್ಲ ಇನ್ನೂ! ನಿಮ್ಮ ಅಣ್ಣಾಜಿಯವರು ಸಿಂಹಾಸನಾಧಿಪತಿಗಳಾಗಬೇಕಾಗಿದ್ದುದು! ಅದೊಂದು ಗಂಡಾಂತರವಲ್ಲದೆ ಬೇರೆಯೇನು?"

"ಇದೇನು ಮಾತು ಈಶ್ವರಾ! ಇದುವರೆಗೆ ಅಣ್ಣಾಜಿಯವರನ್ನು ನಾವೆಲ್ಲರೂ ತಪ್ಪು ತಿಳಿದುಕೊಂಡಿದ್ದೆವು! ಅವರ ಪರೀಕ್ಷೆಯೆ ನಮಗೆ ಆಗಿರಲಿಲ್ಲ!"

"ಈಗ ಒಮ್ಮೆಲೆ ಆಗಿಯೆ ಹೋಯಿತೇನು..ಅವರ ಪರೀಕ್ಷೆ ನಿಮಗೆ? ಪೆದ್ದಣ್ಣಾ ನಿಮಗೊಂದು ಮಂಕುಹಿಡಿದುಬಿಟ್ಟಿದೆ. ಏನೋ! ಕಾಲಕ್ಕೂ ಕರ್ಮಕ್ಕೂ ಕೂಡಿ ಬಂದಿತು; ಎಂತಲೇ ರಾಜಶೇಖರನು – ವೇಷಬದಲಿಸಿ-ಕೊಂಡು – ಒಬ್ಬನೆ ಕಳ್ಳತನದಿಂದ – ಅರಮನೆಯೊಳಕ್ಕೆ ನುಗ್ಗಿದ; ನಿಶ್ಶಸ್ತ್ರ-ನಾಗಿ ನಿಂತಿದ್ದ ವಿರೂಪಾಕ್ಷರಾಯನನ್ನು ಕೊಲೆಮಾಡಿ, ಸಲ್ಲದ ಕೀರ್ತಿಗೆ ಪಾತ್ರನಾಗಿ ನಿಂತ. ಇಷ್ಟಕ್ಕೆ ಆತನ ಧೈರ್ಯ–ಶೌರ್ಯ–ಸಾಹಸಗಳ ಪರೀಕ್ಷೆಯಾದಂತಾಗಿ ಹೋಯಿತೇ ನಿಮಗೆ? ರಾಜಶೇಖರನನ್ನು ಬಿಟ್ಟು,

ಅಂದು ನಿಮ್ಮ ಅಡಿಗೆಮನೆಯ ಲಚ್ಚಮ್ಮನನ್ನು ಕಳುಹಿಸಿದ್ದರೂ ಅವನಷ್ಟು ಕಾರ್ಯವನ್ನು ಮಾಡಿ ಬರುತ್ತಿದ್ದಳು; ಗೊತ್ತಾಯಿತೇ?"

"ಕೇವಲ ಕೊಲೆಮಾಡಿದ್ದ ಮಾತನ್ನು ಬಿಟ್ಟುಬಿಡು ಈಶ್ವರಾ! ಅಣ್ಣಾಜಿಯವರ ಮನಸ್ಸಿನ ಉನ್ನತಿಯೆಂತಹದು? ಹೃದಯದ ವಿಕಸನವೆಂತಹದು? ಮೋಹ–ಲೋಭಗಳ ಸಂಯಮವೆಂತಹದು? ಲೋಕವನ್ನು ನೋಡುವ ಅವರ ದೃಷ್ಟಿಯ ವೈಶಾಲ್ಯವೆಂತಹದು? ನಿಜವಾಗಿಯೂ ಅಣ್ಣಾಜಿಯವರು ಒಬ್ಬ ಯೋಗಿಗಳೆಂದು ನನ್ನ ಭಾವನೆ!"

"ಅವರು ಯೋಗಿಗಳಿರಲಿ ಭೋಗಿಗಳಿರಲಿ! ರಾಜಶೇಖರನು ವಿಜಯನಗರಕ್ಕೆ ದೊರೆಯಾಗಿದ್ದಲ್ಲಿ, ಸಾಮ್ರಾಜ್ಯಕ್ಕೆ ಸಂಕಟಸಂದರ್ಭ ಒದಗುತ್ತಿದ್ದಿತೇನೋ ಸರಿ! ಪೆದ್ದಣ್ಣಾ! ಒಬ್ಬೊಬ್ಬರಿಗೆ ಒಂದೊಂದು ಬಗೆಯ ಹುಚ್ಚು! ವಿರೂಪಾಕ್ಷರಾಯರಿಗೆ ಹೆಣ್ಣಿನ ಹುಚ್ಚಾದರೆ, ಈತನಿಗೆ 'ಯೋಗಿ' 'ಋಷಿ' ಎಂದು ಹೊಗಳಿಸಿಕೊಳ್ಳುವ ಹುಚ್ಚು. ಅವರು ಹೆಣ್ಣಿಗೆ ಮರುಳಾಗಿ ಮಹಮ್ಮದೀಯರಿಗೆ ರಾಜ್ಯದಲ್ಲಿ ಆಶ್ರಯಕೊಟ್ಟರು. ಇವನು ತನ್ನ ಸಾಧುತ್ವದ ಸಮದೃಷ್ಟಿಯ ಸೋಗಿಗಾಗಿ, ಅವರಿಗೆ ಆಶ್ರಯಕೊಡುವುದಿಷ್ಟೇ ಅಲ್ಲ; ಮಹಮ್ಮದೀಯರ ಕಡೆಯಿಂದ ಕನ್ನಡಿಗರ ಎದೆಯನ್ನು ತುಳಿಯಲಿಕ್ಕೆ ಹಚ್ಚಬಹುದು!"

"ಅದೊಂದು ಮಾತಿನ ವಿಷಯದಲ್ಲಿ ಮಾತ್ರ ನನಗೂ ಸಂದೇಹವಿಲ್ಲದೆ ಇರಲಿಲ್ಲ. ಅಣ್ಣಾಜಿಯವರೇ ದೊರೆಗಳಾಗುವ ಸಂದರ್ಭವಿದ್ದಲ್ಲಿ, ಈ ಮಾತಿನ ನಿರ್ಣಯವನ್ನು ಮಾಡಿಕೊಳ್ಳದೆ ನಾನೇನೂ ಹಾಗೆಯೆ ಬಿಡುತ್ತಿರ-ಲಿಲ್ಲ. ವಿರೂಪಾಕ್ಷರಾಯರ ಆಡಳಿತದಲ್ಲಿ ರಾಜಧಾನಿಯಲ್ಲಿ ಇದ್ದುಕೊಂಡು, ಕಪಟತಂತ್ರಗಳನ್ನು ಹೂಡಿದ್ದ ಕಲಬುರ್ಗಿಯ 'ಫಿತೂರಿಗಾರ'ರನ್ನೆಲ್ಲ ಕ್ಷಮಿಸಿ, ಅವರನ್ನೆಲ್ಲ ಹಾಗೆಯೆ ದಾಟಿಸಿಬಿಟ್ಟುದು ನನಗೆ ಸ್ವಲ್ಪವೂ ಸರಿಬರಲಿಲ್ಲ! ಸಾಮ್ರಾಜ್ಯವನ್ನು ಮುಳುಗಿಸಲಿಕ್ಕೆ ನಿಂತವರಿಗೆ ಕ್ಷಮೆಯನ್ನು ತೋರಿಸುವುದೇ? ಇದೊಂದು ವಿಷಯವನ್ನು ಬಿಟ್ಟರೆ ಅಣ್ಣಾಜಿಯವರಲ್ಲಿ ಯಾವ ಕೊರತೆಗಳನ್ನೂ ಕಾಣುವಂತಿಲ್ಲ."

"ನೀವು ತುಂಬ ಭಾವನಾತ್ಮಕ ಮನುಷ್ಯರು! ಬೆಳ್ಳಗೆ ಕಂಡುದನ್ನೆಲ್ಲ ಹಾಲೆಂದೇ ಹೊರಟುಬಿಡುತ್ತೀರಿ! ಪೂರ್ಣವಾಗಿ ಪರೀಕ್ಷೆಯಾಗದೆ ಯಾವು-

ದನ್ನೂ ನಿರ್ಣಯಿಸಿ ಕುಳಿತುಬಿಡಲಾಗದು! ಈಗ ನೋಡಿ! ರಾಜಶೇಖರನ ಒಂದೆರಡು ಕಾರ್ಯಗಳಿಂದಲೊ, ಒಂದೆರಡು ಮಾತುಗಳಿಂದಲೊ ಮರುಳಾಗಿ ಅವನನ್ನು ಯೋಗಿಯೆಂದು – ದೇವರೆಂದು – ತಲೆಯ ಮೇಲಿಟ್ಟು ಕೊಂಡು ನೀವು ಕುಣಿಯುತ್ತಲಿದ್ದೀರಿ! ನನಗೆ ಇಷ್ಟರಿಂದಲೆ ತೃಪ್ತಿಯಿಲ್ಲ. ಮನುಷ್ಯನ ಬೆಲೆಯನ್ನು ಕಟ್ಟುವುದಾದಲ್ಲಿ, ಆತನ ಜೀವನದ ಪ್ರತಿಯೊಂದು ಕ್ಷಣವನ್ನೂ ಅರೆದರೆದು, ಒರೆದೊರೆದು, ನೋಡುತ್ತಿರಬೇಕು!''

ಸಮ್ಮತಿಯೇ ಅಸಮ್ಮತಿಯೇ! ಈಶ್ವರನಾಯಕನ ಮಾತಿಗೆ ಪೆದ್ದ ರಾಯನು ಮೌನವನ್ನು ತಳೆದು ಕುಳಿತುಕೊಂಡನು. ಈಶ್ವರನಾಯಕನು ಮುಂದೆ ಮಾತನಾಡಿದನು.

''ಏನೆ ಆಗಲಿ ಪೆದ್ದಣ್ಣಾ! ಸಾಮ್ರಾಜ್ಯಾಧಿಕಾರ ನಿಮ್ಮಂತಹ ವೀರಾ-ಗ್ರಣಿಗಳ ಕಡೆಗೆ ಬಂದುದು ಕರ್ಣಾಟಕದ ಸುದೈವವೆ ಸರಿ! ನಮ್ಮ ದೇಶದ ಯಾವ ಭಾಗದಲ್ಲಿಯೂ ವಿಧರ್ಮಿಯರ ಒಂದು ಮುಖ ಕೂಡ ಕಾಣದಂತೆ ಮಾಡುವುದೇ ನಮ್ಮ ಆಡಳಿತದ ಗುರಿಯಾಗಿರಬೇಕು! ಆದರೆ ನೀವು ನರ ಸಿಂಹನಾಯಕರನ್ನು ದಂಡನಾಯಕರನ್ನಾಗಿ ಮಾಡಿಕೊಂಡರೆ ಮಾತ್ರ ಈ ಗುರಿಯನ್ನು ನಾವು ಎಂದೂ ಮುಟ್ಟಲಾರೆವೆಂದು ನನ್ನ ಖಂಡಿತವಾದ ಭಾವನೆ!"

ನರಸಿಂಹನಾಯಕರೆಂಬ ಮಾತು ಕಿವಿಗೆ ಬಿದ್ದೊಡನೆಯೆ ಪೆದ್ದಣ್ಣನ ಮನಸ್ಸು ಪ್ರಕ್ಷುಬ್ಧವಾದ ಕಡಲಿನಂತೆ ಕಲಕುಮಲಕಾಯಿತು. ಮೈ ಜುಮ್ಮೆಂದಿತು. ನೋಟ ಎದುರಿಗಿದ್ದ ಈಶ್ವರನಾಯಕನನ್ನು ಬಿಟ್ಟು ಇನ್ನೆಲ್ಲಿಯೋ ತೊಡಕಿಕೊಂಡಿತು. ಯೋಚನೆಯಿಂದ ಮಂಕುಗೊಂಡವನಾಗಿ ಆತನು ತುಟಿ ಮಿಟುಕಿಸದೆ ಕುಳಿತುಕೊಂಡಿದ್ದ. ಅವನ ಕದಡಿದ ಬಗೆಯನ್ನು ಕಂಡು ಈಶ್ವರನಾಯಕನು ಕೇಳಿದ.

"ಯೋಚನೆಯೇನು ಪೆದ್ದಣ್ಣಾ! ಹೀಗೇತಕ್ಕೆ ಸುಮ್ಮಗೆ ಕುಳಿತು ಬಿಟ್ಟಿದ್ದೀರಿ?"

ಪೆದ್ದರಾಯನಿಗೆ ಮರುಮಾತುಕೊಡುವ ಎಚ್ಚರವೆ ಇರಲಿಲ್ಲ. ಈಶ್ವರನು ಗಟ್ಟಿಯಾಗಿ ಕೂಗಿದ.

"ಪೆದ್ದಣ್ಣಾ!"

ಹಾರಿಬಿದ್ದವನಾಗಿ ಪೆದ್ದಣ್ಣ ಕೇಳಿದ.

"ಏಯ್‌ . . ಏನು ?"

"ಇದೇನು ಹೀಗೇತಕ್ಕೆ ಕುಳಿತುಕೊಂಡಿದ್ದೀರಿ? ಮತ್ತೆ ಯಾವ ಯೋಚನೆ ತಲೆಯನ್ನು ತಿನ್ನಲು ತೊಡಗಿದೆ? ನರಸಿಂಹನಾಯಕರ ದಂಡನಾಯಕತ್ವದ ವಿಷಯವೇನು ?"

"ಹುಂ . .! ಅಹುದು . .!"

"ಅದರದೇನು ದೊಡ್ಡ ವಿಚಾರ? ಮೊದಲಿನ ದೊರೆಗಳು ಹೇಗೂ ಅವರನ್ನು ಅಧಿಕಾರದಿಂದ ತೆಗೆದುಬಿಟ್ಟಿದ್ದಾರೆ. ನೀವು ಹೊಸದಾಗಿ ದೊರೆಗಳಾಗುವವರು ! ಹೊಸದೊರೆಗಳಿಗೆ ಹೊಸದಂಡನಾಯಕ! ಯಾರನ್ನಾದರೂ ಯೋಗ್ಯರಾದವರನ್ನು ಹೊಸತಾಗಿ ಮಂತ್ರಿಪದಕ್ಕೆ ನಿಯಮಿಸಿಕೊಂಡುಬಿಡು . . ಆಯಿತು." ಆಶೆಯ ನೋಟಗಳಿಂದ ನೋಡುತ್ತ ಈಶ್ವರನಾಯಕನು ನುಡಿದ. ಅವನ ಆ ಆಶೆಯ ನೋಟ, ಪೆದ್ದರಾಯನ ಆಶ್ವಾಸನದ ನೋಟವನ್ನು ಪ್ರತಿಯಾಗಿ ಪಡೆಯದೆ ಹೋದುದರಿಂದ ನಿರಾಶೆಗೊಂಡಿತು. ಪೆದ್ದರಾಯನು ಒಮ್ಮೆಲೆ ಈಶ್ವರನಾಯಕನನ್ನು ಕೇಳಿದನು.

"ನೀನು ಹಿಂದೋಳರಾಗವನ್ನು ಕೇಳಿದ್ದೀಯಾ ಈಶ್ವರಾ?"

"ಬೇಕಾದಷ್ಟು ಸಲ ಕೇಳಿದ್ದೇನೆ. ವಿರೂಪಾಕ್ಷರಾಯರ ಆಶ್ರಯದಲ್ಲಿದ್ದ ಮೇಲೆ ಸಂಗೀತ-ನರ್ತನಗಳಿಗೇನು ಬರಗಾಲ ? ಹಿಂದೋಳವೊಂದೇ ಏಕೆ? ಸಾವಿರಾರು ರಾಗಗಳನ್ನು ಕೇಳಿದ್ದೇನೆ. ಮೊದಲಿನ ದೊರೆಗಳ ಆಡಳಿತದಲ್ಲಿ ಸಾಮ್ರಾಜ್ಯದ ಭಾಂಡಾರವೆಲ್ಲ ಈ ರಾಗರಸಗಳಿಗಾಗಿಯೆ ಬರಿಯದಾಗಿ ಬಿಡುತ್ತಿದ್ದಿತಲ್ಲವೇ ?"

"ಮೊನ್ನೆ ಮೊನ್ನೆ ನರಸಿಂಹನಾಯಕರ ಮಗಳು ಹಿಂದೋಳರಾಗವನ್ನು ಆಲಾಪಿಸುತ್ತಿದ್ದುದನ್ನು ಕೇಳಿದೆ. ಎಷ್ಟು ಚೆನ್ನಾಗಿದ್ದಿತೆನ್ನುತ್ತೀಯೆ ?"

"ಮರೆತುಬಿಟ್ಟಿದ್ದ ಸಂಗೀತದ ಮೋಹ ಮತ್ತೆ ನಿಮಗೆ ಉಂಟಾಯಿತೇ ಪೆದ್ದಣ್ಣಾ ?"

"ನನ್ನ ಪ್ರತಿಜ್ಞೆಯು ನನ್ನೆಲ್ಲ ಒಲವುಗಳನ್ನೂ ತಳಕ್ಕೆ ಒತ್ತಿ, ಎಲ್ಲೆಲ್ಲಿಯೂ ತಾನೆ ತಾನಾಗಿ ನಿಂತುಬಿಟ್ಟಿದ್ದಿತು. ಎಂತಲೆ ಆಗ ಮನಸ್ಸು

ಒಂದೆ ಕಟ್ಟಿಗೆ ಸಿಲುಕಿ ಒಂದೆ ವೊಗದಿಂದ ಓಡುತ್ತಿದ್ದಿತು. ಈಗ ಪ್ರತಿಜ್ಞೆಯ ಪೂರ್ಣತೆಯು ಮನಸ್ಸಿನ ಕಟ್ಟನ್ನು ಒಡೆಯಿತು. ತಳಕ್ಕೆ ಹೋಗಿದ್ದ ಒಲವುಗಳು ಮೇಲುವೊಗಮಾಡಿ ನಿಂತುಕೊಂಡಿವೆ. ಈಶ್ವರಾ, ವೊನ್ನೆಯ ಆ ರಾಗವನ್ನು ಒಂದು ನಿಮಿಷವೂ ಬಿಡದೆ ಕೇಳುತ್ತಿರಬೇಕೆಂದು ಎನಿಸುತ್ತಿದೆ ನೋಡು!"

"ಅಷ್ಟು ಚೆನ್ನಾಗಿ ಹೇಳುತ್ತಾಳೇನು ನರಸಿಂಹನಾಯಕರ ಮಗಳು? ಕಮಲಾಂಬಿಕೆಯೆಂದಲ್ಲವೇ ಅವಳಿಗೆ ಹೆಸರು?"

"ಕಮಲಾಂಬಿಕೆ··! ಹೂಂ··! ಕಮಲಾಂಬಿಕೆ!"

ಪೆದ್ದರಾಯನ ಅಸ್ಥಿರಚಿತ್ತದ ಅರ್ಥ ಈಶ್ವರನಾಯಕನಿಗೆ ಸ್ವಲ್ಪ-ಸ್ವಲ್ಪವೆ ಆಗಲು ತೊಡಗಿತು. ಪೂರ್ತಿಯಾಗಿ ಕಂಡುಹಿಡಿಯಬೇಕೆಂದೋ ಏನೋ! ಒಮ್ಮೆಲೆ ಪ್ರಶ್ನೆ ಮಾಡಿದನು.

"ಮದುವೆಯಾಗಿದೆಯೇ ಪೆದ್ದಣ್ಣಾ ಅವಳಿಗೆ?"

ದಡದಡಿಸುವ ಎದೆಯಿಂದ ಪೆದ್ದರಾಯನು ಹೇಳಿದ.

"ಮದುವೆಯೇ? ಇನ್ನೂ ಆದಂತೆ ಕಾಣೆ!"

ಅಣಕಿಸುವ ನಗೆನಗುತ್ತ ಈಶ್ವರನಾಯಕನು ನುಡಿದ.

"ಹಾಗಿದ್ದರೇನು? ಕೆಲಸವೇ ಆದಂತಾಯಿತು. ವಿಜಯನಗರದ ಸಮ್ರಾಟನ ಅಪೇಕ್ಷೆಯೆಂದ ಮೇಲೆ, ಕನ್ನಿಕೆಯಾಗಿದ್ದ ಕಮಲಾಂಬಿಕೆಯು ಒಂದು ನಿಮಿಷವೂ ಬಿಡದಂತೆ ತನ್ನ ರಾಗವನ್ನು ಕೇಳಿಸುವುದಕ್ಕೆ ಸಂತೋಷದಿಂದ ಸಮ್ಮತಿಸಬಹುದಲ್ಲವೇ?"

ಆಶೆಯದೋ ನಿರಾಶೆಯದೋ ತಿಳಿಯದಂತಹದು– ಪೆದ್ದರಾಯನು ಆಗ ಬಿಟ್ಟ ನಿಟ್ಟುಸಿರು. ಈಶ್ವರನಾಯಕನ ಕರುಳು ಅದೇತಕ್ಕೋ ಇರುವೆಗಳಿಂದ ಕಚ್ಚಿಸಿಕೊಳ್ಳಲು ತೊಡಗಿತು. 'ಕಮಲಾಂಬಿಕೆಯು ರಾಣಿಯಾಗಿ ದೊರೆತರೆ, ನರಸಿಂಹನಾಯಕನೇ ದಂಡನಾಯಕನಾಗಿ ಬರುವನು.' ಎಂಬ ವಿಚಾರವೇ ಆತನ ಕಸುಳುರಿಗೆ ಕಾರಣವಾಗಿರಬಹು. ಕುತೂಹಲಭಾವದವನಾಗಿ ಕೇಳಿದನು.

"ಏನು ಪೆದ್ದಣ್ಣಾ! ನನ್ನ ಮಾತಿಗೆ ನಿಮ್ಮಿಂದ ಉತ್ತರವೆ ದೊರೆಯಲಿಲ್ಲವಲ್ಲ! ನಾನು ಹೇಳಿದಂತೆ ಆಗಬಹುದಲ್ಲವೇ?"

ಜಡವಾದ ಧ್ವನಿಯಲ್ಲಿ ಪೆದ್ದರಾಯನು ಹೇಳಿದನು.

"ಚಂದ್ರಗಿರಿಯಲ್ಲಿ ಇದ್ದಾನಲ್ಲ·· ತುಳುವ ನರಸಿಂಹ! ಕಮಲಾಂಬಿಕೆಯನ್ನು ಆತನಿಗೆ ಕೊಡುವುದಾಗಿ ನಿರ್ಣಯವಾಗಿದೆಯಂತೆ!"

"ಸಮ್ರಾಟನೊಂದಿಗೆ ಸಂಬಂಧವನ್ನು ಬೆಳೆಯಿಸುವ ಸಂದರ್ಭವಿರುವಾಗ, ಗೊತ್ತಾದುದನ್ನು ಮುರಿಯಲಿಕ್ಕೇನೂ ತಡೆಯಾಗದಲ್ಲ!" ನೀರಸವಾದ ಕಿರುನಗೆಯೊಂದಿಗೆ ಈಶ್ವರನಾಯಕನು ಮಾತನಾಡಿದ. ಪೆದ್ದರಾಯನ ಮುಖದಲ್ಲಿ ಸಮಾಧಾನದ ಸುಳಿದಾಟ ಕಂಡುಬಂದಿತು. ಆತನು ಆಶೆ-ಕೃತಜ್ಞತೆಗಳು ತುಂಬಿದ ದೃಷ್ಟಿಯಿಂದ ಈಶ್ವರನಾಯಕನನ್ನು ನೋಡಲು ತೊಡಗಿದನು. ಈಶ್ವರನು ಒಮ್ಮೆಲೆ ಮೇಲಕ್ಕೆದ್ದು ನಿಂತು ಹೇಳಿದನು.

"ಎರಡುಗಳಿಗೆಯಷ್ಟು ಕೂಡ ಹೊತ್ತು ಉಳಿಯಲಿಲ್ಲ; ಗತಿಸಿದ ವಿರೂಪಾಕ್ಷರಾಯರು ಏರುತ್ತಿದ್ದ ಕುದುರೆಯನ್ನು ಏರಿನೋಡಬೇಕೆನ್ನುತ್ತಿದ್ದಿರಲ್ಲವೇ? ಈಗ ಹೊರಡೋಣವೇ?"

"ಇನ್ನೊಂದು ದಿನ ನೋಡೋಣವಂತೆ. ಅದೇಕೋ ಮೈಯೆಲ್ಲವೂ ಜಡವಾದಂತೆ ಆಗಿದೆ."

"ಹಾಗೆಯೆ ಆಗಲಿ! ನಾನಿನ್ನು ಹೊರಡಬಹುದೇ ಪೆದ್ದಣ್ಣಾ!"

ಅಪ್ಪಣೆ ದೊರೆತೊಡನೆಯೆ ಈಶ್ವರನಾಯಕನು ಹೊರಟುಬಿಟ್ಟ. ಕೂಡಲೆ ಪೆದ್ದರಾಯನು ಪರ್ಯಂಕದಿಂದ ಕೆಳಕ್ಕೆ ಇಳಿದು, ವಿಶ್ರಾಂತಿಭವನದಲ್ಲಿಯೆ—ನೂರಡಿಯಿಡುವವರಂತೆ — ಅತ್ತಿತ್ತ ಎಡೆಯಾಡಲು ತೊಡಗಿದ. ಆಗ ಆತನು ಗುಂಯ್‌ಗುಡುತ್ತಲಿದ್ದ ಸಂಗೀತದ ರಾಗ ಹಿಂದೋಳವಾಗಿದ್ದಿತು.

---

## ೯ನೆಯ ಪರಿಚ್ಛೇದ.

ಈಶ್ವರನಾಯಕನು ದೇವಣ್ಣನಾಯಕರಿಗೆ ದೂರದ ಸಂಬಂಧಿಯೆಂಬುದನ್ನು ಈ ಮೊದಲೆ ಹೇಳಲಾಗಿದೆ. ವಾವೆಯಲ್ಲಿ ಅವನು ರತ್ನಾಂಬಿಕೆಗೆ ಅಣ್ಣನಾಗಬೇಕು. ಎಂತಲೆ ಅವಳ ಮತವನ್ನು ಅರಿತುಕೊಂಡೇ ನಾಯಕನು ಪೆದ್ದರಾಯನಿಗೆ ಸಹಾಯಮಾಡಲು ಸಿದ್ಧನಾದುದು. ರತ್ನಾಂಬಿಕೆಯೊಂದಿಗೆ

ಈಶ್ವರನಾಯಕನ ಸಲುಗೆ ಹೆಚ್ಚು; ಅದಕ್ಕೊಂದು ವಿಶಿಷ್ಟಕಾರಣವಿದ್ದಿತು. ನಾಯಕನಿಗೆ ಜ್ಯೋತಿಷಶಾಸ್ತ್ರದಲ್ಲಿ ಕುರುಡುನಂಬುಗೆ. ರತ್ನಾಂಬಿಕೆಯ ಜಾತಕದಲ್ಲಿ ಅವಳು ಮಹಾರಾಣಿಯಾಗುವ ಯೋಗವಿದೆ – ಎಂದು ಜೋಯಿಸರು ಹೇಳುತ್ತಿದ್ದರು. ಅವಳು ಮಹಾರಾಣಿಯಾದರೆ ತನ್ನ ಮಹತ್ವಾಕಾಂಕ್ಷೆ ಪೂರ್ಣವಾದೀತೆಂದು ಈಶ್ವರನ ಕಲ್ಪನೆ. ಎಂತಲೇ ಅವನು ರತ್ನಾಂಬಿಕೆಯಲ್ಲಿ ಸ್ವಂತದ ತಂಗೆಯಲ್ಲಿಯ ವಿಶ್ವಾಸವನ್ನು ನಟಿಸುತ್ತ, ಆಗಾಗ ಅವಳ ಅಂತಃಪುರಕ್ಕೆ ಬರುವನು. ಮಾತುಕತೆಯಾಡುತ್ತ ಕುಳಿತುಕೊಳ್ಳು-ವನು. ಪೆದ್ದರಾಯ – ರತ್ನಾಂಬಿಕೆಯರ ಪರಸ್ಪರಪ್ರೀತಿ, ವಿರೂಪಾಕ್ಷರಾಯನ ಕೊಲೆ, ರಾಜಶೇಖರನ ರಾಜ್ಯಸಂನ್ಯಾಸ ಈ ಎಲ್ಲ ಯೋಗಗಳೂ ಕೂಡಿ, ರತ್ನಾಂಬಿಕೆಯ ಜಾತಕದ ಭವಿಷ್ಯದಲ್ಲಿಯ ಈಶ್ವರನಾಯಕನ ಶ್ರದ್ಧೆಯನ್ನು ಗಟ್ಟಿಗೊಳಿಸಿಬಿಟ್ಟಿದ್ದುವು.

ಬೆಳಗಾಗಿ ಎರಡುಗಳಿಗೆಯಾಗಿರಬಹುದು; ಚಳಿಯು ಇನ್ನೂ – ಸೂರ್ಯನ ಎಳಬಿಸಿಲನ್ನು ಗಣಿಸದೆ – ತನ್ನ ಆಧಿಪತ್ಯವನ್ನು ಸಾಗಿಸಿದ್ದಿತು. ರತ್ನಾಂಬಿಕೆಯು ಕಲಾಬತ್ತಿನ ಕುಸುರಿನ ದಂಡೆಯಿದ್ದ ಉಣ್ಣೆಯ ಶಾಲೊಂದನ್ನು ಹೊದ್ದುಕೊಂಡು, ಅಂತಃಪುರದ ಉಪ್ಪರಿಗೆಯ ಬಿಸಿಲು ಮಚ್ಚಿನ ಎಳಬಿಸಿಲಲ್ಲಿ ಅಡಿಯಾಡಲುತೊಡಗಿದ್ದಳು. ಆಕೆಯ ಅಡಿಯ ಗತಿಯು ಒಂದೊಂದು ಸಲ ಮಂದವಾಗುವುದು, ಇನ್ನೊಂದೊಂದು ಸಲ ತೀವ್ರವಾಗು-ವುದು. ಬಲಗೈಯು ಶಾಲಿನ ಮುಸುಕಿನ ಹೊರಕ್ಕೆ ಹೊರಟು, ಸೊಂಟದ ಮುಂಬದಿಯನ್ನು ಸುತ್ತುಹಾಕಿರುವುದು. ಮೇಲಕ್ಕೆತ್ತಿದ್ದ ಎಡಗೈಯ ಬೆರಳುಗಳು ಚೆಲುವಾಗಿರುವ ಗದ್ದವನ್ನೊಮ್ಮೆ, ಚೆಂದಳಿರಿನಂತಹ ಕೆಳದುಟಿ-ಯನ್ನೊಮ್ಮೆ ಕಾರಣವಿಲ್ಲದೆ ಒತ್ತಿ ಒತ್ತಿ ಹೊಸಗುತ್ತಿರುವವು. ಆಗ ಹೊನ್ನಮ್ಮ ಬಂದು ಹೇಳಿದಳು.

"ಈಶ್ವರನಾಯಕರು ಬಂದು ಓಲಗಸಾಲೆಯಲ್ಲಿ ಕುಳಿತಿದ್ದಾರೆ."

ರತ್ನಾಂಬಿಕೆಯು ತಟ್ಟನೆ ಮುಖಹೊರಳಿಸಿ ಕೇಳಿದಳು.

"ಏನು? ಈಶ್ವರ ಬಂದಿದ್ದಾನೆಯೆ? ಆಗಲಿ! ನೀನು ಓಲೆಯನ್ನು ತೆಗೆದುಕೊಂಡು ಬೇಗನೆ ಹೋಗಿ ಬಾ! ತಿಳಿಯಿತೇನು?"

ಮಾತಿನೊಡನೆಯೆ ರತ್ನಾಂಬಿಕೆ ಓಲಗಸಾಲೆಯೊಳಕ್ಕೆ ನಡೆದಳು.

ಹೊನ್ನಮ್ಮ ಅವಳ ಅಪ್ಪಣೆಯಂತೆ ಹೊರಕ್ಕೆ ಹೊರಟುಬಿಟ್ಟಳು. ರತ್ನಾಂಬಿಕೆಯು ಈಶ್ವರನಾಯಕನನ್ನು ಕಂಡೊಡನೆಯೆ ಆತುರದ ಧ್ವನಿಯಲ್ಲಿ ಕೇಳಿದಳು.

" ಏನು ಈಶ್ವರ ! ಈಗ..ಚಳಿಯಲ್ಲಿಯೆ ಬಂದುಬಿಟ್ಟಿದ್ದೀಯಲ್ಲ ! "

ನೀರಸವಾದ ನಗೆಯೊಂದಿಗೆ ಈಶ್ವರನು ಹೇಳಿದ.

" ಬರಲೇ ಬೇಕಾಗಿದ್ದಿತು; ಎಂತಲೇ ಬಂದೆ ! "

" ಏನು ? ಇನ್ನೇನಾದರೂ ವಿಶೇಷವೇನು ಮತ್ತೆ ? "

" ವಿಶೇಷಗಳಲ್ಲಿಯು ವಿಶೇಷ ! "

" ಅಂತಹದೇನಪ್ಪಾ ಮತ್ತೆ ! "

" ದೊರೆಗಳ ಬುದ್ಧಿ ಹರಿಯುವ ನೀರು ಒಂದೇ... ಎಂದು ಹೇಳುತ್ತಾರೆ. ಅದೇನು ಸುಳ್ಳಲ್ಲ ನೋಡು ! ಇನ್ನೂ ದೊರೆಯಾಗಿರದಿದ್ದರೂ ಬೇಗನೆ ಆಗಲಿರುವ ಪೆದ್ದಣ್ಣನ ಮನಸ್ಸೂ ಹರಿಯುವ ನೀರೇ ಆಗಿದೆ. "

" ಏನಾಯಿತೀಗ ? "

" ಆಗುವದೇನು ? ನಿನ್ನ ಮಹಾರಾಣಿಯ ಪದವಿಯನ್ನು ಇನ್ನಾರೋ ಕಸಿದುಕೊಳ್ಳಲಿಕ್ಕೆ ನಿಂತಿದ್ದಾರೆ ! "

ರತ್ನಾಂಬಿಕೆಯ ಮುಖವನ್ನು ಜುಗುಪ್ಸಾಭಾವವು ಮುದುರಿಸಿತು ಮಾತ್ರ. ಆಕೆ ಮಾತನ್ನೇನೂ ಆಡದೆ ಇದ್ದಳು.

" ನಿನಗೂ ಈ ಮಾತು ಗೊತ್ತಾಗಿದೆಯೇನು ರತ್ನಾ ! "

" ಗೊತ್ತಾಗಿಯಾದರೂ ಮಾಡುವುದೇನು ? ಅವರವರ ಮನಸ್ಸು !"

" ಬರೀ 'ಮಾಡುವುದೇನು ?' ಎಂದು ಕುಳಿತರೆ ಆಗುವುದೇ ? ನಿನ್ನ ಪದವಿಯನ್ನು ಇನ್ನೊಬ್ಬರು ಆಕ್ರಮಿಸಿದರೆ ನಾನು ಎಂದೆಂದೂ ಸಹಿಸಿಕೊಂಡು ಇರಲಾರೆ ! "

"ಸಹಿಸಿಕೊಂಡಿರದಿದ್ದರೆ ಈಗೇನು ಮಾಡಬೇಕೆನ್ನುತ್ತಿದ್ದಿಯೇ ನೀನು?"

" ಕಮಲಾಂಬಿಕೆಯು ಪೆದ್ದಣ್ಣನಿಗೆ ಸಿಕ್ಕದಂತೆ ಮಾಡುವುದು ! "

" ಅದಕ್ಕಾಗಿ ನೀನು ಪ್ರಯತ್ನವನ್ನೇನೂ ಮಾಡಬೇಕಾಗಿಲ್ಲ; ಕಮಲಾಂಬಿಕೆ ಈ ಮಾತನ್ನು ಕನಸಿನಲ್ಲಿ ಕೂಡ ಒಪ್ಪಲಾರಳು. ಆಕೆಯ ಒಪ್ಪಿಗೆಯಿಲ್ಲದೆ ನರಸಿಂಹನಾಯಕರು ಇದಕ್ಕೆ ಎಂದೂ ಸಿದ್ಧರಾಗಲಾರರು ! "

"ಅಧಿಕಾರದ ಆಶೆ ಕೆಟ್ಟುದು ರತ್ನಾ! ನಿನಗೆ ಇನ್ನೂ ಜಗತ್ತಿನ ಅನುಭವವಿಲ್ಲ!"

"ನರಸಿಂಹನಾಯಕರು ನಮ್ಮ ಅಪ್ಪಾಜಿಯವರಿಗೆ ಬೇಡವಾದವ-ರೇನೋ ಸರಿ! ಆದರೆ ಅವರಂತಹ ಗುಣಗಳು ಅಪ್ಪಾಜಿಯವರಲ್ಲಿಯೂ ಇದ್ದದ್ದಾಗಿದ್ದರೆ ಅವರನ್ನು ನಾನು ದೇವರೆಂದು ದಿನದಿನವೂ ಪೂಜಿಸುತ್ತಿದ್ದೆ." ಮಾತಿನ ಕೊನೆಯೊಂದಿಗೆ ರತ್ನಾಂಬಿಕೆ ನಿಡಿದಾಗಿ ಉಸಿರೊಂದನ್ನು ಹಾಕಿದಳು. ಬಿಸಿಲಿನ ಬಿಸಿಗೆ ಹೆದರದೆ ಇದ್ದ ಚಳಿಯು, ಆಕೆಯ ಉಸಿರಿನ ಬಿಸಿಗೆ ಹೆದರಿಹೋಯಿತು. ಈಶ್ವರನಾಯಕನು ಆಶೆಯ ಧ್ವನಿಯಲ್ಲಿ ಕೇಳಿದನು.

"ಅವರಿಗೆ ಅಧಿಕಾರದ ಆಶೆಯಿಲ್ಲವೆಂದು ನಿನಗೆ ಪೂರ್ಣವಾಗಿ ಎನಿಸುತ್ತದೆಯೇ ರತ್ನಾ?"

"ಇದನ್ನು ನಾನು ಆಣೆಮಾಡಿ ಹೇಳಬಲ್ಲೆ ಬೇಕಾದರೆ!"

"ಹಾಗಾದರೆ ಮಹಾರಾಣಿಯ ಪದವಿ ನಿನಗೇ ದೊರೆಯುವುದೆಂದು ನಂಬಲೇ?"

"ಯಾಕೆ? ಜ್ಯೋತಿಷ್ಯದಲ್ಲಿಯ ನಿನ್ನ ಶ್ರದ್ಧೆ ಹಾರಿಹೋಗಿದೆಯೇನು?"

"ಛೇ! ಅದು ಎಂದೆಂದಿಗೂ ಹಾರಿಹೋಗದು; ಅದರಲ್ಲಿ ನನ್ನದು ತುಂಬುನಂಬುಗೆ!"

"ಹಾಗಿದ್ದರೆ ನನ್ನ ಮಹಾರಾಣಿಯ ಪದವಿಗಾಗಿ ಸಂದೇಹವೇತಕ್ಕೆ ನಿನಗೆ?"

ಸ್ವಲ್ಪಕಾಲ ಈಶ್ವರನಾಯಕನು ತಲೆಯಲ್ಲಾಡಿಸುತ್ತ ಸುಮ್ಮನೆ ಕುಳಿತಿದ್ದು ಬಳಿಕ ಮಾತನಾಡಿದ.

"ಜ್ಯೋತಿಷ್ಯವು ಹೇಳುತ್ತಿರುವ ಭವಿಷ್ಯಸಾಧನೆಗೆ, ನಮ್ಮಿಂದ ತಕ್ಕ ಪ್ರಯತ್ನಗಳೂ ನಡೆಯುತ್ತಿರಬೇಕಂತೆ ರತ್ನಾ!"

ರತ್ನಾಂಬಿಕೆ ಏನನ್ನೂ ಮಾತನಾಡದೆ ನೋಟಗಳನ್ನು ಇನ್ನೆತ್ತಲೋ ಹೊರಳಿಸಿದ್ದಳು. ಈಶ್ವರನಾಯಕನು ಮತ್ತೆ ಹೇಳಿದ.

"ರತ್ನಾ! ನೀನು ಮಹಾರಾಣಿಯಾಗಲೇ ಬೇಕೆಂದು ನನ್ನ ಉತ್ಕಟ-ವಾದ ಅಪೇಕ್ಷೆ ನೋಡು."

ರತ್ನಾಂಬಿಕೆ ವಿಚಿತ್ರವಾದ ನಗುವೊಂದನ್ನು ನಕ್ಕಳು. ಮಾತನೇನೂ

ಆಡಲಿಲ್ಲ. ಈಶ್ವರನಾಯಕನು ಹೊರಡಲು ಸಿದ್ಧನಾಗಿ ಎದ್ದುನಿಂತು ಹೇಳಿದನು.

“ನಿರಾಶೆ ಬೇಡ ರತ್ನಾ! ಈ ಈಶ್ವರನಾಯಕನು ಇರುವ ವರೆಗೆ ನಿನ್ನ ಪದವಿಯನ್ನು ಯಾರೂ ಕಸಿದುಕೊಳ್ಳಲಾರರು. ಲಕ್ಷ್ಯದಲ್ಲಿಡು!”

ಇಷ್ಟು ಹೇಳಿದವನೆ ಈಶ್ವರನಾಯಕನು ದಿಮ್ಮನೆ ಹೊರಟುಬಿಟ್ಟನು. ರತ್ನಾಂಬಿಕೆ ಕುಳಿತುಕೊಂಡಿದ್ದ ಆಸನದಲ್ಲಿಯೇ ಕುಳಿತಿದ್ದಳು. ಕೆಲವು ಕಾಲದ ವರೆಗೆ ಅವಳು ಶೂನ್ಯಮನಸ್ಕಳಾಗಿದ್ದಳು. ಬಳಿಕ ಕುಳಿತಿದ್ದ ಭಂಗಿಯನ್ನು ಬದಲಿಸಿ ಕುಳಿತು, ಯೋಚನೆಗೆ ಆರಂಭಿಸಿದಳು:—

“ಈಶ್ವರನಾಯಕನದು ನನ್ನಲ್ಲಿ ಎಷ್ಟೊಂದು ವಿಶ್ವಾಸ! ಅಕ್ಕಮ್ಮ ಅಂದು ಅವನ ವಿಷಯದಲ್ಲಿ ನನ್ನೆದುರು ಹಾಗೇತಕ್ಕೆ ವಿಷೋದ್ಗಾರಗಳನ್ನು ತೆಗೆದಳೇನೋ! ಪಾಪ! ಈಶ್ವರನಾಯಕನ ಸ್ವಭಾವ ಅವಳಿಗೆ ಸಂಪೂರ್ಣವಾಗಿ ತಿಳಿದಿರಲಿಕ್ಕಿಲ್ಲ. ನನ್ನ ಜಾತಕದಲ್ಲಿಯ ವಿಷಯವನ್ನು ಕೇಳಿದ ದಿನ ಅವನು ಎಷ್ಟೊಂದು ಹಿಗ್ಗಿಹಾರಾಡಿದ! ಆಗಾಗ ನನ್ನೊಡನೆ ನಗೆಯಾಟವನ್ನು ಆಡುತ್ತಿರುತ್ತಾನೆ:— ‘ರತ್ನಾ! ನೀನು ಮಹಾರಾಣಿಯಾಗು! ಆಗ ನಾನು ದಂಡನಾಯಕನಾಗುವೆನು’ ಎಂದು. ಅಂತಹನ ಎದುರಲ್ಲಿಯೂ ನಾನೀಗ ಮನಸ್ಸು ಬಿಚ್ಚಿ ಮಾತನಾಡದೆ ಇರುತ್ತೇನಲ್ಲ! ಇನ್ನೊಂದು ವಿಷಯ! ಮನಸ್ಸುಬಿಚ್ಚಿ ಮಾತನಾಡುವುದಾದಲ್ಲಿ ಏನೆಂದು ಮಾತನಾಡಬೇಕು..? ನನ್ನ ಮನಸ್ಸಿನಲ್ಲಿ ಏನಿದೆಯೆಂಬುದು ನನಗೆ ಸ್ವಂತಕ್ಕಾದರೂ ಗಟ್ಟಿಮುಟ್ಟಾಗಿ ತಿಳಿದಿದೆಯೇ..? ಮನಸ್ಸಿನ ಸಂದೇಶವನ್ನು ಯಾವಾಗಲೂ ಹೊರಕ್ಕೆ ಹಾಕಬೇಕಾದುದು—ಮಾತು ಒಂದೇ ಒಂದು; ಆದರೆ ಮನಸ್ಸಿನ ಸಂದೇಶವಿಂದು ಬಹುಮುಖವಾಗಿ ಹೊರಟು, ಸಪ್ತಸ್ವರಗಳ ತಂತಿಗಳೆಲ್ಲವನ್ನೂ ಒಮ್ಮೆಲೆ ಮಿಾಟಿದಂತೆ ಸಂಕೀರ್ಣಧ್ವನಿಯಲ್ಲಿ ಹೊರಡುತ್ತಲಿದೆ. ಆ ಸಂಕೀರ್ಣಧ್ವನಿಯಲ್ಲಿಯ—ಸಂಕೀರ್ಣಭಾವದ ಸಂದೇಶವನ್ನು, ಅಪೂರ್ಣವಾದ—ಅಸಮರ್ಥವಾದ ಮಾತು ಹೇಗೆ ಹೊರಕ್ಕೆ ಹಾಕಬಲ್ಲುದು...? ಹಾಕಿದರೂ ಆ ಸಂಮಿಶ್ರಭಾವದ ಅರ್ಥವನ್ನು ಸರಿಯಾಗಿ ಮಾಡಿಕೊಳ್ಳುವವರಾದರೂ ಯಾರು....? ಜಾಣರಾದ ಮನುಷ್ಯರೂ ತಲೆತಿರುಗಿ ಹುಚ್ಚರಂತೆ ಆಗುತ್ತಾರೆ; ಇಂತಹ ಸಂಕೀರ್ಣಭಾವದ ಮನಸ್ಸೇ ಅವರಿಗೆ ಹುಚ್ಚು

ಹಿಡಿಸುತ್ತಿರಬೇಕು ! ''

'' ಪೆದ್ದರಾಯನನ್ನು ಕರೆಯಿಸಿ ಅವನನ್ನು ಕಾಣಬೇಕೆಂದು – ಆತನೊಡನೆ ಮಾತನಾಡಬೇಕೆಂದು, ಈಗಲೂ ನನಗೆ ಮತ್ತೆ ಮತ್ತೆ ಏತಕ್ಕಾಗಿ ಎನಿಸುತ್ತಿದ್ದೀತು..? ಈಗಾಗಲೆ ನನ್ನ ಮನಸ್ಸು ತನ್ನ ನಿರ್ಣಯವನ್ನು ಗಟ್ಟಿಗೊಳಿಸಿಬಿಟ್ಟಿದೆಯಲ್ಲವೇ ? ಪೆದ್ದರಾಯನ ಜೊತೆ ನನಗೆ ಏತಕ್ಕಾಗಿ ಬೇಕು ಇನ್ನು ಮೇಲೆ? ಆತನು ನನ್ನ ದಾರಿಯವನಲ್ಲವಾದರೂ ಕಮಲಾಂ-ಬಿಕೆಯನ್ನು ಅವನು ಪ್ರೀತಿಸುತ್ತಿದ್ದರೆ, ನನ್ನಲ್ಲಿ ಈರ್ಷಾಭಾವವು ಅದೇತ-ಕ್ಕಾಗಿ ಬಳೆಯುತ್ತಿರಬೇಕು ; ಪೆದ್ದರಾಯನು ಮದುವೆಯಾಗದೆ ಹಾಗೆಯೇ ಇರಬೇಕೆ ? ಹಾಗಾದರೆ ಪೆದ್ದರಾಯನೇ ದೊರೆಯಾಗಲಿರುವನೆಂದ ಮೇಲೆ ನಾನು ಮಹಾರಾಣಿಯಾಗುವುದು ಹೇಗೆ ..? ರಾಜಶೇಖರನೇ ಸಿಂಹಾಸನ-ವನ್ನೇರಲಿಕ್ಕೆ ಸಮ್ಮತಿಸಿದರೆ ....! ಅಯ್ಯೋ ! ಆತ ಸಮ್ಮತಿಸಿ ಬಿಟ್ಟರೆ ಎಷ್ಟೊಂದು ಸೊಗಸಾದೀತು....? ......''

ಹೊನ್ನಮ್ಮ ಓಲಗಸಾಲೆಯೊಳಕ್ಕೆ ಬಂದುದು – ಯೋಚನೆಯ ಭರದಲ್ಲಿದ್ದ ರತ್ನಾಂಬಿಕೆಗೆ – ಒಮ್ಮೆಲೆ ಗೊತ್ತಾಗಲಿಲ್ಲ. ಹೊನ್ನಮ್ಮ ಮೆಲ್ಲಗೆ ಕೂಗಿದಳು.

'' ಅಮ್ಮಾಜೀ ''

ರತ್ನಾಂಬಿಕೆ ಬೆಚ್ಚಿಬಿದ್ದು ಕೇಳಿದಳು.

'' ಏನು ಹೊನ್ನಮ್ಮಾ ! ಬರುವ ಒಪ್ಪಿಗೆ ದೊರೆಯಿತೇ ? ''

'' ಒಪ್ಪಿಗೆ ದೊರೆಯಿತಿಷ್ಟೇ ಅಲ್ಲ ! ಓಲೆಯನ್ನು ಓದಿದೊಡನೆಯೆ ಅವರ ಮುಖದಲ್ಲಿ ಅದೊಂದು ಬಗೆಯ ಸಮಾಧಾನವು ಮೊಗದೋರಿತು. ಕೂಡಲೆ ' ಈಗಲೆ ಬಂದುಬಿಡುತ್ತೇನೆಂದು ಹೇಳು ಹೊನ್ನಮ್ಮಾ ! ' ಎಂದು ನನಗೆ ಹೇಳಿ, ತಾವು ಹೊರಡುವ ಸಿದ್ಧತೆಗೆ ತೊಡಗಿದರು. ''

ರತ್ನಾಂಬಿಕೆ ಆತುರಭಾವದವಳಾಗಿ ಕೇಳಿದಳು.

'' ಏನು ? ಈಗಲೆ ಬರುತ್ತಾರೆಯೇ ? ಹೋಗು ನೀನು! ಬೇಗನೆ ಹೋಗಿ ಉಪಾಹಾರವನ್ನು ಅನುಗೊಳಿಸುವಂತೆ ಪಾಕಶಾಲೆಯಲ್ಲಿ ತಿಳುಹಿಸು. ''

ಹೊನ್ನಮ್ಮ ಹೊರಟುಹೋದೊಡನೆಯೆ ರತ್ನಾಂಬಿಕೆ ತನಗೆ ತಾನೆ ಹೇಳಿಕೊಂಡಳು.

"ಪೆದ್ದರಾಯರು ಕಮಲಾಂಬಿಕೆಯನ್ನು ಪ್ರೀತಿಸುತ್ತಿರಲಿಕ್ಕಿಲ್ಲವೇ? ಈಗ ನಾನು ಮೂರು ನಾಲ್ಕು ಸಲ ಹೇಳಿಕಳುಹಿಸಿದರೂ ಬಾರದಿದ್ದುದಕ್ಕೆ ಕಾರಣವೇನಿರಬಹುದು ಹಾಗಿದ್ದರೆ? ಅಂದು ನಾನು ಅವರನ್ನು ಹಾಗೆಲ್ಲ ಬೀಳುಗಳೆದುದೇ ಕಾರಣವಾಗಿರಬಹುದೇನು? ಅಹುದು! ಅದೇ ಇರಬಹುದು. ಈಗ ಬರುವರಲ್ಲ! ಬಂದಾಗ ಅದಕ್ಕಾಗಿ ಕ್ಷಮೆಯನ್ನು ಕೇಳಿಬಿಡುತ್ತೇನೆ.."

ಸ್ವಲ್ಪ ವೇಳೆಯ ವರೆಗೆ ಶೂನ್ಯಭಾವದವಳಾಗಿದ್ದು, ಮತ್ತೆ ಒಳಗೊಳಗೆಯೆ ಜಿನುಗಲು ತೊಡಗಿದಳು.

"ಹುಚ್ಚು ನನ್ನದು! ಪೆದ್ದರಾಯನಲ್ಲಿ ನಾನು ಕ್ಷಮೆಯನ್ನಾದರೂ ಏತಕ್ಕಾಗಿ ಕೇಳಿಕೊಳ್ಳಬೇಕು? ಆತನೊಡನೆ ನನ್ನ ಸಂಬಂಧ ಇನ್ನು ಬರುವುದಾದರೂ ಏತಕ್ಕೆ? ಅವನು ತನ್ನಷ್ಟಕ್ಕೆ ತಾನಿರುವನು; ನನ್ನಷ್ಟಕ್ಕೆ ನಾನು ಇದ್ದುಬಿಡುವೆನು. ಅವನು ಈಗ ಇಲ್ಲಿಗೆ ಬಂದರೆ ಮಾತನಾಡುವುದಕ್ಕೆ ವಿಷಯವಾದರೂ ಏನು? ಇನ್ನೊಂದು ಮಾತೆಂದರೆ: ಪೆದ್ದರಾಯನನ್ನು ನಾನೀಗ ಬೇಕಾಗಿ ಬರಮಾಡಿಕೊಂಡುದೆಂದರೆ ನನ್ನ ಅಶಕ್ತಮನಸ್ಸಿನ ಮೂರ್ಖತನದ ಹುಡುಗಾಟವೇ ಸರಿ! ಹೊನ್ನಮ್ಮ ಮೇಲಕ್ಕೆ ಬರಲಿ! ಈಗ ಬರುವುದು ಬೇಡವೆಂದು ಆತನಿಗೆ ಈಗಲೆ ಹೇಳಿಕಳುಹಿಸಿಬಿಡುತ್ತೇನೆ.."

ರತ್ನಾಂಬಿಕೆಯ ಮನಸ್ಸಿನ ಒಂದು ಭಾಗವು ಹೀಗೆ ನಿರ್ಣಯಮಾಡುವುದರಲ್ಲಿದ್ದಿತು; ಇನ್ನೊಂದು ಭಾಗವು ಅವಳ ದೇಹವನ್ನು ಮೇಲಕ್ಕೆ ಎಬ್ಬಿಸಿ, ಕೆಲಸ ಮಾಡುವುದಕ್ಕೆ ತೊಡಗಿಸಿದ್ದಿತು. ಆಗ ಅವಳು ಕಲಾಬತ್ತಿನ ಮಿರುಗುಚುಕ್ಕಿಗಳಿದ್ದ ನೀಲಿಯ ಬಣ್ಣದ ಸೀರೆಯನ್ನು ಉಟ್ಟುಕೊಂಡಳು. ಮುತ್ತಿನ ಬಣ್ಣದ ರೇಷ್ಮೆಯ ಕುಪ್ಪಸ ತೊಟ್ಟುಕೊಂಡಳು. ಓರಣವಾಗಿಯೆ ಇದ್ದ ತಲೆಗೂದಲುಗಳನ್ನು, ಕನ್ನಡಿಯಲ್ಲಿ ನೋಡಿ ಇನ್ನಿಷ್ಟು ಓರಣಿಸಿಕೊಂಡಳು. ಅಲ್ಲಿಯೆ ಇದ್ದ ದಂತದ ಪೆಟ್ಟಿಗೆಯನ್ನು ತೆರೆದು, ಆಣಿಮುತ್ತಿನ ಕಂಠಿಯೊಂದನ್ನು ಕೊರಳಿಗೆ ಇರಿಸಿಕೊಂಡಳು. ಕನ್ನಡಿಯಲ್ಲಿ ಮತ್ತೆ ಮತ್ತೆ ಮುಖ ನೋಡಿಕೊಳ್ಳುತ್ತ—ಒಂದೆರಡು ಸಲ—ಕೆಳಗಿವಿಯ ಕೆಂಪಿನ ಲೋಲಕಗಳನ್ನು ಸೆರಗಿನಿಂದ ಒರಸಿದಳು. ಇನ್ನೊಂದು ಸಲ ಹಣೆಯ ತಿಲಕವನ್ನು ಸರಿಮಾಡಿಕೊಂಡಳು. ಬಳಿಕ ಮುಂಗುರುಳುಗಳನ್ನು ಬಲಗೈಯ ಕಿರುಬೆರಳಿನಿಂದ ನೇವರಿಸಿಕೊಂಡಳು. ಕನ್ನಡಿಯಲ್ಲಿ ತನ್ನನ್ನು ತಾನೆ ನೋಡಿಕೊಳ್ಳು

ತ್ತಿರುವಾಗ ಒಮ್ಮಿಂದೊಮ್ಮೆಲೆ ಅವಳ ಬಾಯಿಂದ ಕರುಣಾತುರದ ಉದ್ಗಾರವೊಂದು ಹೊರಟಿತು.

"ಇದೇನು? ಕಾರಣವಿಲ್ಲದೆ ನಾನು ಏತಕ್ಕಾಗಿ ಈ ವೇಷವನ್ನು ಮಾಡಿಕೊಂಡೆ!"

ನಿರಾಶೆ-ವಿಷಾದಗಳು ಬೆರೆತ ನಗೆಯೊಂದನ್ನು ನಕ್ಕು, ಕೊರಳೊಳಗಿನ ಮುತ್ತಿನ ಕಂಠಿಯನ್ನು ತೆಗೆದುಬಿಡಬೇಕೆಂದು ರತ್ನಾಂಬಿಕೆ ಅದರ ಕುಣಿಕೆಗೆ ಕೈಹಚ್ಚಿದ್ದಳು. ಅಷ್ಟರಲ್ಲಿಯೆ ಪೆದ್ದರಾಯನು ಮೇಲಕ್ಕೇರಿ ಬಂದುದರ ಹಜ್ಜೆಸಪ್ಪಳಾಯಿತು. ಕುಣಿಕೆಯಲ್ಲಿಟ್ಟ ಕೈಯೊಡನೆಯೆ ಆಕೆಯು ಕೊರಳನ್ನು ಹೊರಳಿಸಿ ನೋಡಿದಳು. ಒಳಕ್ಕೆ ಬರುತ್ತಿದ್ದ ಪೆದ್ದರಾಯನ ಮೆಲುನಗೆಯನ್ನು ಅವಳ ಮೆಲುನಗೆಯು ಎದುರುಗೊಂಡಿತು. ಅಷ್ಟರಲ್ಲಿಯೆ ಕುಣಿಕೆ ಕಳಚಿ, ಮುತ್ತಿನ ಸರವು ರತ್ನಾಂಬಿಕೆಯ ಕೈಯೊಳಕ್ಕೆ ಬಂದಿದ್ದಿತು. ಒಳಕ್ಕೆ ಬರುತ್ತಿರುವಾಗಲೆ ಪೆದ್ದರಾಯನು ಮಾತನಾಡಿದ.

"ಕ್ಷಮಿಸು ರತ್ನಾ! ಮೂರು ನಾಲ್ಕು ಸಲದ ನಿನ್ನ ಔತಣವನ್ನು ಮೀರಿ ನಡೆದಿದ್ದೇನೆ. ರಾಜಕಾರ್ಯದ ಗೊಂದಲವು ಅಷ್ಟಿಷ್ಟೆಂದು ಹೇಳಲಿಕ್ಕೆ ಬರುವಂತಿಲ್ಲ!'

ಪೆದ್ದರಾಯನನ್ನು ಕಂಡೊಡನೆಯೆ ರತ್ನಾಂಬಿಕೆಯ ಹೃದಯವು ತೆರೆಬಾಯಿಯಾಗಿ ನಿಂತುಕೊಂಡಿತು. ಆಗ ಅದು ಎಂದುಕೊಳ್ಳುತ್ತಿದ್ದಿತು:

"ಮಲ್ಲಿಕಾರ್ಜುನ ದೊರೆಯ ಹೊಟ್ಟೆಯಿಂದ ಒಬ್ಬನೆ ಒಬ್ಬ ಪೆದ್ದರಾಯನು ಹುಟ್ಟಿದ್ದರೆ ಎಷ್ಟು ಚೆನ್ನಾಗುತ್ತಿದ್ದಿತು..!"

ಆಕೆ ಆದರದಿಂದ ಪೆದ್ದರಾಯನನ್ನು ಬರಮಾಡಿಕೊಂಡಳು. ಪೆದ್ದರಾಯನು ಆಸನದಲ್ಲಿ ಕುಳಿತುಕೊಂಡು, ನಿಂತಿದ್ದ ರತ್ನಾಂಬಿಕೆಯ ಕಡೆಗೆ ಒಂದೆರಡು ನಿಮಿಷಗಳ ವರೆಗೆ ಸುಮ್ಮಗೆ ನೋಡಿದನು. ಎಂದೂ ನೋಡದಿದ್ದ ನೋಟವನ್ನು ನೋಡುತಿರುವಂತೆ ಆತನ ನೋಟಗಳಲ್ಲಿ ವಿಸ್ಮಯ-ಕುತೂಹಲ ಭಾವಗಳು ತುಂಬಿನಿಂತಿದ್ದುವು. ನೋಡುವುದು ಸಾಕಾಯಿತೋ ಇಲ್ಲವೋ! ಆತನು ನಗೆಯಾಡುವ ದನಿಯಲ್ಲಿ ನುಡಿದನು.

"ರತ್ನಾ! ನೀನು ಹೆಣ್ಣು ಸಹ ಇದ್ದೀಯೆ ಎಂಬುದನ್ನು ಈವೊತ್ತು ನೋಡುತ್ತಿದ್ದೇನೆ ನೋಡು!"

“ಹಾಗಾದರೆ, ಇದುವರೆಗೆ ನನ್ನನ್ನು ಗಂಡೆಂದು ತಿಳಿದಿದ್ದಿರೇನು?”

“ಇದುವರೆಗೆ ನಾನು ತಿಳಿದಿದ್ದುದೆಂದರೆ ನೀನು ಬರಿಯ ರತ್ನಾಂಬಿಕೆ-ಯೆಂದು!”

“ಈಗ? ಈಗ ನಾನು ತುಂಬಿದ ರತ್ನಾಂಬಿಕೆಯಾಗಿದ್ದೇನೆಯೆ?”

“ತುಂಬಿದ ರತ್ನಾಂಬಿಕೆ....! ಅಹುದು! ಹೆಣ್ಣುತನವೂ ತುಂಬಿದ ರತ್ನಾಂಬಿಕೆ! ಏತಕ್ಕೆ ರತ್ನಾ! ಮುತ್ತಿನ ಸರವನ್ನು ಕೈಯಲ್ಲಿಯೆ ಹಿಡಿದು ಕೊಂಡು ನಿಂತಿದ್ದೀಯೆ?”

“ಕೊರಳಿಗೆ ಹಾಕಿಕೊಳ್ಳಲೇ?”

“ನೀನೇ ಬೇಡ”

“ಹಾಗಾದರೆ?” ಆಶೆಯ ದನಿಯಲ್ಲಿ ರತ್ನಾಂಬಿಕೆ ಕೇಳಿದಳು.

“ಹಾಗಾದರೆ ಏನು? ನಾನು ಹಾಕುತ್ತೇನೆ” ಎಂದು ಪದ್ದರಾಯನು ಆಸನದಿಂದೆದ್ದು ಮುಂದುವರಿದು ಬಂದ. ರತ್ನಾಂಬಿಕೆಗೆ ಏನೆನಿಸಿತೇನೋ! ನರನರಗಳೂ ಜುಮ್ಮೆಂದು ಎದೆಯು ದಡದಡಿಸಿತು. ಬೆದರಿದ ಧ್ವನಿಯಲ್ಲಿ ಅವಳು ಹೇಳಿದಳು.

“ಬೇಡ, ನೀವು ಹಾಕುವುದು ಬೇಡ! ನಾನೇ ಹಾಕಿಕೊಳ್ಳುತ್ತೇನೆ.”

ಪೆದ್ದರಾಯನಿಗೆ ಆಕೆಯ ಮಾತಿನ ಕಡೆಗೆ, ಮುಖಭಾವದ ಕಡೆಗೆ ಲಕ್ಷ್ಯವಿದ್ದಂತೆ ಕಾಣಲಿಲ್ಲ. ಮುಂದೆ ಬಂದು, ರತ್ನಾಂಬಿಕೆಯ ಕೈಯಲ್ಲಿದ್ದ ಸರವನ್ನು ತನ್ನ ಕೈಗೆ ತೆಗೆದುಕೊಂಡುಬಿಟ್ಟ. ಬೇಡವೆಂದಿದ್ದ ರತ್ನಾಂ ಬಿಕೆಯು ಆ ಸರವನ್ನು ಸ್ವಲ್ಪವೆ ಗಟ್ಟಿಯಾಗಿ ಹಿಡಿದಿದ್ದರೂ – ಇಷ್ಟೊಂದು ಸಹಜವಾಗಿ – ಅದು ಪೆದ್ದರಾಯನ ಕೈಗೆ ಸಿಕ್ಕುತ್ತಿರಲಿಲ್ಲ! ಕೈಗೆ ಸರವು ದೊರೆತೊಡನೆಯೆ ಅವನು ರತ್ನಾಂಬಿಕೆಯ ಕೊರಳಿಗೆ ಅದನ್ನು ಇರಿಸಿ, ಕುಣಿಕೆಯನ್ನು ತೊಡಕಿಸಿಬಿಟ್ಟನು. ರತ್ನಾಂಬಿಕೆಯ ಹೃದಯವು ಆಗ ಎಂತಹ ಭಾವವನ್ನು ಅನುಭವಿಸುತ್ತಿದ್ದಿತೆಂಬುದು ಅವಳದವಳಿಗೇ ಗೊತ್ತಾ-ಗುತ್ತಿರಲಿಲ್ಲ. ಕಣ್ಣೆದುರು ಮಬ್ಬಿನ ತೆರೆಯೊಂದು ಬಂದು ಮುಸುಕಿದಂತಾ ಯಿತು. ಎದೆಯಲ್ಲಿ ಮಂಜಿನ ಗಡ್ಡೆಯನ್ನು ಇಟ್ಟು ಒಡೆದಂತಾಯಿತು. ಒಂದು ಸಲ ಆಕೆಯು – ತನ್ನೆದುರು ಮುಸುಕಿದ್ದ ಮಬ್ಬಿನ ತೆರೆಯ ಮರೆಗೆ ನಿಂತಿರುವವನನ್ನು ರಾಜಶೇಖರನೆಂದು ಭಾವಿಸಿ, ಸಂತೃಪ್ತಭಾವವನ್ನು

ಪ್ರಕಟಿಸಿದಳು. ಕೂಡಲೆ ಅಲ್ಲಿರುವವನು ಪೆದ್ದರಾಯನೆಂಬುದು ಸ್ಮರಣೆಗೆ ಬಂದು, ಬೇಸರದ ಭಾವವನ್ನು ವ್ಯಕ್ತಮಾಡಿದಳು. ಮುತ್ತಿನ ಸರವನ್ನು ಹಾಕಿದವನೇ ಪೆದ್ದರಾಯನು ತನ್ನ ಬಲಗೈಯ ಬೆರಳುಗಳಿಂದ ರತ್ನಾಂಬಿಕೆಯ ಗದ್ದವನ್ನು ಹಿಡಿದು ಮೇಲಕ್ಕೆತ್ತಿ ಕೇಳಿದನು.

"ಇಷ್ಟೊಂದು ನಾಚಿಕೆಯೇ ರತ್ನಾ!"

ಇದ್ದಕ್ಕಿದ್ದಹಾಗೆಯೆ ಹೊನ್ನಮ್ಮ ಅಲ್ಲಿಗೆ ಬಂದಳು. ಪೆದ್ದರಾಯ ಹಿಂದಡಿಯಿಡುತ್ತ ಮೆಲ್ಲಗೆ ತನ್ನ ಆಸನದ ಕಡೆಗೆ ನಡೆದ. ರತ್ನಾಂಬಿಕೆಯು ತನ್ನ ಬೆದರುಗಣ್ಣುಗಳಿಂದ ಹೊನ್ನಮ್ಮನ ಕಡೆಗೆ ನೋಡುತ್ತ ಏನನೋ ಕೇಳಬೇಕೆಂದು ಕೇಳಿದಳು.

"ಹೋಗಿದ್ದೆಯಾ ಹೊನ್ನಮ್ಮಾ?"

"ಹುಂ! ಹೋಗಿ ಹೇಳಿಬಂದೆ!"

"ಏನು ಹೇಳಿಬಂದೆ?"

"ಉಪಾಹಾರದ ಸಿದ್ಧತೆಯನ್ನು."

ಅಷ್ಟರಲ್ಲಿಯೆ ರತ್ನಾಂಬಿಕೆಗೆ ವಸ್ತುಸ್ಥಿತಿಯ ಅರಿವು ಉಂಟಾಗಿದ್ದಿತೇನೋ! ಹೊನ್ನಮ್ಮನ ಹುಡುಗಾಟದ ಪಿಸಿಪಿಸಿ ನಗೆಯನ್ನು ಕಂಡು, ನಾಚಿ ಮುಖವನ್ನು ತಗ್ಗಿಸಿ ನಿಂತಳು. ಹೊನ್ನಮ್ಮ ಬಂದಿದ್ದ ಹಾಗೆಯೆಹಿಂದಿರುಗಿದಳು. ಓಲಗಸಾಲೆಯಿಂದ ಹೊರಕ್ಕೆ ಕಾಲಿಕ್ಕುವುದಷ್ಟೆ ಅವಕಾಶ; ಕೂಡಲೆ ಬಿಗಿಹಿಡಿದಿದ್ದ ಆಕೆಯ ಹುಚ್ಚುನಗೆ ಛೊಕ್ಕೆಂದು ಹೊರಬಿದ್ದಿತು. ನಗೆಯ ಭರದಲ್ಲಿಯೆ ಅವಳು – ತನ್ನೊಳಗೆ ತಾನೆ ಎಂದು ಕೊಂಡಳು; 'ಹುಚ್ಚುಜಾತಿ ಹೆಂಗಸರದೋ? ಗಂಡಸರದೋ?' ಎಂದು.

ಆಸನದಲ್ಲಿ ಕುಳಿತುಕೊಂಡು ಪೆದ್ದರಾಯನು ಕೂಗಿ ಕರೆದ.

"ರತ್ನಾ!"

ರತ್ನಾಂಬಿಕೆ ಮುಖವನ್ನು ಮೇಲಕ್ಕೆತ್ತಿ ಕೇಳಿದಳು.

"ರಾಜಕಾರ್ಯಕ್ಕೆ ಸೇರಿದ ಜನರು ಬರೀ ಸುಳ್ಳನ್ನೆ ಬಳಸಬೇಕೆಂದು ನಿಯಮವೇನೂ ಇಲ್ಲವಷ್ಟೇ?"

"ಈ ಪ್ರಶ್ನೆಯೇತಕ್ಕೆ ಬೇಕಾಯಿತೀಗ?"

"ನಿಜಹೇಳಿಬಿಡಿ! ನಿಮಗೆ ಬೇಕಾಗಿದ್ದವಳು ನಾನೋ?

ಕಮಲಾಂಬಿಕೆಯೋ?"

ಉತ್ತರಕೊಡಲಿಕ್ಕೆ ತಿಳಿಯದಾಗಿನ ಪೆಚ್ಚು ಮೊಗದಿಂದ ಪೆದ್ದರಾಯನು ಕೇಳಿದ.

"ಹೀಗೆ ಕೇಳಿದರೆ ಏನು ರತ್ನಾ?"

"ಏನೂ ಇಲ್ಲ! ನಿಮಗೆ ಇತ್ತೀಚೆಗೆ ನರಸಿಂಹನಾಯಕರ ಮನೆಯು ಪಂಪಾಪತಿಯ ದೇವಾಲಯವಾಗಿಬಿಟ್ಟಿದೆಯೆಂದು ಕೇಳಿದ್ದೇನೆ. ನೀವು ಕಮಲಾಂಬಿಕೆಗೆ ಕಳುಹಿಸಿದ್ದ ಬೇರೆ ಬೇರೆ ಉಡುಗೊರೆಗಳನ್ನೆಲ್ಲವನ್ನೂ ನಾನು ಇದೇ ಕಣ್ಣುಗಳಿಂದ ನೋಡಿದ್ದೇನೆ. ಈಶ್ವರನು ಹೇಳಿದ್ದ ಮಾತುಗಳನ್ನು ಕೇಳಿದಮೇಲೆಯಂತೂ ನಿಮ್ಮ ಮೇಲೆ ಎಷ್ಟೊಂದು ನಂಬುಗೆಯನ್ನಿಡಬೇಕೋ ತಿಳಿಯದವಳಾಗಿದ್ದೇನೆ. ಆದರೂ ನೋಡಿ ರಾಯಾಜೀ! ನಿಮ್ಮಲ್ಲಿ ಯಾವುದೋ ಮೋಡಿಯ ಮಂತ್ರವಿದೆಯೆಂದು ನನಗೆ ಎನಿಸುತ್ತಿದೆ. ಎಂತಲೆ ನೀವು ಎದುರಿಗಿರುವಾಗ ನನ್ನನ್ನು ನಾನೆ ಮರೆತುಬಿಡುವಂತೆ ಮಾಡುತ್ತೀರಿ!"

ಈಶ್ವರನಾಯಕನ ಹೆಸರು ಹೊರಟೊಡನೆಯೆ ಪೆದ್ದರಾಯನ ಮುಖಕ್ಕೆ ಹುಚ್ಚರ ಕಳೆ ಬಂದುಬಿಟ್ಟಿತು. ಅವನು ಏನನ್ನೋ ಹೇಳಬೇಕೆಂದು ಮುಖವನ್ನು ಮೇಲಕ್ಕೆ ಎತ್ತುವುದರಲ್ಲಿ ಇದ್ದನು. ಅಷ್ಟರಲ್ಲಿಯೆ ಕಮಲಾಂಬಿಕೆಯ ಬಳಿಯೂಳಿಗದ ಕನಕಮ್ಮ ಅಲ್ಲಿಗೆ ಬಂದು, ರತ್ನಾಂಬಿಕೆಗೆ ಪೊಡಮಟ್ಟು ನಿಂತಳು. ರತ್ನಾಂಬಿಕೆ ಒಮ್ಮೆಲೆ ಕೇಳಿದಳು.

"ಏನು ಕನಕಮ್ಮಾ?"

"ಇಂದಿನ ಇಳಿಹೊತ್ತಿನಲ್ಲಿ ಕಮಲಮ್ಮಾಜಿಯವರು ಶಾಂತಿಕುಟೀರದ ಕಡೆಗೆ ಹೋಗಲಿದ್ದಾರೆ; ಜೊತೆಗೆ ನೀವೂ ಬರುತ್ತೀರಾ··? ಎಂಬುದನ್ನು ಕೇಳಿಕೊಂಡು ಬರುವಂತೆ, ನನ್ನನ್ನು ಕಳುಹಿಸಿದ್ದಾರೆ!"

ರತ್ನಾಂಬಿಕೆಗೆ ಅವಳಿಗೇನು ಹೇಳಬೇಕೆಂಬುದು ತಿಳಿಯದಂತಾಯಿತು. ಏನನ್ನೊ ಯೋಚಿಸುತ್ತ ಹಾಗೆಯೆ ಕುಳಿತುಬಿಟ್ಟಳು. ಪೆದ್ದರಾಯನು ಕುತೂಹಲದ ನೋಟದಿಂದ ರತ್ನಾಂಬಿಕೆಯನ್ನೊಮ್ಮೆ, ಕನಕಮ್ಮನನ್ನೊಮ್ಮೆ ನೋಡುತ್ತ ಕುಳಿತುಕೊಂಡಿದ್ದನು. ಕನಕಮ್ಮ ಉತ್ತರನಿರೀಕ್ಷೆಯ ಆತುರದೃಷ್ಟಿಗಳಿಂದ ರತ್ನಾಂಬಿಕೆಯನ್ನು ನೋಡುತ್ತ ನಿಂತುಬಿಟ್ಟಿದ್ದಳು.

ಐದಾರು ನಿಮಿಷ ಹೀಗೆಯೆ ಹೋದುವು. ಬಳಿಕ ರತ್ನಾಂಬಿಕೆಯು ಕನಕಮ್ಮನ ಕಡೆಗೆ ಮುಖ ತಿರುಗಿಸಿ, ನಿಶ್ಚಯದ ಧ್ವನಿಯಲ್ಲಿ ಹೇಳಿದಳು.

"ಇಂದು ನನಗೆ ಬರಲಿಕ್ಕೆ ಆಗುವುದಿಲ್ಲವೆಂದು ನಿಮ್ಮ ಅಮ್ಮಾಜಿ-ಯವರಿಗೆ ಹೇಳು!"

ಕನಕಮ್ಮ ಹೊರಟು ನಡೆದಳು. ಸ್ವಲ್ಪ ಕಾಲ ಓಲಗ ಸಾಲೆಯು ಮೌನಿಯಾಗಿ ಇದ್ದಿತು. ಅದೇತಕ್ಕೋ·· ಅಲ್ಲಿಯ ವಾತಾವರಣದಲ್ಲಿ ಒಂದು ಬಗೆಯ ಔದಾಸೀನ್ಯವು ಬಂದು ಸೇರಿದಂತಾಯಿತು. ಬಹಳ ಹೊತ್ತಿನ ಮೇಲೆ ಪೆದ್ದರಾಯನು ಕುಗ್ಗಿದ ಧ್ವನಿಯಲ್ಲಿ ಕೇಳಿದನು.

"ಯಾರು ರತ್ನಾ..ಶಾಂತಿಕುಟೀರಕ್ಕೆ ಹೋಗುವವರು?"

"ಕಮಲಾಂಬಿಕೆ!"

"ಕಮಲಾಂಬಿಕೆ ಶಾಂತಿಕುಟೀರಕ್ಕೆ ಹೋಗುವಳೇ?"

ರತ್ನಾಂಬಿಕೆಯು ಒಂದು ಬಗೆಯ ಕೆಣಕುನೋಟದಿಂದ ನೋಡುತ್ತ ಹೇಳಿದಳು.

"ಏಕೆ? ಹೋಗಬಾರದೇನು? ರಾಜಶೇಖರನೊಡನೆ ಕಮಲಾಂಬಿಕೆ-ಯದು ತುಂಬ ಸಲುಗೆ! ಎಂತಲೇ ಅವಳು ಆಗಾಗ ಅವರಲ್ಲಿಗೆ ಹೋಗಿ ಬರುತ್ತಿರುತ್ತಾಳೆ!"

ತಟ್ಟನೆ ಪೆದ್ದರಾಯನ ಮುಖದಲ್ಲಿ ನೆತ್ತರು ಉಕ್ಕೇರಿದಂತಾಯಿತು. ತೆರೆದಿದ್ದ ಕಣ್ಣುಗಳು ಕೆಂಡವನ್ನು ಕಾರುತ್ತಿರುವಂತೆ ತೋರಿದುವು. ಬಿರುಸು-ದನಿಯಲ್ಲಿ ಅವನು ಕೇಳಿದನು.

"ಅಣ್ಣಾಜಿಯವರೊಡನೆ ಕಮಲಾಂಬಿಕೆಯ ಸಲುಗೆ?"

"ಇದ್ದರೆ ತಪ್ಪೇನು ರಾಯಾಜೀ!"

ಪೆದ್ದರಾಯನ ಕಣ್ಣೆದುರು ಏನೂ ಕಾಣದಾಯಿತು. ತಟ್ಟನೆ ಮೇಲಕ್ಕೆ ಎದ್ದು ರತ್ನಾಂಬಿಕೆಗೆ ಹೇಳಿದ.

"ರತ್ನಾ! ನಾನೀಗ ಹೊರಡಲೆ ಬೇಕು! ತುಂಬ ಆವಶ್ಯಕ ಕಾರ್ಯಗಳಿವೆ."

ಒಪ್ಪಿಗೆಯ ದಾರಿಯನ್ನು ಕೂಡ ಕಾಯದೆ ಪೆದ್ದರಾಯನು ದಡದಡನೆಂದು ಅಡಿಯಿಡುತ್ತ ಅಲ್ಲಿಂದ ಹೊರಟುಬಿಟ್ಟ. ರತ್ನಾಂಬಿಕೆಯು

ಉಪೇಕ್ಷಾ ಭಾವದಿಂದ ಅವನು ಹೋಗುವುದನ್ನು ನೋಡುತ್ತ ಕುಳಿತಲ್ಲಿಯೆ ಕುಳಿತಿದ್ದಳು. ಉಪಾಹಾರದ ಸಾಹಿತ್ಯವನ್ನು ಮೇಲಕ್ಕೆ ತೆಗೆದುಕೊಂಡು ಬಂದ ಹೊನ್ನಮ್ಮನು, ಪೆದ್ದರಾಯನು ಹಾಗೆ ಹೊರಟುಹೋದುದನ್ನೂ ರತ್ನಾಂಬಿಕೆ ಹೀಗೆ ಕುಳಿತುದನ್ನೂ ನೋಡುತ್ತ ಕಕ್ಕಬಿಕ್ಕಾಗಿ ನಿಂತುಬಿಟ್ಟಳು.

---

## ೧೦ನೆಯ ಪರಿಚ್ಛೇದ

ಸಾಳುವ ನರಸಿಂಹನಾಯಕನಿಗೆ ಇತ್ತೀಚೆಗೆ ಬಿಡುವೆ ಇರಲಿಲ್ಲ. ಹಗಲಿರುಳೂ ಮೈತುಂಬ ಕೆಲಸ; ಮೆದುಳ ತುಂಬ ಯೋಚನೆ. ಸಿಂಹಾಸನಾರೋಹಣ ಸಮಾರಂಭವು ಮುಗಿಯುವ ವರೆಗೆ, ತನ್ನ ಮೇಲೆ ದೊಡ್ಡದೊಂದು ಹೊಣೆಗಾರಿಕೆಯಿದೆಯೆಂದು ಅವನ ಸಂಪೂರ್ಣವಾದ ತಿಳಿವಳಿಕೆಯಿದ್ದಿತು. ವಿರೂಪಾಕ್ಷರಾಯನ ಆಡಳಿತದಲ್ಲಿ – ಸಾಮ್ರಾಜ್ಯದ ಬೇರೆ ಬೇರೆ ಕಡೆಗಳಲ್ಲಿ ಹೊತ್ತಿಕೊಂಡಿದ್ದ ಅಶಾಂತಿಯ ಹೊಗೆಯು, ಇನ್ನೂ ಹಾಗೆಯೆ ಹೊತ್ತಿ ಹೊತ್ತಿ ಬಳೆಯುವುದರಲ್ಲಿದ್ದಿತು. ನರಸಿಂಹನಾಯಕನು ಅಲ್ಲಲ್ಲಿಯ ಅಧಿಕಾರಿಗಳ ಕಡೆಗೆ ಆಗಾಗ ಓಲೆಗಳನ್ನು ಬರೆಯುತ್ತಲಿದ್ದು, ಆ ಅಶಾಂತಿಯ ಹೊಗೆಯುರಿಗಳನ್ನು ನಂದಿಸುವ ಉಪಾಯಗಳನ್ನು ಸೂಚಿಸಬೇಕಾಗಿದ್ದಿತು. ರಾಜಧಾನಿಯಲ್ಲಿಯೆ ಇದ್ದ ವಿದ್ರೋಹಿಗಳನ್ನು ಸೂಕ್ಷ್ಮದೃಷ್ಟಿಯಿಂದ ಗೊತ್ತುಹಿಡಿದು – ಅವರ ಸುಳಿದಾಟ ಸಾಗದಂತೆ – ಅಲ್ಲಲ್ಲಿ ತಡೆಗಳನ್ನು ಒಡ್ಡಬೇಕಾಗುತ್ತಿದ್ದಿತು. ಬರಲಿರುವ ಪೆದ್ದರಾಯನ ದೊರೆತನದ ವಿಷಯದಲ್ಲಿ ಪ್ರಜೆಗಳೆಲ್ಲರ ಸಹಾನುಭೂತಿಯನ್ನು ಸಂಪಾದಿಸುವುದಕ್ಕಾಗಿ, ಪೆದ್ದರಾಯನಲ್ಲಿ ಇದ್ದ – ಇಲ್ಲದ – ಗುಣಗಳು ಪ್ರಜೆಗಳ ಕಿವಿಗೆ – ಎಡೆಬಿಡದೆ – ಬೀಳುತ್ತಿರುವಂತೆ ಮಾಡಬೇಕಾಗಿದ್ದಿತು. ಇದೆಲ್ಲವಾಗಿ ಪಟ್ಟಾಭಿಷೇಕದ ಸಮಾರಂಭಸಿದ್ಧತೆಯನ್ನೆಲ್ಲ ತಾನೆ ಕಣ್ಣಿಟ್ಟು ನೋಡಿ, ಉಚಿತವಾದ ಸಲಹೆಗಳನ್ನು ಕೊಟ್ಟು ಮಾಡಿಸಬೇಕಾಗಿದ್ದಿತು. ವಿಜಯನಗರದ ಸಾಮ್ರಾಜ್ಯವೆ ನರಸಿಂಹನಾಯಕನ ಸಂಸಾರ. 'ಈ ಸಂಸಾರರಥವು ಸರಳವಾದ ದಾರಿಯಿಂದ ಸಾಗಿದುದನ್ನು ನಾನೆಂದು ಕಾಣುವೆನೋ!' ಎಂಬುದು ಆತನ ನಿರಂತರವಾದ ಮನದೆಣಿಕೆ. ವಿಜಯನಗರದ ಸಾಮ್ರಾಜ್ಯವ್ಯವಸ್ಥೆಯ ವಿಚಾರದಲ್ಲಿ

ನರಸಿಂಹನಾಯಕನ ನೆತ್ತರು ಸುಡುತ್ತಿರುವಷ್ಟು, ಸಿಂಹಾಸನವನ್ನೇರಿ, ರಾಜಮುಕುಟವನ್ನು ತಲೆಯಲ್ಲಿ ತಾಳಲಿದ್ದ – ಪೆದ್ದರಾಯನ ನೆತ್ತರಾದರೂ ಸುಡುತ್ತಿದ್ದಿತೋ ಇಲ್ಲವೋ!

ಲೋಕದ ಕತ್ತಲೆಯನ್ನು ಕಳೆಯಬೇಕೆಂದು ಚಿಂತೆಯನ್ನು ಮಾಡು-ವವನು ಸೂರ್ಯನೊಬ್ಬನೇ! ಜೀವಕೋಟಿಯನ್ನೆಲ್ಲ ಉಸಿರಿತ್ತು ಸಲುಹ ಬೇಕೆಂದು ಹಗಲಿರುಳೂ ಹೆಣುಗುತ್ತಿರುವವನು ವಾಯುದೇವನೊಬ್ಬನೇ! ಜಗತ್ತಿನಲ್ಲಿ ಅನ್ನದ ಕೊರತೆಯಾಗಬಾರದೆಂದು ಕಳವಳಿಸುವವನು ವರುಣನು ಒಬ್ಬನೇ! ಈ ಒಬ್ಬೊಬ್ಬರಿಂದಲೆ ಅವೆಲ್ಲ ಕಾರ್ಯಗಳು – ಅನಾದಿಕಾಲ-ದಿಂದಲೂ – ಸುಸೂತ್ರವಾಗಿ ನಡೆದುಕೊಂಡು ಬಂದಿವೆ; ಎಂತಲೇ ಅನಂತ ಕಾಲದವರೆಗೂ ನಡೆಯಲಿರುವುವೆಂಬ ಭರವಸೆ ನಮಗಿದೆ. ಹಾಗೆಯೆ ವಿಜಯ ನಗರದ ಸಾಮ್ರಾಜ್ಯದ ಉನ್ನತಿಯ ಕಾರ್ಯವನ್ನು – ಯಾರಲ್ಲಿಯೂ ಕಾಣದ ಉತ್ಕಟತೆಯಿಂದ – ನರಸಿಂಹನಾಯಕನು ಈ ಮೊದಲಿನಿಂದಲೂ ಮಾಡುತ್ತ ಬಂದಿದ್ದಾನೆ; ಮುಂದೆಯೂ ಮಾಡುವನೆಂದು ಜನತೆಯ ಭರವಸೆಗೆ ಪಾತ್ರ-ನಾಗಿದ್ದಾನೆ. ಇಷ್ಟಿದ್ದರೂ ನರಸಿಂಹನಾಯಕನ ಪ್ರಜಾಮಾನ್ಯತೆಯನ್ನೂ ಉನ್ನತಿಯನ್ನೂ ಕಂಡು ಕರುಬುವ ವಿದ್ರೋಹಿಗಳು ಅಲ್ಲಿ ಇಲ್ಲಿ ಒಬ್ಬಿಬ್ಬರು ಇದ್ದೇ ಇದ್ದರು. ಈಶ್ವರನಾಯಕನೂ ಇಂತಹ ವಿದ್ರೋಹಿಗಳಲ್ಲಿ ಒಬ್ಬ; ಆದರೆ ವಿದ್ರೋಹಿಯಾಗಿ ಮಾಡುವುದೇನು? ಹೊಟ್ಟೆಯೊಳಗಿನ ಸಿಟ್ಟು ಆತನ ರಟ್ಟೆಯೊಳಗಿರಲಿಲ್ಲ. ಚಿಕ್ಕದೊಂದು ಮೋಡವು ಬಂದು ಸೂರ್ಯನನ್ನು ಮುಸುಕಿಬಿಡುವೆನೆಂದರೆ ಸಾಧ್ಯವಿದೆಯೆ? ಹರಿಯುವ ಹಾವೊಂದು ಬಂದು ಗಾಳಿಯನ್ನೆಲ್ಲ ತಿಂದುಹಾಕುವೆನೆಂದರೆ ಶಕ್ಯವಿದೆಯೇ? ಹಾಗೆಯೇ ನರಸಿಂಹ ನಾಯಕನ ವಿಷಯದಲ್ಲಿರುವ ಈಶ್ವರನಾಯಕನ ವಿದ್ರೋಹದ ಬಗೆ. ಅವನು ಒಳಗಿದ್ದುದನ್ನು ಎಂದೆಂದೂ ಹೊರಕ್ಕೆ ತೋರಿಸುತ್ತಿರಲಿಲ್ಲ; ಯಾವಾಗಲೂ ನರಸಿಂಹನಾಯಕನೆದುರು ತಲೆತಗ್ಗಿಸಿಕೊಂಡು ನಡೆಯುವನು.

ಹಗಲು ಇನ್ನು ಮೂರುಗಳಿಗೆಯಷ್ಟು ಮಾತ್ರ ಉಳಿದಿದ್ದೀತು. ಆಗ ಈಶ್ವರನಾಯಕನು ನರಸಿಂಹನಾಯಕನ ಮನೆಗೆ ಬಂದ. ಅಪ್ಪಣೆಪಡೆದು ಕೊಂಡು ಒಳಕ್ಕೆ ಹೋದಾಗ ನರಸಿಂಹನಾಯಕನು ಓಲಗಸಾಲೆಯಲ್ಲಿಯ ತನ್ನ ನಿತ್ಯದ ಆಸನದಲ್ಲಿ ಕುಳಿತುಕೊಂಡು, ಕೈಯಲ್ಲಿದ್ದ ಓಲೆಯನ್ನು ಆಗಾಗ

ಕಣ್ಣೆದುರಿಗೆ ಹಿಡಿದು, ಯೋಚನೆಯ ನೋಟಗಳಿಂದ ನೋಡುತ್ತಿದ್ದ. ಈಶ್ವರನಾಯಕನು ಬಂದೊಡನೆಯೆ ಉಚಿತವಾದ ಆದರದಿಂದ ಬರಮಾಡಿ-ಕೊಂಡು, ಸಮೀಪದ ಪೀಠದಲ್ಲಿ ಕುಳಿತುಕೊಳ್ಳುವಂತೆ ಹೇಳಿದ. ಈಶ್ವರ-ನಾಯಕನು ಇಲ್ಲದ ವಿನಯ-ದಾಕ್ಷಿಣ್ಯಗಳನ್ನು ತೋರಿಸುತ್ತ, ಹುಚ್ಚು-ಪೆಚ್ಚು ನಗೆ ನಗುತ್ತ ಕುಳಿತುಕೊಂಡನು. ನರಸಿಂಹನಾಯಕನು ಸಹಜ-ಭಾವದಲ್ಲಿ ಕೇಳಿದನು.

"ಇನ್ನೇನು ಈಶ್ವರನಾಯಕರೇ! ಸೈನ್ಯದಲ್ಲಿಯ ಜನರೆಲ್ಲರು ಸಂತುಷ್ಟ-ರಾಗಿ ಇದ್ದಾರೆ ತಾನೇ? ನೀವಂತೂ ಪೆದ್ದರಾಯರಿಗೆ ಮೊದಲಿನಿಂದಲೂ ಬೇಕಾಗಿ ಇದ್ದವರು. ಅವರ ಎಲ್ಲ ಒಳ್ಳೆಯ ಗುಣಗಳನ್ನೂ ಚೆನ್ನಾಗಿ ಬಲ್ಲವರು! ಸೈನ್ಯದ ಜನರಲ್ಲೆಲ್ಲ ಅವರ ಬಗೆಗೆ ಆದರ, ಅಭಿಮಾನಗಳು ಹೆಚ್ಚುತ್ತಿರುವಂತೆ ನಿಮ್ಮ ಪ್ರಚಾರಕಾರ್ಯವು ನಡೆದಿದೆಯಲ್ಲವೇ?"

"ಅಖಂಡವಾಗಿ ನಡೆಯಿಸಿದ್ದೇನೆ. ತಮ್ಮ ಸೂಚನೆಯಂತೆಯೆ ಬೇರೆ ಬೇರೆ ಮೇಲಾಳು-ಬಲ್ಲಾಳುಗಳಿಗೂ ಹೀಗೆ ಪ್ರಚಾರ ಮಾಡುತ್ತಿರುವಂತೆ ಹೇಳಿಬಿಟ್ಟಿದ್ದೇನೆ."

"ನೋಡಿ! ನಾವೆಲ್ಲರೂ ಸೇರಿ ಈಗ ಮಾಡಿದಕಾರ್ಯ ಮುಂದೆ ನಮಗೆ ಫಲಕಾರಿಯಾಗದೆ ಹೋಗದು. ಸಾಮ್ರಾಜ್ಯವು ನಿಷ್ಕಂಟಕವಾಗಿ ಸಾಗಲು ತೊಡಗಿತೆಂದರೆ ನಾವೆಲ್ಲರೂ– ತಾಯತೊಡೆಯಲ್ಲಿ ಮಲಗಿದ್ದ ಹಸುಮಗುವಿನಂತೆ–ಈ ಕನ್ನಡತಾಯ ತೊಡೆಮಡಿಲಲ್ಲಿ ಹಾಯಾಗಿ–ಲೀಲೆಯಿಂದ ಮಲಗಿಕೊಂಡಿರಬಹುದು!"

"ತಮ್ಮ ಮಾತು ತುಂಬ ಸರಿಯಾದ ಮಾತು ನಾಯಕರೇ!"

"ಈಗ ನೋಡಿದ್ದೀರೋ ಇಲ್ಲವೋ! ಕಲಬುರ್ಗೆಯ ಸುಲ್ತಾನನಂತೂ ವಿಜಯನಗರದ ಸಾಮ್ರಾಜ್ಯವನ್ನು ಹೇಗೆ ನುಂಗಿ ನೀರುಕುಡಿಯಬೇಕೆಂದು ಹೊಂಚು ಹಾಕುತ್ತಿದ್ದಾನೆ. ಮೊದಲಿನ ರಾಯರ ಆಡಳಿತದಲ್ಲಿ ಈಗಾಗಲೆ ನಮ್ಮ ಕೆಲವು ಪ್ರದೇಶಗಳನ್ನು ಆತ ಹಿಡಿದುಕೊಂಡು ಕುಳಿತಿದ್ದಾನೆ. ರಾಯಚೂರು-ಮುದಗಲ್ಲುಗಳ ದುರ್ಗಾಧಿಪತಿಗಳು ನಮ್ಮವರಾಗಿದ್ದರೂ ಈಗ ಕಲಬುರ್ಗೆಯ ಸುಲ್ತಾನನೊಡನೆ ಸಂಚುಮಾಡಿ, ಅವನ ಕಡೆಗೆ ಸೇರ-ಬೇಕೆಂದಿದ್ದಾರಂತೆ! ಇದಲ್ಲದೆ ಸಾಮ್ರಾಜ್ಯದ ಮೂಲೆಮೂಲೆಯಲ್ಲಿಯೂ

ಎದ್ದಿದ್ದ ಅಶಾಂತಿಯ ಕೂಗು – ಮೊರೆಗಳನ್ನು ನೀವೂ ಕೇಳುತ್ತಿದ್ದೀರಿ! ಈಗ ಇದನ್ನೆಲ್ಲ ಲೆಕ್ಕಿಸದೆ ನಾವು ಕೈಮುಚ್ಚಿಕೊಂಡು ಕುಳಿತರೆ ನಡೆಯುವಂತಿಲ್ಲ. ದೇಶದಲ್ಲಿ ಅನವಸ್ಥೆ ಹೆಚ್ಚಾಗಿ ಬಿಡಬಹುದು! ಅದಕ್ಕಾಗಿಯೆ ನಾನು, ನೀವು ಎಲ್ಲರೂ ಆದಷ್ಟು ಬೇಗನೆ ಒಂದೊಂದು ದಿಕ್ಕಿಗೆ ಹೋಗಿ, ಮಲೆತು ನಿಂತಿದ್ದವರನ್ನೆಲ್ಲ ಬೇರೆ ಬೇರೆ ಉಪಾಯಗಳಿಂದ ಮುರಿದು ಹಾಕಿ, ಎಲ್ಲೆಲ್ಲಿಯೂ ಶಾಂತಿಸ್ಥಾಪನೆ ಮಾಡಿ ಬರಬೇಕಾಗುವುದು. ಕಲಬುರ್ಗೆಯ ಸುಲ್ತಾನನ ಮಾತು ಒಂದು ಕಡೆಗೆ ಇರಲಿ! ಮೊದಲು..ಈಗ ಇದ್ದ ಪ್ರದೇಶವನ್ನಾದರೂ ತಣ್ಣಗಿರುವಂತೆ ಮಾಡಬೇಕಾಗಿದೆ!''

"ಅಹುದು! ಹಾಗೆ ಮಾಡಲೇಬೇಕು! ಅವಶ್ಯವಾಗಿ ಮಾಡಬೇಕು।''

"ಈಗ ನಾನು ಏನು ಮಾಡಬೇಕೆಂಬುದನ್ನು ತಿಳಿಯದವನಾಗಿ ಕುಳಿತಿದ್ದೇನೆ. ನಮ್ಮ ಚಂದ್ರಗಿರಿಯ ಪ್ರತಿನಿಧಿಗಳ ಕಡೆಯಿಂದ ಇಂದೆಯೆ ಈ ಓಲೆ ಬಂದಿದೆ. ಪ್ರಸಂಗವು ಅಲ್ಲಿ ಮಹಾ ಭೀಕರವಾಗಿರುವುದಂತೆ. ವಿಜಯನಗರದ ಆಧಿಪತ್ಯಕ್ಕೆ ಸೇರಿಕೊಂಡಿದ್ದ ತೆಲುಗುನಾಡಿನ ಭಾಗದ ನಾಲ್ಕೈದು ಜನ ಪಾಳೆಯಗಾರರು ದೊಂಬಿಯೆಬ್ಬಿಸಲು ಸಿದ್ಧರಾಗಿ ನಿಂತಿದ್ದಾರಂತೆ. ಚಂದ್ರಗಿರಿಯ ಭಾಂಡಾರಕ್ಕೆ ಸಲ್ಲಬೇಕಾಗಿ ಹೊರಟಿದ್ದ ನೂರಾರು ಹಳ್ಳಿಗಳ ತೆರಿಗೆಯ ಹಣ ದಾರಿದಾರಿಯಲ್ಲಿಯೆ ಸುಲಿಗೆಯಾಗಿ ಹೋಗಿದೆಯಂತೆ. ತಮ್ಮ ಪ್ರದೇಶ ಕನ್ನಡ ಸಾಮ್ರಾಜ್ಯಕ್ಕೆ ಕೂಡಿಕೊಂಡುದು, ಅಲ್ಲಿಯ ಸ್ವಾಭಿಮಾನಿಗಳಾದ ಕೆಲವು ಜನ ತೆಲುಗುಜನರಿಗೆ ಮೊದಲಿನಿಂದಲೂ ಅತೃಪ್ತಿಗೆ ಕಾರಣವಾಗಿದ್ದಿತು. ಆದರೆ ಈ ಮೊದಲು ಆಳಿದ ಸಮ್ರಾಟರ ಆಡಳಿತದಲ್ಲಿ, ಅವರ ಅತೃಪ್ತಿಯು ಆಟವಾಡಲಿಕ್ಕೆ ಅವಕಾಶ ದೊರೆತಿರಲಿಲ್ಲ. ಎಂತಲೇ ಅನಿವಾರ್ಯವಾಗಿ – ಇದುವರೆಗೆ – ನಮ್ಮ ಸಿಂಹಾಸನಕ್ಕೆ ತಲೆ ಬಗ್ಗಿಸಿಕೊಂಡು ಬಂದರು. ಈಗ ರಾಜ್ಯದ ಆಡಳಿತವೆಲ್ಲ ಸಿಥಿಲವಾಗಿದ್ದ ವೇಳೆಯನ್ನು ಕಂಡು, ಅವರೆಲ್ಲರೂ – ಪ್ರತ್ಯಕ್ಷವಾಗಿ – ಬಂಡಾಯ ಹೂಡಬೇಕೆಂದು ನಿಂತಿದ್ದಾರೆ. ಈ ಸಂದರ್ಭದಲ್ಲಿ ನಾನು ಅಲ್ಲಿಗೆ ಹೋಗಲೇಬೇಕು; ಆದರೆ ಸಿಂಹಾಸನಾರೋಹಣ ಸಮಾರಂಭಕ್ಕೆ ಇನ್ನು ಆರು ದಿನಗಳ ಅವಕಾಶ ಮಾತ್ರ ಇದೆ. ನಾನೊಂದು ವಿಚಿತ್ರವಾದ ಧರ್ಮಸಂಕಟದಲ್ಲಿ ಈಗ ಬಿದ್ದುಬಿಟ್ಟಿದ್ದೇನೆ. ಸಮಾರಂಭದ ಕಾರ್ಯ ಮುಗಿಯುವವರೆಗೆ – ಆದುದಾಗಲೆಂದು – ಇಲ್ಲಿಯೆ

ಇದ್ದುಬಿಡಬೇಕೋ? 'ನೀವೆಲ್ಲರೂ ಇದ್ದೀರಿ! ಎಲ್ಲವನ್ನೂ ನೋಡಿಕೊಳ್ಳು ತ್ತೀರಿ!' ಎಂಬ ನಂಬುಗೆಯಿಂದ ಕೂಡಲೆ ಹೊರಟುಬಿಡಬೇಕೋ? ಯಾವು ದಕ್ಕೂ ನಿರ್ಣಯವನ್ನು ಕಾಣದೆ ಕುಳಿತುಕೊಂಡಿದ್ದೇನೆ."

"ನಿಜವಾಗಿಯೂ ಪ್ರಸಂಗವು ಭಯಂಕರವಾದದ್ದೇ ಸರಿ! ಆದರೆ..! ನೀವು ಇಲ್ಲದೆ ಹೇಗೆ ನಾಯಕರೇ! ಸಮಾರಂಭವನ್ನು ಮುಗಿಸಿಕೊಂಡೇ ಹೊರಡಬೇಕು."

ಬಗೆಹರಿಯದ ಭಾವದವನಾಗಿ ನರಸಿಂಹನಾಯಕನು ಸುಮ್ಮನೆ ಕುಳಿತುಬಿಟ್ಟನು. ಒಂದೆರಡು ನಿಮಿಷಗಳ ವರೆಗೆ ಈಶ್ವರನಾಯಕನೂ ಹಾಗೆಯೆ ಕುಳಿತಿದ್ದು, ಬಳಿಕ ಮರುಕದ ಮಾತಿನಲ್ಲಿ ಹೇಳಿದನು.

"ನಾನೇನೋ ಸಂತೋಷದ ಸಂಗತಿಯೊಂದನ್ನು ಕುರಿತು ತಮ್ಮೊಡನೆ ಮಾತನಾಡಿ ಹೋಗಬೇಕೆಂದು, ತುಂಬ ಉತ್ಸಾಹದಿಂದ ಬಂದಿದ್ದೆ. ತಾವು ಇಂತಹ ಕಳವಳದ ತೊಡಕಿನಲ್ಲಿ ಸಿಕ್ಕಿಕೊಂಡಿದ್ದೀರಿ!"

ಕುತೂಹಲಿಯಾಗಿ ಕೇಳಿದನು ನರಸಿಂಹನಾಯಕನು.

"ಅದೇನು? ಮತ್ತೆಂತಹ ಸಂತೋಷದ ಸಂಗತಿ?"

"ಹೇಳಬೇಕೆಂದೇನೋ ಮನಸ್ಸಿನ ಆಶೆ; ಆದರೆ ತಮ್ಮ ಮನಸ್ಸು ಚೆನ್ನಾಗಿಲ್ಲ ನೋಡಿ!"

"ನೀವು ಮಾತನಾಡಬೇಕಾಗಿದ್ದುದು ಸಂತೋಷದ ಸಂಗತಿಯನ್ನು ಕುರಿತು.. ಎಂದು ಹೇಳುತ್ತಿದ್ದೀರಿ! ನಿಜವಾಗಿಯೂ ಅದು ಸಂತೋಷದ ಸಂಗತಿಯೇ ಆಗಿದ್ದಲ್ಲಿ, ನನ್ನ ಚೆನ್ನಾಗಿ ಇಲ್ಲದ ಮನಃಸ್ಥಿತಿ ಅದರಿಂದ ಸ್ವಲ್ಪ ವಾದರೂ ಸಮಾಧಾನಗೊಂಡೀತಲ್ಲವೇ?"

"ಅದೇನೋ ಸರಿಯೇ!"

"ಹಾಗಿದ್ದರೆ ಹೇಳಬಹುದಲ್ಲ!"

"ಅದೆಂದರೆ.... ಹೀಗೆ .... ಅಂ.. ಪೆದ್ದರಾಯರು ತಮ್ಮನ್ನು .. ಮಾವಂದಿರನ್ನಾಗಿ ಮಾಡಿಕೊಳ್ಳಬೇಕೆಂದು ಅಪೇಕ್ಷಿಸುತ್ತಾರೆ!"

"ಹೀಗೆ ಎಂದರೆ ಏನು ಈಶ್ವರನಾಯಕರೇ?"

"ಎಲ್ಲವನ್ನೂ ಒಡೆದು – ಬಿಚ್ಚಿ – ಹೇಳಬೇಕಾಗಿದೆಯೋ ತಮಗೆ?"

" ಒಡೆದು – ಬಿಚ್ಚಿ – ಹೇಳಬೇಕಾದ ಕಾರಣವೇನೂ ಇಲ್ಲವೆನ್ನಿ!

ಪೆದ್ದರಾಯರ ಮನಸ್ಸಿನ ಸ್ಥಿತಿಯ ವಾಸನೆ ನನಗೂ ಸ್ವಲ್ಪ ತಗುಲಿದೆ. ದಿನದಿನವೂ ಕಮಲಾಂಬಿಕೆಯ ಕಡೆಗೆ ಬರುತ್ತಿದ್ದ ಮೆಚ್ಚು – ಉಡುಗೊರೆಗಳ ಹೊರೆಯ ವರ್ತಮಾನವು – ನನ್ನ ಕಾರ್ಯಪರಂಪರೆಯ ಗಲಾಟೆಯಲ್ಲಿ – ಮೊನ್ನೆಯ ವರೆಗೆ ನನಗೆ ಗೊತ್ತಾಗಿರಲಿಲ್ಲ. ಸಿಂಗಮ್ಮ ಬಂದು ಈ ಮಾತನ್ನು ಹೇಳಿದಾಗಲೇ ನನಗೆ ಏನೋ ಸಂದೇಹಬಂದಂತಾಯಿತು! ಆದರೂ ಇನ್ನೇನೋ ಕಾರಣಗಳನ್ನು ಹೇಳಿ, ಸಿಂಗಮ್ಮನನ್ನು ಸಮಾಧಾನಗೊಳಿಸಿ ಕಳುಹಿಸಿಬಿಟ್ಟೆ. ಇಂದಿನ ಈ ನಿಮ್ಮ ಮಾತಿನಿಂದ ನನ್ನ ಸಂದೇಹಕ್ಕೆ ಸತ್ಯ-ಸ್ವರೂಪವೆ ಬಂದಂತಾಯಿತು. ಆದರೆ. . . . ನಿರುಪಾಯ ಈಶ್ವರನಾಯಕರೆ, ಪೆದ್ದರಾಯರ ಈ ಅಪೇಕ್ಷೆಯನ್ನು ಪೂರ್ಣಮಾಡುವುದು ನನ್ನ ಕಡೆಯಿಂದ ಸಾಧ್ಯವಾಗುವಂತೆ ಇಲ್ಲ.''

"ಪೆದ್ದರಾಯರ ಅಪೇಕ್ಷೆ, ಆತುರಗಳು ಉತ್ಕಟವಾಗಿವೆ. ಅಂದೊಂದು ದಿನ ತಮ್ಮ ಮಗಳ ಸಂಗೀತವನ್ನು ಕಿವಿತುಂಬ ಕೇಳಿದರಂತೆ. ಆಕೆಯ ಚೆಲುವನ್ನು ಕಣ್ಣುತುಂಬ ನೋಡಿದರಂತೆ. ಅಂದಿನಿಂದಲೂ ಅವರು ಒಂದು ಬಗೆಯಿಂದ ಹುಚ್ಚರಂತಾಗಿ ಬಿಟ್ಟಿದ್ದಾರೆ. ಅವರ ಈ ಅಪೇಕ್ಷೆಯನ್ನು ತಾವು ಪೂರಯಿಸಲೇ ಬೇಕೆಂದು, ಎಷ್ಟೆಷ್ಟೊ ಬಿನ್ನವಿಸಿ ಹೇಳಿಕೊಂಡಿದ್ದಾರೆ."

"ಅದು ಸಾಧ್ಯವಾಗುವಂತೆಯೇ ಇಲ್ಲ. ನನ್ನ ಕೈಯನ್ನು ಮೀರಿದ ಮಾತು!''

"ಹೀಗೆ ತಾವು ಹೇಳಿದರೆ ಪೆದ್ದರಾಯರು ಕೇಳಲಿಕ್ಕಿಲ್ಲವೆಂದು ನನಗೆ ಎನಿಸುತ್ತಿದೆ.''

"ಪೆದ್ದರಾಯರು ತಮ್ಮ ವಿರೂಪಾಕ್ಷ ಚಿಕ್ಕಪ್ಪನ ಅಡಿಯನ್ನು ತುಳಿ-ಯಲಾರರೆಂದು ನನ್ನ ನಂಬುಗೆ.''

"ಸಿಂಹಾಸನಾರೋಹಣದ ಸಮಾರಂಭದ ಕಾಲದಲ್ಲಿ ಸಾಮ್ರಾಜ್ಯದ ಎಲ್ಲ ಜನರೂ ಸೇರಿರುತ್ತಾರೆ; ಅದೇ ಸಂದರ್ಭದಲ್ಲಿಯೇ ಎಂದರೆ ಆ ಸಮಾ-ರಂಭದ ಮರುದಿನವೇ ಈ ಮದುವೆಯ ಸಮಾರಂಭವನ್ನೂ ನೆರವೇರಿಸಿ ಬಿಡಬೇಕೆಂದು ಪೆದ್ದರಾಯರ ಮನದ ಆಶೆ."

"ಸರಿ! ಅವರ ಮನದ ಆಶೆ ಹಾಗೆ ಇರಬಹುದು! ಆದರೆ ಎಲ್ಲರ ಎಲ್ಲ ಮನದಾಶೆಗಳೂ ಯಾವಾಗಲೂ ಪೂರ್ಣವಾಗಲಾರವೆಂಬುದನ್ನು

ಪೆದ್ದರಾಯರೇನೂ ಅರಿಯುದವರಲ್ಲ! ಈಶ್ವರನಾಯಕರೆ, ದಯೆಯಿಟ್ಟು ನೀವು ಪೆದ್ದರಾಯರಿಗೆ ಹೇಳಿ! 'ಕಮಲಾಂಬಿಕೆಯನ್ನು ತುಳುವ ನರಸಿಂಹನಿಗೆ ಕೊಡಬೇಕೆಂದು ನಿರ್ಣಯವಾಗಿ ಬಿಟ್ಟಿದೆ, ಎಂದು."

"ಈ ವಿಷಯವನ್ನು ಅವರು ಅರಿಯದೆ ಇಲ್ಲವೆಂದು ತೋರುತ್ತದೆ."

"ಅರಿತು ಅರಿತೂ ಆಶೆಪಡುತ್ತಿರುವರೇ?"

"ಅಹುದು! ಅಹುದು!"

ನರಸಿಂಹನಾಯಕನು ತನ್ನ ನೆತ್ತರು ಏರಿಬಂದಿದ್ದ ಕೆಂಗಣ್ಣುಗಳನ್ನು, ತಲೆಯಲ್ಲಿ ಸುತ್ತುತ್ತಿದ್ದ ಯೋಚನೆಯೊಂದಿಗೆ ತೊಡಕಿಸಿ, ನಾಲ್ಕಾರು ನಿಮಿಷಗಳ ವರೆಗೆ ಮಾತನಾಡದೆ ಕುಳಿತಿದ್ದನು. ಬಳಿಕ ಈಶ್ವರನಾಯಕನನ್ನು ನೋಡುತ್ತ ಸ್ವಾಭಾವಿಕಸ್ವರದಲ್ಲಿ ಹೇಳಿದನು.

"ಇರಲಿ ಈಶ್ವರನಾಯಕರೆ, ಈ ವಿಷಯವನ್ನು ಆಮೇಲೆ — ಪೆದ್ದರಾಯನೊಂದಿಗೆ — ನಾನು ಮಾತನಾಡಿ ನಿರ್ಣಯಿಸಿಕೊಳ್ಳುತ್ತೇನೆ. ನೀವು ಇದಕ್ಕಾಗಿಯೆ ಬಂದಿದ್ದಿರೇನು ಈಗ?"

"ಅಹುದು? ನೀನೆ ಹೋಗಿ ನರಸಿಂಹನಾಯಕರೆದುರು, ಈ ವಿಷಯವನ್ನು ಪ್ರಸ್ತಾಪಿಸಬೇಕೆಂದು, ಪೆದ್ದರಾಯರು ಇಂದೆಯೆ ನನ್ನನ್ನು ಕರೆಯಿಸಿ ಹೇಳಿದರು. ಎಂತಲೆ ಬಂದೆ. ನೀವೇ ಅವರನ್ನು ಕಂಡು ಮಾತನಾಡು-ತ್ತೀರಲ್ಲಾ? ಆಯಿತು ನನ್ನ ಕೆಲಸ! ನಾನಿನ್ನು ಹೊರಡಲೇ ಹಾಗಿದ್ದರೆ?"

ಈಶ್ವರನಾಯಕನು ಎದ್ದು ತಲೆಬಾಗಿ ಬೀಳ್ಕೊಂಡು, ಹೊರಟು ನಡೆದನು. ನರಸಿಂಹನಾಯಕನು — ಕಿಡಿಯನ್ನುಗುಳುವ ಕಣ್ಣುಗಳಿಂದ — ಅವನು ಕಣ್ಮರೆಯಾಗುವ ವರೆಗೂ ದುರುದುರನೆ ನೋಡುತ್ತಿದ್ದನು. ಬಳಿಕ ಬಾಡಿಬತ್ತಿದ ಮೊಗದಿಂದ, ಬಿಸಿಯಾದ ನಿಟ್ಟುಸಿರೊಂದನ್ನು ಸುಯಿದು ತನ್ನೊಳಗೆ ತಾನೆ ಎಂದುಕೊಂಡನು.

"ತಾಯೆ! ಭುವನೇಶ್ವರೀ! ಪೆದ್ದರಾಯನಿಗೆ ಒಳ್ಳೆಯ ಮನಸ್ಸನ್ನು ಕೊಡು! ನಿನ್ನ ಕನ್ನಡ ಸಾಮ್ರಾಜ್ಯಕ್ಕೆ ಒಳ್ಳೆಯಕಾಲವು ಸಮೀಪಿಸುವಂತೆ ಮಾಡು!"

ಮತ್ತೆ ಸ್ವಲ್ಪಕಾಲ ಹಾಗೆಯೆ ಕುಳಿತಿದ್ದು, ಬಳಿಕ ಚೆನ್ನಯ್ಯನನ್ನು ಕರೆದು ಹೇಳಿದನು.

“ ಚೆನ್ನಯ್ಯಾ! ಶಾಂತಿಕುಟೀರದ ನಾರಾಯಣಪಂಡಿತರಿಗೆ ಹೇಳು! ಇಲ್ಲಿಗೆ ಒರುವಂತೆ ನಾನು ಬಿನ್ನವಿಸಿಕೊಂಡಿರುತ್ತೇನೆಂದು. ”

ಅಪ್ಪಣೆಯೆಂದು ಚೆನ್ನಯ್ಯ ಹೊರಟು ನಡೆದ. ನಾಯಕನು ಚಂದ್ರಗಿರಿಯಿಂದ ಬಂದಿದ್ದ ಓಲೆಯನ್ನು ಕುರುಡುನೋಟದಿಂದ ನೋಡುತ್ತ ಕುಳಿತುಕೊಂಡ.

---

## ೧೧ನೆಯ ಪರಿಚ್ಛೇದ

ಕೃಷ್ಣಪಕ್ಷದ ದಶಮಿಯ ರಾತ್ರಿಯು ಒಂದುವರೆ ಪ್ರಹರ ಕಳೆದು ಹೋಗಿದೆ. ಹಗಲೆಲ್ಲವೂ ದುಡಿದು ದುಡಿದು ಬಳಲಿಹೋಗಿದ್ದ – ಶಾಂತಿ ಕುಟೀರದ ನೆರೆಹೊರೆಯ – ತೋಟಗಾರರಲ್ಲಿ, ಬಹುಜನರು ತಮ್ಮ ತಮ್ಮ ಗುಡಿಸಿಲುಗಳಲ್ಲಿ ಮಲಗಿ ನಿದ್ದೆಹೋಗಿರುವರು. ಮಿಕ್ಕವರಲ್ಲಿ ಕೆಲವು ಜನರು ತಮ್ಮ ಹೆಂಡಿರುಮಕ್ಕಳೊಂದಿಗೆ ಸೊಗಸಿನ ಮಾತುಕತೆಯಾಡುತ್ತ ಹಾಸಿಗೆಯಲ್ಲಿ ಬಿದ್ದುಕೊಂಡಿರುವರು. ಇನ್ನು ಕೆಲವು ಜನ ರಸಿಕರಾದ ಹರಯದ ಹುಡುಗರು, ಅಲ್ಲಲ್ಲಿ ಗುಂಪುಗೊಂಡು ಕುಳಿತು, ಉರಿಯನ್ನು ಕಾಸಿಕೊಳ್ಳುತ್ತ, ಹೆಣ್ಣುಗಂಡಿನ ಶೃಂಗಾರಲಾವಣಿಗಳನ್ನು ಹಾಡುವುದರಲ್ಲಿ ಇರುವರು. ತೋಟಗಳಲ್ಲಿಯ ಜೀರುಂಡೆಗಳು, ‘ನಿಮ್ಮ ಹಾಡಿಗಿಂತ ನಮ್ಮ ಹಾಡಿನಲ್ಲಿ ಕೊರತೆಯೇನಿದೆ ನೋಡಿ!’ ಎಂಬ ಬಿಂಕದಿಂದ, ‘ಜಿರ್‌ರ್’ ಎಂಬ ತಮ್ಮ ಸತತಸ್ವರವನ್ನು ಕುಳಿತಿದ್ದವರ ಕಿವಿಗಳಲ್ಲಿ ಚುಚ್ಚುತ್ತಿದ್ದುವು. ಹುಚ್ಚುಪಚ್ಚಾಗಿ ಹಾಡಿ, ಸಿಕ್ಕಹಾಗೆ ನಕ್ಕುಕೆಲೆಯುತ್ತಿದ್ದ ಒಕ್ಕಲುಹುಡುಗರನ್ನು ‘ಸುಮ್ಮಗೆ ಬಂದು ಬಿದ್ದುಕೊಳ್ಳ ಬಾರದೇ ಮನೆಯಲ್ಲಿ?’ ಎಂದು ಸಿಟ್ಟಿನ ದನಿಯಲ್ಲಿ ಕರೆಯುವ ಹಿರಿಯರಂತೆ– ತೋಟದ ನಾಯಿಗಳು ನಡುನಡುವೆ ರಭಸದಿಂದ ಬೊಗಳುತ್ತಿದ್ದುವು.

ಮರಗಳ ಹೊದರುಗಳಿಂದ ಹೊರಕ್ಕೆ ಬಂದು ಕುಳಿತ ಗೂಗೆಗಳು ‘ಘೂ, ಘೂ’ ಎಂಬ ಒಂದೆ ಒಂದು ಬೀಜಾಕ್ಷರದ ಕೂಗಿನಿಂದ, ಆಪ್ತೇಷ್ಟರೆಲ್ಲರಿಗೆ ತಮ್ಮ ತಮ್ಮ ಸುಖದುಃಖದ ಸಮಾಚಾರಗಳನ್ನು ತಿಳಿಸುತ್ತಿರುವುವು. ತೋಟಗಳಲ್ಲಿ ಕಬ್ಬುತಿನ್ನುವುದಕ್ಕೆ ಗುಂಪುಗೊಂಡು

ಹೊರಟಿದ್ದ ನರಿಗಳ ಬಳಗದಲ್ಲಿ, ಮರುಳು ನರಿಯೊಂದಕ್ಕೆ ಏತಕ್ಕಾಗಿ ಹುರುಪುಬಂದಿತೇನೋ! ಒಮ್ಮೆಲೆ 'ಹುಕ್‌ಹುಯ್' ಎಂದು ಮೊರೆದೆದ್ದಿತು. ಕೂಡಲೆ ಎಲ್ಲ ನರಿಗಳೂ—ಒಂದರ ಹಿಂದೆ ಒಂದರಂತೆ—ಆ ಮರುಳು ನರಿಯ ಅನುಸರಣೆಯನ್ನು ಮಾಡಲು ತೊಡಗಿದುವು. ಆಗಲೆ ಕಬ್ಬಿನ ತೋಟದ ಕಾಪಿನವರ ಢೋಲು—ತಮ್ಮಟೆಗಳ 'ಢಾಂಢಾಂ' 'ಟಾಂಟಾಂ' ಎಂಬ ಸಪ್ಪುಳುಗಳೂ 'ಹುಯ್‌ಹಾ' ಎಂಬ ಸೋಹಿನ ಕೋಲಾಹಲವೂ ಕೇಳಲು ಮೊದಲುಮಾಡಿದುವು.

ಮೋಡಗಳಿಲ್ಲದ ಆಗಸದಲ್ಲಿ, ತಾರೆಗಳ—ಕಾರಣವಿಲ್ಲದ—ನಿರಂತರವಾದ ನಗೆಯು, ಎಲ್ಲೆಲ್ಲಿಯೂ ತುಂಬಿನಿಂತಿದೆ; ಆದರೂ ತೋಟಗಳ ಸಸ್ಯವರ್ಗವು ನೆಲದಲ್ಲಿ ಹರಡಿದ್ದ ಕಗ್ಗತ್ತಲೆಗೆ, ತಮ್ಮ ಶ್ಯಾಮಲತೆಯ ನೆರವನ್ನು ಕೊಟ್ಟು, ಅದರ ಕರಾಳತೆಯನ್ನು ಹೆಚ್ಚು ಹೆಚ್ಚಾಗಿ ಮಾಡಿದೆ.

ಆಗ ಶಾಂತಿಕುಟೀರದಲ್ಲಿ ಜನರ ಸುಳಿದಾಟವು ಸ್ವಲ್ಪವೂ ಕಾಣುತ್ತಿರಲಿಲ್ಲ; ಇದ್ದವರೆಲ್ಲರೂ ನಿದ್ದೆಹೋಗಿರಬಹುದು. ಹಗಲಿರುಳೂ ತೆರೆದುಕೊಂಡೆ ಇರುತ್ತಿದ್ದ ಮುಖ್ಯದ್ವಾರದ ಕಾಪಿನವನು ಕೂಡ, ನಿಶ್ಚಿಂತನಾಗಿ ನಿದ್ರೆಮಾಡುತ್ತಲಿರುವನು. ಆದರೆ ರಾಜಶೇಖರನು ಮಾತ್ರ ಕುಟೀರದ ಒಳಕ್ಕೆ ತನ್ನ ವಿಶ್ರಾಂತಿಭವನದಲ್ಲಿ – ವ್ಯಾಘ್ರಾಜಿನದ ಮೇಲೆ – ಕುಳಿತಿರುವನು. ಮುಂದಿರುವ ವ್ಯಾಸಪೀಠದಲ್ಲಿ ಒಂದು ಓಲೆಗರಿಯ ಹೊತ್ತಗೆಯಿದೆ; ಅದರದೊಂದು ಓಲೆಯನ್ನು ಕೈಯಲ್ಲಿ ಹಿಡಿದುಕೊಂಡು, ಮನನದೃಷ್ಟಿಗಳನ್ನು ಅದರಲ್ಲಿ ಸಿಕ್ಕಿಸಿ, ರಾಜಶೇಖರನು ಓದುವುದರಲ್ಲಿ ಮೈಮರೆತು ಹೋಗಿರುವನು. ಹೊರಕ್ಕೆ ನಡೆದಿದ್ದ ತೋಟಗಾರರ ಹಾಡು, ನಾಯಿಗಳ ಬೊಗಳು, ನರಿಗಳ ಹುಯ್ಯಲು, ಢೋಲು-ತಮ್ಮಟೆಗಳ ಸಪ್ಪುಳು, ಇವಾವುವೂ ಆತನ ಏಕಾಂತವಾಚನಕ್ಕೆ ಅಡೆತಡೆಗಳನ್ನು ಉಂಟುಮಾಡುತ್ತಿರಲಿಲ್ಲವೆಂದು ತೋರುವುದು. ನಿದ್ದೆಯಮ್ಮನ ಸುಳಿದಾಟವೂ ರಾಜಶೇಖರನನ್ನು ಇದುವರೆಗೆ ಸಮೀಪಿಸಿರಲಿಲ್ಲವೇನೋ! ಎಂತಲೇ ಆಗ, ಹೊತ್ತಗೆಯ ಓಲೆಯಲ್ಲಿ ಮೂಡಿಕೊಂಡಿದ್ದ ಅಕ್ಷರಗಳ ಅರ್ಥವು ಆತನ ಮನಃಪಟದ ಮೇಲೆ ಮೂಡಿನಿಲ್ಲುವುದು; ಆ ಅರ್ಥದಲ್ಲಿ ಹುದುಗಿಕೊಂಡಿದ್ದ ರಸಭಾವಗಳು ಅವನ ಹೃದಯದಲ್ಲಿ ಮೂಡಿಕೊಳ್ಳುವುವು; ಆ ರಸಭಾವಗಳ

ಅನುಭಾವಗಳು ರಾಜಶೇಖರನ ಮುಖದಲ್ಲಿ ಮೂರ್ತಿಗೊಂಡು ನಿಲ್ಲುವುವು. ಆತನು ಓದುತ್ತಿದ್ದ ಹೊತ್ತಗೆಯು ಶ್ರೀಬಸವಣ್ಣನವರ ಷಟ್‌ಸ್ಥಲ ವಚನಗಳನ್ನು ಒಳಗೊಂಡುದು. ಓದು ಅವಿಚ್ಛಿನ್ನವಾಗಿ ಸಾಗಿದ್ದಿತು:–

**"ಕೆಸರಲ್ಲಿ ಬಿದ್ದ ಪಶುವಿನಂತೆ ನಾನು ದೆಸೆದೆಸೆಗೆ ಬಾಯಬಿಡುತ್ತಿದ್ದೇನಯ್ಯಾ! ಆರೈವರಿಲ್ಲ, ಅಕಟಕಟಾ! ಪಶುವೆಂದೆನ್ನ ಕೂಡಲ-ಸಂಗಮದೇವ ಕೊಂಬ ಹಿಡಿದು ಎತ್ತುವನ್ನಕ್ಕ!"**

**"ವಿಷಯವೆಂಬ ಹಸಿರನೆನ್ನ ಮುಂದೆ ತಂದು ಪಸರಿಸದಿರಯ್ಯಾ! ಪಶುವೇನ ಬಲ್ಲುದು. . ಹಸಿರೆಂದೆಳಸುವುದಲ್ಲದೆ? ವಿಷಯರಹಿತನ ಮಾಡಿ, ಭಕ್ತಿರಸವ ದಣಿಯೆ ಮೇಯಿಸಿ,, ಸುಬುದ್ಧಿಯೆಂಬ ಉದಕವನೆರೆದು, ನೋಡಿ ಸಲಹಯ್ಯಾ ಕೂಡಲ ಸಂಗಮದೇವಾ!"**

ಇವೆರಡೂ ವಚನಗಳನ್ನೋದಿ, ರಾಜಶೇಖರನು ಹಿಗ್ಗಿದೆದೆಯವನಾಗಿ, ತನಗೆ ತಾನೆ ಎಂದುಕೊಂಡ:—

"ನಾನು ಬೇಡಿಕೊಳಬೇಕೆನ್ನುವ ಮಾತುಗಳೆ ಬಸವಣ್ಣನವರ ಬಾಯಲ್ಲಿಯೂ ಬಂದಿವೆಯಲ್ಲ!" ಮತ್ತೆ ಮೊದಲಿನಂತೆಯೆ ಓದುವುದಕ್ಕೆ ಆರಂಭಿಸಿದ.

**"ಬೆಳೆಯುದ ಭೂಮಿಯಲ್ಲೊಂದು ಪ್ರಳಯದ ಕಸಹುಟ್ಟಿ, ತಿಳಿಯಲೀಯದು! ಎಚ್ಚರಲೀಯದು! ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ ಲಿಂಗತಂದೆ! ಸುಳಿದೆಗೆದು ಬೆಳೆವೆನು ಕೂಡಲಸಂಗಮ ದೇವಾ!"**

**"ಅಯ್ಯಾ ಅಯ್ಯಾ! ಎಂದು ಕರೆಯುತ್ತಲಿದ್ದೇನೆ. ಅಯ್ಯಾ ಅಯ್ಯಾ! ಎಂದು ಒರಲುತ್ತಲಿದ್ದೇನೆ. ಓ ಎನ್ನಲಾಗದೇ ಅಯ್ಯಾ! ಆವಾಗಳೂ ನಿಮ್ಮ ಕರೆಯುತ್ತಲಿದ್ದೇನೆ. ಓ ಎನ್ನದೆ ಮೌನವೇಕೆ ಕೂಡಲಸಂಗಮದೇವಾ!"**

ಇದ್ದುದಿದ್ದ ಹಾಗೆಯೆ – ಹೊರಗಿನ ಕತ್ತಲೆಯ ಹಾಳೆಯನ್ನೇ ಕತ್ತರಿಸಿ ಮಾಡಿದಂತಹ–ಕಪ್ಪುಬಣ್ಣದ ತೆರೆಯನ್ನು – ಮುಸುಕುಹಾಕಿ-ಕೊಂಡಿದ್ದ ವ್ಯಕ್ತಿಯೊಂದು, ನಿಧಾನವಾಗಿ ಹಜ್ಜೆಯಿಕ್ಕುತ್ತ, ರಾಜಶೇಖರನು ಕುಳಿತಿದ್ದಲ್ಲಿಗೆ ಬಂದಿತು. ಮೈಮರೆತುಹೋಗಿದ್ದ ರಾಜಶೇಖರನಿಗೆ ಇದಾವು-ದರ ಅರಿವೂ ಇರಲಿಲ್ಲ. ಬಂದಿದ್ದ ವ್ಯಕ್ತಿ ಹಾಗೆಯೆ ಮೆಲ್ಲಡಿಯಲ್ಲಿ ಮುಂದು-

ವರಿದು ರಾಜಶೇಖರನ ಮುಂದೆಯೆ ಬಂದುನಿಂತಿತು. ತಟ್ಟನೆ ಹಾರಿ ಬಿದ್ದವನಾಗಿ, ಆತನು ಮುಖ ಮೇಲಕ್ಕೆ ಎತ್ತಿನೋಡಿದ. ಕರಿಯ ತೆರೆಯಲ್ಲಿ ಅಡಗಿದ್ದ ವಿಗ್ರಹವೊಂದು ಎದುರಲ್ಲಿ ನಿಂತಿದೆ. ನೋಡಿದ ಮೊದಲನೆಯ ಕ್ಷಣದಲ್ಲಿ ಮಾತ್ರ ಗಾಬರಿಯು ಅವನ ಹೃದಯವನ್ನು ಅಲುಗಾಡಿಸಿತು. 'ತಾನು ಕೊಲೆಮಾಡಿದ್ದ ವಿರೂಪಾಕ್ಷರಾಯನ ಭೂತವಿರಬಹುದೇ ಇದು?' ಎಂಬ ಕಲ್ಪನೆಯೂ ಆತನ ಮನಸ್ಸನ್ನು ಒಂದು ಸಲ ಕೆಣಕಿತು. ಮರುಕ್ಷಣ ದಲ್ಲಿಯೆ ರಾಜಶೇಖರನ ಹೃದಯ-ಮನಸ್ಸುಗಳು ಒಂದು ಸ್ಥೈರ್ಯವನ್ನು ತಳೆದುವು. ಕದಲದ ಧೈರ್ಯದೊಂದಿಗೆ ಅವನು ಕೇಳಿದನು.

"ಯಾರು ನೀವು?"

ತೆರೆಯೊಳಗಿಂದ ಉತ್ತರವೇನೂ ಬರಲಿಲ್ಲ. ರಾಜಶೇಖರನು ಇನ್ನಿಷ್ಟು ಗಟ್ಟಿಯಾದ ಧ್ವನಿಯಲ್ಲಿ ಕೇಳಿದ.

"ಯಾರು ನೀವು? ನಿಮಗೆ ಇಲ್ಲಿ ಏನು ಕೆಲಸ?"

ಹೆಣ್ಣಿನ ಕಂಠದಲ್ಲಿ ಮಾತೊಂದು ಹೊರಕ್ಕೆ ಹೊರಟಿತು.

"ಕೆಲಸವಿಲ್ಲದವರು ಇಲ್ಲಿಗೆ ಯಾರು ಏತಕ್ಕೆ ಬಂದಾರು?"

ರಾಜಶೇಖರನಿಗೆ ಈ ಧ್ವನಿಯನ್ನು ಈ ಮೊದಲು ಎಲ್ಲಿಯೋ ಕೇಳಿದಂತೆ ಎನಿಸಿತು. ಎಲ್ಲಿ ಕೇಳಿದ್ದೇನೆಂಬುದು ಸ್ಮರಣೆಗೆ ಬಾರದೆ ಹೋಯಿತು. ನೆನಪುಮಾಡಿಕೊಳ್ಳುತ್ತಿರುವಾಗಲೆ ಕೇಳಿದನು.

"ಕೆಲಸವಿದ್ದವರಿಗೆ ಈ ವೇಷವೇತಕ್ಕೆ ಬೇಕು?"

"ಎಂತಲೆ ಈಗ ಅದನ್ನು ತೆಗೆದೊಗೆದುಬಿಡುತ್ತೇನೆ." ಹೊತ್ತಿದ್ದ ತೆರೆಯನ್ನು ತೆಗೆದೊಗೆದು, ಸಾಹಸ–ಸಂದೇಹಭಾವಗಳ ಬೆರಕೆಯ ಮುಗುಳು ನಗೆಯೊಂದಿಗೆ ರತ್ನಾಂಬಿಕೆ ನಿಂತುಕೊಂಡಳು. ರಾಜಶೇಖರನು ರೆಪ್ಪೆಯನ್ನು ಅಲುಗಿಸದೆ ಒಂದುನಿಮಿಷ ನೋಡಿ, ಆತುರದ ಧ್ವನಿಯಲ್ಲಿ ನುಡಿದನು.

"ಯಾರು! ರತ್ನಾಂಬಿಕೆಯಲ್ಲವೇ ನೀವು!"

"ಅಹುದು! ನಾನೇ ರತ್ನಾಂಬಿಕೆ!"

"ಏನು ಅಮ್ಮಾಜೀ! ಇಂತಹವೇಳೆಯಲ್ಲಿ ಬರುವುದೇ?"

"ಕಾರ್ಯಕ್ಕೆ ತಕ್ಕುದಾದ ವೇಳೆಯಲ್ಲಿ ಬರಬೇಕಲ್ಲವೆ!"

"ಅದೇನು ನಿಮ್ಮ ಕಾರ್ಯ!"

ರತ್ನಾಂಬಿಕೆಯು ಸ್ವಲ್ಪ ವೇಳೆ ವಿಚಿತ್ರವಾದ ನೋಟದಿಂದ ರಾಜ-ಶೇಖರನನ್ನು ನೋಡಿದಳು; ಬಳಿಕ ಹೇಳಿದಳು.

"ನನಗೆ ವಿಜಯನಗರದ ಮಹಾರಾಣಿಯಾಗುವುದು ಬೇಕಾಗಿದೆ."

"ಅದಕ್ಕೇನು? ಅದೃಷ್ಟವಿದ್ದರೆ ಆಗಬಹುದಲ್ಲ!"

"ನನ್ನ ಅದೃಷ್ಟದಲ್ಲಿ ಅದು ಇದ್ದೇ ಇದೆ; ನನಗೆ ಗೊತ್ತು!"

"ಅದು ಹೇಗೆ ಗೊತ್ತಿದೆ ಅಮ್ಮಾಜೀ!"

"ನನ್ನ ಜಾತಕವನ್ನು ಸ್ವತಃ ಮಲ್ಲಿಕಾರ್ಜುನ ದೊರೆಗಳು ಬರೆದು ಕೊಟ್ಟಿದ್ದಾರಂತೆ. ನಾನು ಮಹಾರಾಣಿಯಾಗುವ ಯೋಗವಿದೆಯೆಂದು ಅದರಲ್ಲಿ ಹೇಳಿದ್ದಾರಂತೆ?"

"ನನಗೆ ಅಪ್ಪಾಜಿಯವರ ಜ್ಯೋತಿಷ ಜ್ಞಾನದ ವಿಷಯದಲ್ಲಿ ಸಾಕಷ್ಟು ಭರವಸೆಯಿದೆ. ಅವರು ಹೇಳಿದ್ದ ಹಲವು ಭವಿಷ್ಯಗಳು ನಿಜವಾಗಿದ್ದುದರ ಅನುಭವವು ನನಗೆ ತುಂಬ ಬಂದಿದೆ."

"ಹಾಗಿದ್ದರೆ ನನ್ನ ವಿಷಯಕವಾಗಿ ಹೇಳಿದ್ದ ಭವಿಷ್ಯವೂ ನಿಜವಾಗ ಬಹುದಲ್ಲವೇ?"

"ಈ ಮೊದಲಿನ ಅನುಭವವನ್ನು ನೋಡಿದರೆ ಇದೂ ಆಗಬಹುದೆಂದು ಭಾವಿಸುತ್ತೇನೆ."

"ಈ ಮಾತನ್ನು ಬರೀ ಭಾವಿಸುತ್ತ ಕುಳಿತುಬಿಟ್ಟರೆ ನಡೆಯುವಂತಿಲ್ಲ."

"ಎಂದರೇನು?"

"ಪ್ರತ್ಯಕ್ಷವಾಗಿ ಆಚರಣೆಯಲ್ಲಿ ತರಬೇಕಾಗಿದೆ."

"ಯಾರು ತರಬೇಕಾಗಿದೆ ಆಚರಣೆಯಲ್ಲಿ?"

"ನೀವು!"

"ಇದರಲ್ಲಿ ನಾನು ಮಾಡಬೇಕಾದುದೇನು? ನಿಮ್ಮ ವಿಷಯದಲ್ಲಿ ಪೆದ್ದರಾಯನಿಗೆ ನಾನು ಏನಾದರೂ ಹೇಳಬೇಕೆನ್ನುತ್ತೀರೇನು?"

"ಪೆದ್ದರಾಯರಿಂದ ನನಗೆ ಆಗಬೇಕಾದುದು ಏನೂ ಇಲ್ಲ!"

"ಹೀಗೆಂದರೆ ಏನು? ವಿಜಯನಗರಕ್ಕೆ ಮಹಾರಾಜನಾಗುವವನು ಪೆದ್ದರಾಯನು! ಮಹಾರಾಣಿಯಾಗಬೇಕೆನ್ನುವವರಿಗೆ ಮಹಾರಾಜನಿಂದ ಏನೂ ಆಗಬೇಕಾದುದು ಇಲ್ಲವೆಂದರೆ... ಇದರ ಅರ್ಥವೇನು?"

ರತ್ನಾಂಬಿಕೆಯು ಭಾವಪೂರ್ಣವಾದ ನೋಟದಿಂದ ಮತ್ತೆ ಒಂದು ಸಲ ರಾಜಶೇಖರನನ್ನು ನೋಡಿದಳು. ಆತನ ಮುಖದಲ್ಲಿ ವಿಸ್ಮಯ–ಕುತೂಹಲಗಳ ಬೆರಕೆಯ ಭಾವವು ಮಾತ್ರ ಮೊಗದೋರುತ್ತಿದ್ದಿತು. ಒಂದೆರಡು ನಿಮಿಷ ತಡೆದು ರತ್ನಾಂಬಿಕೆ ಹೇಳಿದಳು.

"ನನ್ನದೊಂದು ಪ್ರತಿಜ್ಞೆ ಪೂರ್ಣವಾಗಬೇಕಾಗಿದೆ."

"ಮತ್ತಾವುದು ನಿಮ್ಮ ಪ್ರತಿಜ್ಞೆ? ವಿರೂಪಾಕ್ಷರಾಯರ ಕೊಲೆಯಿಂದ, ನಿಮ್ಮ ಪ್ರತಿಜ್ಞೆ ಪೂರ್ಣವಾದಂತಾಯಿತೆಂದು ಆವೊತ್ತು ಹೇಳಿದ್ದಿರಲ್ಲವೇ?"

"ಹೇಳಿದ್ದೆ ಅಹುದು; ಆದರೆ ಅದರಿಂದ ನನ್ನ ಪ್ರತಿಜ್ಞೆಯ ಅರ್ಧ ಭಾಗವು ಮಾತ್ರ ಪೂರ್ಣವಾದಂತಾಗಿದೆ."

"ಇನ್ನರ್ಧ ಭಾಗವು ಪೂರ್ಣವಾಗಲಿಕ್ಕೆ ಏನಾಗಬೇಕಾಗಿದೆ?"

"ಏನಾಗಬೇಕಾಗಿದೆಯೇ?" ಸ್ವಲ್ಪ ತಡೆದು ನಿಂತು, ಮುಂದೆ ಹೇಳಿದಳು. "ಈ ಮೊದಲೇ ಹೇಳಿದ್ದೇನಲ್ಲವೇ..? ನಾನು ಮಹಾರಾಣಿಯಾಗಬೇಕಾಗಿದೆ!"

"ಪೆದ್ದರಾಯನೊಡನೆ ಮೊದಲಿಂದಲೂ ನಿಮ್ಮ ಸಲುಗೆ ಸಾಕಷ್ಟು ಇದೆಯೆಂಬುದನ್ನು ನಾನು ಕೇಳಿ ಅರಿತಿದ್ದೇನೆ. ಉಳಿದ ಅರ್ಧ ಪ್ರತಿಜ್ಞೆಯನ್ನೂ ಪೂರ್ಣಗೊಳಿಸಿಕೊಳ್ಳಲಿಕ್ಕೆ ಆಗಬಹುದು!"

"ಆದರೆ..!"

"ಆದರೆ ಏನು?"

"ಪೆದ್ದರಾಯರಿಂದ ನನ್ನ ಪ್ರತಿಜ್ಞೆಯ ಪೂರ್ವಾರ್ಧವು ಪೂರ್ಣವಾಗಲಿಲ್ಲವಲ್ಲ!"

"ಆಗದಿದ್ದರೆ ಏನಾಯಿತು?"

"ನನ್ನದೊಂದು ಸಂಕಲ್ಪವಿದೆ; ವಿರೂಪಾಕ್ಷರಾಯನ ಕೊಲೆಯನ್ನು ಯಾರು ಮಾಡಿದ್ದಾರೋ ಅವರದೇ ಕೈಯನ್ನು ಹಿಡಿಯಬೇಕೆಂಬುದು ನನ್ನ ಪ್ರತಿಜ್ಞೆಯ ಉತ್ತರಾರ್ಧ."

"ನನ್ನ ಸಂಕಲ್ಪದಿಂದ ನಾನು ಎಂದೂ ಚ್ಯುತನಾಗುವಂತೆ ಇಲ್ಲ. ನಿಮ್ಮ ಈ ಪ್ರತಿಜ್ಞೆಯ ಉತ್ತರಾರ್ಧವು ಪೂರ್ಣವಾಗುವುದು ಅಸಾಧ್ಯವಾದ

ಮಾತು!”

“ನೀವು ಮನಸ್ಸು ಮಾಡಿದರೆ ಯಾವುದೂ ಅಸಾಧ್ಯವಿಲ್ಲ; ದಯೆಯಿಟ್ಟು ನೀವೆ ಸಿಂಹಾಸನವನ್ನೇರುವುದಕ್ಕೆ ಒಪ್ಪಿಕೊಳಬೇಕು; ನನ್ನ ಬಯಕೆಯನ್ನೂ ಪ್ರತಿಜ್ಞೆಯನ್ನೂ ಪೂರ್ತಿಗೊಳಿಸಬೇಕು!”

“ಎರಡೂ ಅಸಂಭವನೀಯವಾದ ಸಂಗತಿಗಳು. ನಾನು ಸಿಂಹಾಸನವನ್ನು ಏರಲಿಕ್ಕೂ ಒಲ್ಲೆ! ಸಂಸಾರಿಯಾಗಲಿಕ್ಕೂ ಒಲ್ಲೆ!”

ತಾನು ಏನು ಮಾತನಾಡಬೇಕೆಂಬುದನ್ನು ತಿಳಿಯದೆ, ರತ್ನಾಂಬಿಕೆ ಬೇಸತ್ತು ಬಿರುನುಡಿಯನ್ನಾಡಿದಳು.

“ಹೀಗೆನ್ನುವುದೆಂದರೆ ಹೇಡಿತನವೆಂದು ನಾನು ಎನ್ನುತ್ತೇನೆ!”

“ಹಾಗೂ ಎಂದುಕೊಳ್ಳಿ ಬೇಕಾದರೆ! ಅದರಿಂದ ನನ್ನ ಮನಸ್ಸಿಗೆ ನೋವೇನೂ ಉಂಟಾಗದು.”

ರತ್ನಾಂಬಿಕೆಯು ನಿರುಪಾಯಭಾವದ ಮುಖದೊಂದಿಗೆ ಸ್ವಲ್ಪ ವೇಳೆ ತಡೆದಿದ್ದು ಆಮೇಲೆ ಉಪದೇಶದ ಅಧಿಕಾರವಾಣಿಯಲ್ಲಿ ಹೇಳಿದಳು.

“ರಾಜಶೇಖರ! ಹೆಣ್ಣಿನ ಜೊತೆಯ ಅನುಭವವು ನಿಮಗೆ ಇಲ್ಲವೇನೋ! ಎಂತಲೆ ಹೀಗೆ ಹೇಳುತ್ತಿದ್ದೀರಿ! ನನ್ನನ್ನು ನಿಮ್ಮಾಕೆಯನ್ನಾಗಿ ಮಾಡಿಕೊಂಡು ನೋಡಿ! ಇದೇ ವಿಜಯನಗರವನ್ನೇ – ನೀವು ಅಪೇಕ್ಷಿಸುತ್ತಿರುವ – ದೇವಲೋಕವನ್ನಾಗಿ ಮಾಡಿ ತೋರಿಸಬಲ್ಲೆ!”

ರಾಜಶೇಖರನು ಮುಖವೆತ್ತಿ ರತ್ನಾಂಬಿಕೆಯನ್ನು ನಿಟ್ಟಿಸಿ ನೋಡಿದನು. ಆಕೆಯ ಕಣ್ಣ ಕಾಂತಿಯು ರಾಜಶೇಖರನ ನೋಟಗಳನ್ನು ಸೆಳೆದುಕೊಳ್ಳದೆ ಬಿಡಲಿಲ್ಲ. ರತ್ನಾಂಬಿಕೆಯು ಸ್ವಾಭಾವಿಕ ಸುಂದರಿ; ಅದರಲ್ಲಿಯೂ ಈಗ ಬೇರೆ ಬೇರೆ ಭಾವಗಳಿಗೆ ಸಿಕ್ಕಿಕೊಂಡವಳಾದುದರಿಂದ, ಮುಖಕ್ಕೆ ಒಂದು ವಿಶಿಷ್ಟವಾದ ಸೊಬಗು ಉಂಟಾಗಿದೆ. ತುಂಬುಜವ್ವನವು ಆಕೆಯ ಇಷ್ಟವನ್ನು ಮೀರಿಯೂ ಅಂಗಾಂಗಗಳಿಗೆ ಒಂದು ಬಗೆಯ ಪೂರ್ಣತೆಯನ್ನು ತಂದುಕೊಟ್ಟಿದೆ. ಉಟ್ಟಿದ್ದ, ತೆಳುಗುಲಾಬಿಯ ಬಣ್ಣದ – ಸರಿಗೆಯಂಚಿನ – ಸೀರೆಯು ತುಂಬುಮೈಯನ್ನು ಅಲ್ಲಲ್ಲಿ ಮೆತ್ತಿಕೊಂಡು ನಿಂತಂತಾಗಿದೆ. ಗಿಳಿಯ ಬಣ್ಣದ – ಕಿರು ಮುತ್ತಿನಂಚಿನ – ರೇಷ್ಮೆಯ ಕುಪ್ಪಸವು, ಹೊರಕ್ಕೆ ಕಾಣುತ್ತಿದ್ದ ದುಂಡುದೊಳ ಸೊಬಗನ್ನು ಹೆಚ್ಚಿಸುತ್ತಲಿದೆ. ಬಿಗಿದು ಕಟ್ಟಿದ್ದ

ಎದೆಯ ಮೇಲುದು, ಮುನಿಗಳ ಮನಸ್ಸನ್ನು ಕೂಡ ಅಸ್ಥಿರಗೊಳಿಸುವೆನೆಂದು ಮುವ್ಮೊಗದಿಂದ ಹೇಳುತ್ತಲಿದೆ. ವಜ್ರದ– ಪಚ್ಚೆಯ – ಕಿರುಹರಳುಗಳ ನ್ನಿಟ್ಟು ಹೆಣೆದಿದ್ದ ಕೊರಳ ಸರವು ಎದೆಯ ಇಕ್ಕಡೆಗಳಲ್ಲಿಯೂ ಕೆಳಕ್ಕಿಳಿದು, ತಾರಗೆಯ ಸರದಂತೆ ಜೋಲುತ್ತಿದೆ. ನೀಳವಾದ ಮೂಗಿನ ಮೇಲೆ ಮೆರುಗು ಹರಿಯಿಸುತ್ತ ಕುಳಿತಿದ್ದ ಮಾಣಿಕ್ಯದ ಮೂಗುಬೊಟ್ಟು, ಮಂಗಳನ ಚೆಂಬೆಳಗನ್ನು ಹೀರಿಕೊಂಡು ನಿಂತಂತಿದೆ.

ಇದೆಲ್ಲವನ್ನೂ ರಾಜಶೇಖರನಿಗೆ ಮತ್ತೆ ಮತ್ತೆ ನೋಡಬೇಕೆನಿಸಿತು. ರತ್ನಾಂಬಿಕೆಯ ಅಂಗಾಂಗಗಳಲ್ಲಿಯೂ ನೋಟಗಳನ್ನು ನಿಲ್ಲಿಸಿ ನಿಲ್ಲಿಸಿ ನೋಡಲು ತೊಡಗಿದನು. ಚೆನ್ನಾಗಿ ನೋಡಿಕೊಳಲೆಂಬ ಭಾವನೆಯಿಂದಲೋ ಏನೋ! ರತ್ನಾಂಬಿಕೆಯೂ ಅಲುಗಾಡದ ಮೈಮನಗಳಿಂದ ನಿಂತುಕೊಂಡಿದ್ದಳು. ನೋಡುವುದನ್ನು ಮುಗಿಸಿದವನಾಗಿ – ನಿರ್ವಿಕಾರಮನಸ್ಸಿನಿಂದ– ರಾಜಶೇಖರನು ಹೇಳಿದ.''

"ಅಮ್ಮಾಜೀ ! ಮಹಾರಾಣಿಯಾಗಲಿಕ್ಕೆ ಬೇಕಾಗಿದ್ದ ಗುಣಗಳು ನಿಮ್ಮಲ್ಲಿ ಸಾಕಷ್ಟು ಇವೆ! ಜ್ಯೋತಿಷ್ಯದ ಭವಿಷ್ಯದಲ್ಲಿ ನಂಬುಗೆಯನ್ನಿಡಲಿಕ್ಕೆ ಅಡ್ಡಿಯೇನೂ ತೋರುವುದಿಲ್ಲ.''

ಅಶಾಭಾವದಿಂದ ರತ್ನಾಂಬಿಕೆ ಕೇಳಿದಳು.

"ಸಿಂಹಾಸನವನ್ನು ಏರಲಿಕ್ಕೆ ನಿಮ್ಮದು ಸಮ್ಮತಿಯೇ?"

"ಛೇ! ಅದೆಂದಿಗೂ ಆಗದ ಮಾತು!"

"ಹಾಗಿದ್ದರೆ ಮಹಾರಾಣಿಯಾಗಲಿಕ್ಕೆ ಯೋಗ್ಯವಾಗಿದ್ದ ನನ್ನ ಗುಣಗಳ ಉಪಯೋಗವು ಏನಾದಂತಾಯಿತು?"

ರಾಜಶೇಖರನು ನಿಶ್ಚಯದ ಸ್ವರದಲ್ಲಿ ಹೇಳಿದನು.

"ರತ್ನಮ್ಮಾಜೀ! ದಯೆಯಿಟ್ಟು ಕೂಡಲೆ ಇಲ್ಲಿಂದ ಹೊರಟುಬಿಡಿ! ಒಂದು ಕ್ಷಣವೂ ಇಲ್ಲಿ ನಿಲ್ಲಬೇಡಿ! ನಿಮ್ಮ ಪ್ರತಿಜ್ಞಾಪೂರ್ತಿಗೆ ನನ್ನಿಂದ ನೆರವು ದೊರೆಯುವುದು ಶಕ್ಯವಿಲ್ಲ. ಹೊರಟುಹೋಗಿ, ನೀವು!"

ರತ್ನಾಂಬಿಕೆಯು ಕರುಣೆಯ ನೋಟಗಳಿಂದ ನಸುವೇಳೆ ರಾಜಶೇಖರ ನನ್ನು ನೋಡುತ್ತಿದ್ದು, ಕೊನೆಗೆ ಕಂಪಿಸುತ್ತಿರುವ ಕಂಠದಲ್ಲಿ ಹೇಳಿದಳು.

"ರಾಜಶೇಖರ! ನಿಮಗೆ ಅರಿಯದ ಸಂಗತಿಯೇನೂ ಅಲ್ಲ! ಹೆಣ್ಣಿನ

ಹೃದಯ ಹೂವಿನಂತಹದು. ಅದನ್ನು ಕುರುಡರಂತೆ ತುಳಿದುಬಿಡುವುದು ನಿಮ್ಮಂತಹರಿಗೆ ಯುಕ್ತವಾದುದಲ್ಲ!"

"ಇನ್ನು ನಾನು ಸ್ವಲ್ಪ ನಿಷ್ಠುರನಾಗಿ ಹೇಳಬೇಕಾಗುವುದು. ದಯೆಯಿಟ್ಟು ನನ್ನನ್ನು ಕ್ಷಮಿಸಬೇಕು! ನನಗೆ ನಿಮ್ಮ ಈ ಉಪದೇಶದ ಆವಶ್ಯಕತೆಯಿಲ್ಲವೆಂದು ಎನಿಸುತ್ತಿದೆ. ಮಾಡಿದ್ದ ಸಂಕಲ್ಪವನ್ನು ಮುರಿಯ-ಲಾರೆನೆಂದು ನಿಮಗೆ ಮತ್ತೆ ಮತ್ತೆ ಹೇಳಲಾರೆ! ಇನ್ನು ಹೆಚ್ಚುಕಾಲ ನಿಂತಿರಬೇಡಿ! ನನ್ನಿಂದ ನೀವು ಯಾವ ಪ್ರಯೋಜನವನ್ನೂ ಪಡೆಯಲಾರಿರಿ!"

"ರಾಜಶೇಖರ! ಹೂವನ್ನು ಎತ್ತಿ ಮುತ್ತಿಟ್ಟರೆ ಅದು ತನ್ನ ಸೌಗಂಧ ದಿಂದ ಮನುಷ್ಯನ ಮನಸ್ಸು ಹೃದಯಗಳನ್ನು ತಣಿಸಿಬಿಡಬಹುದು! ಅದನ್ನೆ ತಿರಸ್ಕರಿಸಿ ತುಳಿದುಬಿಟ್ಟರೆ ನೊಂದು ತನ್ನಲ್ಲಿಯ ಕಹಿರಸವನ್ನು ಹೊರಕ್ಕೆ ಹಾಕಬಹುದು!"

"ಅಮ್ಮಾ! ಇನ್ನು ಮೇಲೆ ನಿಮ್ಮ ಮಾತುಗಳನ್ನು ಕೇಳಲಾರೆ; ನಿಮ್ಮ ಮುಖದತ್ತಲೂ ನೋಡಲಾರೆ! ಕಿವಿಗಳಲ್ಲಿ ಬೆರಳುಗಳನ್ನು ಇರಿಸಿಕೊಳ್ಳು ತ್ತೇನೆ. ಕಣ್ಣುಗಳನ್ನೂ ಗಟ್ಟಿಯಾಗಿ ಮುಚ್ಚಿಕೊಳ್ಳುತ್ತೇನೆ."

ರಾಜಶೇಖರನು ನುಡಿದಂತೆಯೆ ಮಾಡಿಬಿಟ್ಟನು. ರತ್ನಾಂಬಿಕೆಯ ಮುಖವು ರೋಷ-ಈರ್ಷೆಗಳಿಂದ ನೆತ್ತರೇರಿ ನಿಂತಿತು. ಮೈಯ ನರನರ–ಗಳಲ್ಲಿಯೂ ಶಕ್ತಿಯೊಂದು ಸಂಚರಿಸಿದಂತೆ ಆಯಿತು. ಮುಳಿಸಿನ ಬಿರುದನಿ ಯಲ್ಲಿ ಕೂಗಿ ನುಡಿದಳು.

"ರಾಜಶೇಖರ! ಬರೀ ಕಣ್ಣು ಕಿವಿಗಳನ್ನು ಮುಚ್ಚಿ ಕುಳಿತರೆ ಏನಾದಂತಾಯಿತು? ಈ ರತ್ನಾಂಬಿಕೆಯ ಮುಖವನ್ನು ನೋಡದೆ ಇರಬೇಕಾದರೆ··, ಆಕೆಯ ಮಾತುಗಳನ್ನು ಕೇಳದೆ ಇರಬೇಕಾದರೆ, ನಿಮ್ಮ ದೇಹವೆಲ್ಲವನ್ನೂ ಮುಚ್ಚಿಕೊಳ್ಳಬೇಕಾಗುವುದು! ಸದ್ಯಕ್ಕೆ ನಾನು ಇಲ್ಲಿಂದ ಹೊರಡುತ್ತೇನೆ! ನನ್ನ ಪ್ರತಿಜ್ಞೆಯ ಪೂರ್ಣತೆಯನ್ನು ನಿಮ್ಮಿಂದಲೆ ಮಾಡಿಕೊಳ್ಳದಿದ್ದರೆ ನಾನು ದೇವಣ್ಣನಾಯಕರ ಮಗಳೇ ಅಲ್ಲ!"

ದಡದಡನೆ ಅಡಿಗಳನ್ನು ಅಪ್ಪಳಿಸುತ್ತ ನಡೆದು, ರತ್ನಾಂಬಿಕೆಯು ಶಾಂತಿಕುಟೀರದಿಂದ ಹೊರಕ್ಕೆಬಿದ್ದಳು. ಹೋಗುಹೋಗುತ್ತಿರುವಾಗಲೆ ಕರಿಯತೆರೆಯಲ್ಲಿ ಮೈಯನ್ನು ಮರೆಮಾಡಿಕೊಂಡು, ಹೊರಗಿನ ಕಗ್ಗತ್ತಲೆ

ಯಲ್ಲಿ ಬೆರೆತು ಮಾಯವಾಗಿಬಿಟ್ಟಳು. ರಾಜಶೇಖರನು—ಹಾಗೆಯೆ—ಕಣ್ಣುಗಳನ್ನು ಮುಚ್ಚಿಕೊಂಡು ಅದೆಷ್ಟು ವೇಳೆಯ ವರೆಗೆ ಕುಳಿತುಕೊಂಡಿದ್ದನೇನೋ!"

---

## ೧೨ನೆಯ ಪರಿಚ್ಛೇದ

ಮರುದಿನದ ಬೆಳಗಾಯಿತು. ದಿನದಂತೆಯೆ ಸೂರ್ಯನು ಮೂಡಣ ಆಗಸದಿಂದ ಮೇಲಕ್ಕೇರುತ್ತ ನಡೆದಿದ್ದ. ಪೆದ್ದರಾಯನು ಪ್ರಾತರ್ವಿಧಿಗಳನ್ನು ತೀರಿಸಿ, ಪಂಪಾಪತಿಯ ದರ್ಶನತೆಗೆದುಕೊಂಡು ಬರುವುದರೊಳಗಾಗಿ, ಹೊತ್ತು ಮೊದಲನೆಯ ಪ್ರಹರವನ್ನು ಸಮಾಪಿಸಲಿಕ್ಕೆ ಬಂದಿದ್ದಿತು. ದೇವದರ್ಶನದಿಂದ ಅರಮನೆಗೆ ಬಂದುದಷ್ಟೇ! ಉಡುಪುತೊಡಪುಗಳನ್ನು ಕೂಡ ಬದಲಿಸದೆ ಪೆದ್ದರಾಯನು, ಓಲಗಸಾಲೆಯ ಆಸನವೊಂದರಲ್ಲಿ 'ಹುಶ್' ಎಂದು ಜೋಲುಮೈಯಿಂದ ಕುಳಿತುಕೊಂಡನು. ಇಂದಿನ ಆತನ—ಯೋಚನೆಯಲ್ಲಿದ್ದ—ನೋಟಗಳಿಗೆ ಪಂಪಾಪತಿಯ ಮೂರ್ತಿಯಾದರೂ ಕಂಡಿದ್ದಿತೋ ಇಲ್ಲವೋ ತಿಳಿಯದು. ಕುಳಿತುಕೊಂಡವನು ಮನದಲ್ಲಿ ಎಣಿಕೆಹಾಕುವುದಕ್ಕೆ ತೊಡಗಿದನು.

"ಕಮಲಾಂಬಿಕೆಯ ಪ್ರೀತಿ ತುಳುವ ನರಸಿಂಹನಲ್ಲಿ ಬಳೆದು ನಿಂತಿದೆಯಂತೆ. ಹೀಗಿರುವಾಗ ಆಕೆಯ ಪ್ರೀತಿ ನನ್ನಲ್ಲಿ ನೆಲಸಿಕೊಳ್ಳುವುದು ಹೇಗೆ?..ಪ್ರಪಂಚದಲ್ಲಿ ಅಪೇಕ್ಷಿಸಿದುದನ್ನೆಲ್ಲ ಪಡೆಯುವ ಭಾಗ್ಯ ಎಷ್ಟು ಜನರಿಗಿರುತ್ತದೆ? ಪಡೆಯಲಾರದವರೇ ಬಹು ಜನರು! ಅಂತಹ ಹೀನಭಾಗ್ಯರಲ್ಲಿ ನಾನೂ ಒಬ್ಬನೆಂದು ಏತಕ್ಕಾಗಿ ತಿಳಿದು ನಡೆಯಬಾರದು?..ನನ್ನ ಹಟವು ನಡೆಯುವುದೆಂದು, ಇನ್ನೊಬ್ಬರ ಹಾಲಹರವಿಯನ್ನು ಒಡೆದು ಕೆಡಸಿಬಿಟ್ಟರೆ ಯಾರಿಗೆ ಸುಖವಿದೆ?..ಹಾಗಾದರೆ ಕಮಲಾಂಬಿಕೆಯನ್ನು ನಾನು ಮರೆತುಬಿಡಲೇ..? ಮರೆಯುವುದಕ್ಕೆ ನನ್ನಿಂದ ಆಗಬಹುದೇ..? ಹೋಗಲಿ! ಮರೆಯುವುದಕ್ಕೆ ಆಗದಿದ್ದರೂ ಕೊರೆಯುವ ಎದೆಯ ಕೊರಗನ್ನು ತಾಳಿಕೊಳ್ಳುವುದಕ್ಕೆ ಆದರೂ ಸಾಕು..!"

* * * *

ರತ್ನಾಂಬಿಕೆಯು ನನ್ನಲ್ಲಿ ಎಷ್ಟೋ ಮಮತೆಯನ್ನು ಇಟ್ಟುಕೊಂಡು ಬಂದಿದ್ದಾಳೆ; ಆಕೆಯ ಮಮತೆಯ ಅವಜ್ಞೆಯನ್ನು ಮಾಡಿ, ನಾನಾದರೂ ಅವಳನ್ನು ಏತಕ್ಕಾಗಿ ಮರುಗುತಿರುವಂತೆ ಮಾಡಬೇಕು...? ನನ್ನ ಮನಸ್ಸಿನಂತೆಯೆ ಆಕೆಯದೂ ಮನಸ್ಸಲ್ಲವೇ..? ಇನ್ನೇನಾಗದಿದ್ದರೂ ಹೋಗಲಿ! ರತ್ನಾಂಬಿಕೆಯ ಮಮತೆಯನ್ನು ನಾನು ಪುರಸ್ಕರಿಸಿ ಬಿಟ್ಟರೆ, ಒಂದು ಜೀವದ ಕೊರಗನ್ನು ಕಡಿಮೆಮಾಡಿದೆನೆಂಬ ಸಮಾಧಾನವಾದರೂ ಸಿಕ್ಕಬಹುದು. ಅಂತಹ ಸಮಾಧಾನದಿಂದ ನನ್ನ ಹೃದಯದ ವಿಡಿತವನ್ನು ಕಡಿಮೆಮಾಡಿಕೊಳ್ಳಲಿಕ್ಕೆ ಆಗಬಹುದು!"

* * * *

"ಕಮಲಾಂಬಿಕೆಯು ಶಾಂತಿಕುಟೀರಕ್ಕೆ ಆಗಾಗ ಹೋಗುತ್ತಿರುವಳಂತಲ್ಲ! ಏತಕ್ಕೆ ಹೋಗುತ್ತಿರಬಹುದು? .. ನಿನ್ನೆಯದಿನ ರತ್ನಾಂಬಿಕೆ ಹೇಳಿದಳಲ್ಲವೇ – 'ರಾಜಶೇಖರನೊಂದಿಗೆ ಕಮಲಾಂಬಿಕೆಯದು ಸಲುಗೆ ಹೆಚ್ಚು' – ಎಂದು! ಹೆಂಗುಸಿನೊಡನೆ ಗಂಡಸಿನ – ಅದರಲ್ಲಿಯೂ ಚೆಲುವೆಯಾದ ತರುಣಿಯೊಡನೆ ಚೆಲುವನಾದ ತರುಣನ ಸಲುಗೆಯೆಂದರೆ ಜನರು ಇದರ ಅರ್ಥವನ್ನು ಏನೆಂದು ಮಾಡಿಕೊಳ್ಳಬೇಕು..? ಶಾಂತಂ ಪಾಪಂ! ಅಯ್ಯೋ! ಅಣ್ಣಾಜಿಯವರ ಶುಭ್ರಚರಿತ್ರದಲ್ಲಿಯೂ ಕೊಳೆಯ ಸಂದೇಹವೇ ನನಗೆ? .. ಆದರೆ.. ಹೆಣ್ಣಿನ ವಿಷಯ; ಯಾರ ಹೃದಯವು ಹೇಗೋ ಎಂಬುದರ ವಿಷಯದಲ್ಲಿ ಸಂದೇಹವುಂಟಾಗುವುದು ಸಹಜ! ಎಂತೆಂತಹ ತಪಸ್ವಿಗಳನ್ನೂ ಯೋಗಿಗಳನ್ನೂ ಮಣ್ಣುಮುಕ್ಕಿಸಲಿಕ್ಕೆ ಹಚ್ಚಿದೆ ಈ ಹೆಣ್ಣಿನ ಹುಚ್ಚು!......"

ಥಟ್ಟನೆ ಈಶ್ವರನಾಯಕನು ಬಂದುದು ಪೆದ್ದರಾಯನಿಗೆ ತಿಳಿಯಿತು. ಸ್ವಾಗತ-ಸತ್ಕಾರಗಳಾದುವು. ಆಸನದಲ್ಲಿ ಕುಳಿತುಕೊಂಡು ಈಶ್ವರನಾಯಕನು – ಸತ್ಯವೊಂದನ್ನು ಕಂಡುಹಿಡಿದಿದ್ದವರಂತಹ ಉತ್ಸಾಹದ ಧ್ವನಿಯಲ್ಲಿ–ಮಾತಿಗೆ ಮೊದಲುಮಾಡಿದನು.

"ಪೆದ್ದಣ್ಣಾ! ಲೋಕವೆಲ್ಲವೂ ಕಳ್ಳರ ಸಂತೆ! ಮೇಲೆ ಮಾತ್ರ ಸಾಧುಗಳ ವೇಷ!"

"ಈಗೇನಾಯಿತು ಈಶ್ವರಾ!"

" ಇನ್ನೇನಾಗಬೇಕು ? ಹಸುವಿನ ಮುಖದ ಹುಲಿಗಳೆಂದರೆ ಹೇಗಿರುತ್ತವೆಯೆಂಬುದು ಗೊತ್ತಾದಂತಾಯಿತು. "

" ಅದುದಾದರೂ ಏನು ? ಹೇಳಬಾರದೆ ?"

" ನೋಡಿ; ಕಮಲಾಂಬಿಕೆಯನ್ನು ನಿಮಗೆ ಕೊಡುವ ವಿಷಯವನ್ನು ಮಾತನಾಡಲಿಕ್ಕೆಂದು, ನಿನ್ನೆಯ ಇಳಿಹೊತ್ತಿನಲ್ಲಿ ನಾನು ನರಸಿಂಹನಾಯಕರಲ್ಲಿಗೆ ಹೋಗಿದ್ದೆ. '

"ನನಗೆ ಈ ಮಾತನ್ನು ತಿಳಿಸದೆ ನಿನ್ನಷ್ಟಕ್ಕೆ ನೀನೇ ಹೋಗಿದ್ದೆಯೇನು?"

" ಅಹುದು ! ಮಿತ್ರನ ಕಾರ್ಯ – ಅದರಲ್ಲಿಯೂ–ದೊರೆಗಳ ಕಾರ್ಯ ! ಅದಕ್ಕಾಗಿ ಹಿಂದೆಮುಂದೆ ನೋಡುತ್ತ ಕುಳಿತುಬಿಟ್ಟರೆ ಏನಾಗುವುದು ? ಎಂತಲೆ ನಿಮಗೆ ತಿಳಿಸದೆಯೆ ಆ ಕಾರ್ಯವನ್ನು ಮಾಡಿಕೊಂಡು ಬರಬೇಕೆಂದು ಹೋಗಿದ್ದೆ. "

" ಹೋಗಿದ್ದೆ . . ಸರಿ ! ಮುಂದೇನಾಯಿತು ? ಕುತೂಹಲಭಾವದಿಂದ ಪೆದ್ದರಾಯನು ಕೇಳಿದ."

" ನೋಡಿ: ನಾನು ಮೊದಲಿನಿಂದಲೂ ನರಸಿಂಹನಾಯಕರನ್ನು ನನ್ನ ಕಂಕುಳಲ್ಲಿ ಹಾಕಿಕೊಂಡು ಬಿಟ್ಟಿದ್ದೇನೆ. ಈಗಂತೂ ತೀರ ಬಳಿಯವನಾಗಿ ಮಾತನಾಡಿ, ಅವರ ಅಂತರಂಗವನ್ನೆಲ್ಲ ಚೆನ್ನಾಗಿ ಅರಿತುಕೊಂಡುಬಂದೆ. "

" ಏನಿದೆ ಅವರ ಅಂತರಂಗ ? "

" ಇನ್ನೇನು ಇರಬೇಕು ! ನಾನು ಮೊದಲೇ ಹೇಳಿದೆನಲ್ಲವೇ ? – ಎಲ್ಲವೂ ಕಳ್ಳರ ಸಂತೆಯೆಂದು ! "

" ಏನು ? ಆಯಿತಾದರೂ ಏನು ಈಶ್ವರಾ ? " ಈಗ ಪೆದ್ದರಾಯನಿಗೆ ತಡೆಯದಷ್ಟು ಆತುರವುಂಟಾಯಿತು. ಈಶ್ವರನು ಮೆಲ್ಲಗೆ ಹೇಳಿದ.

" ತುಳುವ ನರಸಿಂಹನಿಗೆ ಕಮಲಾಂಬಿಕೆಯನ್ನು ಕೊಡಬೇಕೆಂದು ಗೊತ್ತಾಗಿದ್ದ ಮಾತು, ಸಂಪೂರ್ಣವಾಗಿ ಸುಳ್ಳು ! "

ಆಶೆ-ಆತುರ-ಆನಂದದ ಭರದಲ್ಲಿ ಪೆದ್ದರಾಯನು ಒಮ್ಮೆಲೆ ಕೇಳಿದನು.

" ಏನು ? ಸುಳ್ಳೇನು ಆ ಮಾತು ? ಹಾಗಾದರೆ ಕಮಲಾಂಬಿಕೆ ನನಗೆ ಸಿಕ್ಕುವಳೇ ? ನನ್ನ ಕಮಲಾಂಬಿಕೆ ನಿಜವಾಗಿಯೂ ನನ್ನವಳಾಗುವಳೇ ? "

" ನಿಮಗೊಂದು ಹುಚ್ಚು ಪೆದ್ದಣ್ಣಾ ! ಅವರ ವಿಚಾರಪರಂಪರೆಯು

ನಿಮಗೆ ಗೊತ್ತಿಲ್ಲ!"

ಕೂಡಲೆ ಪೆಚ್ಚುಬಿದ್ದ ಮೊಗದವನಾಗಿ, ಕುಗ್ಗಿದ ಕಂಠದಲ್ಲಿ ರಾಯಸು ಕೇಳಿದನು.

"ಹಾಗಾದರೆ ಏನು ಸಂಗತಿ?"

"ನರಸಿಂಹನಾಯಕನು ಎಂತಹ ಪಾತಾಳಯಂತ್ರಿಯಿದ್ದಾನೆಂಬುದು ನಿಮಗೆ ಅರಿಯದ ವಿಷಯವಲ್ಲ! ನೀವು ಸಿಂಹಾಸನವನ್ನು ಏರಲಿರುವುದು ಆತನಿಗೆ ಇಷ್ಟವೇ ಇಲ್ಲ."

"ಹಾಗಾದರೆ..! ಯಾರು ಏರಬೇಕೆಂದಿದೆ ಆತನ ಇಷ್ಟ?"

"ಇನ್ನು ಯಾರು? ಆತನದು ಪೂರ್ಣ ಪಕ್ಷಪಾತವು ರಾಜಶೇಖರನಲ್ಲಿ! ಆ ಸೋಗಿನ ಸಾಧುವೇ ಸಿಂಹಾಸನವನ್ನೇರಬೇಕೆಂದು ಅವನ ಅಂತರಂಗದ ಅಪೇಕ್ಷೆ!"

"ಅಣ್ಣಾಜಿಯವರು ಖಂಡಿತವಾಗಿ ನಿರಾಕರಿಸಿದ ಮೇಲೆಯೇ ಅಲ್ಲವೇ ನಾನು ದೊರೆಯಾಗಲಿಕ್ಕೆ ಸಮ್ಮತಿಸಿದುದು?"

"ಅದೇನೋ ಸರಿಯಾದುದು! ಆದರೆ ರಾಜಶೇಖರನು ದೊರೆ-ಯಾಗಲಿಕ್ಕೆ ಸಮ್ಮತಿಸದಿದ್ದಲ್ಲಿ, ನರಸಿಂಹನಾಯಕನು ಆತನಿಗೆ ಕಮಲಾಂಬಿಕೆ-ಯನ್ನು ಕೊಡುವುದಿಲ್ಲವಂತೆ!"

"ಏನು? ಆತನಿಗೆ ಕಮಲಾಂಬಿಕೆಯನ್ನು ಕೊಡುವುದಿಲ್ಲವಂತೆ?"

"ಅಹುದು ಪ್ರಭುವೇ! ನಿಮಗೆ ಒಳಗಿನದೆಲ್ಲ ಏನು ಗೊತ್ತು? ರಾಜಶೇಖರನು ಕಮಲಾಂಬಿಕೆಯನ್ನು ಪ್ರೀತಿಸುತ್ತಾನಂತೆ! ಕಮಲಾಂಬಿಕೆ ಕೂಡ ಆಗಾಗ ಶಾಂತಿಕುಟೀರಕ್ಕೆ ಹೋಗಿಬರುತ್ತಿರುತ್ತಾಳಂತೆ!"

ಪೆದ್ದರಾಯನ ಎದೆಗೆ ಸಿಡಿಲುಬಡಿದಂತಾಯಿತು. ಕಣ್ಣಿಗೆ ಕಾವಳ ಮುಸುಕಿದಂತಾಯಿತು. ಕಿವಿಯಲ್ಲಿ 'ಭಂವ್' ಎಂಬ ಧ್ವನಿಯು ಕೇಳ ಲಾರಂಭಿಸಿತು. ಬಾಯೆಲ್ಲ ಒಣಗಿಹೋಗಿ ನಾಲಗೆಯು ಅಂಟುಅಂಟಾಗಿ ಹೋಯಿತು. ಬಾಯಿಂದ ಬೇಗನೆ ಮಾತುಗಳೆ ಹೊರಡಲೊಲ್ಲವು. ತೊದಲು ತಿರುವ ನುಡಿಯಲ್ಲಿ ಕೇಳಿದನು.

"ಈಶ್ವರಾ! ನೀನು ಸುಳ್ಳುಸುಳ್ಳೆ ಏನನಾದರೂ ಹುಟ್ಟಿಸಿಕೊಂಡು ಹೇಳುತ್ತಿಲ್ಲವಷ್ಟೇ?"

"ನನ್ನ ಸ್ವಭಾವದ ಪರಿಚಯು ನಿಮಗೆ ಇಂದೆಯೆ ಮೊದಲನೆಯದಲ್ಲ ವಷ್ಟೆ?"

"ನಿನ್ನ ಮಾತುಗಳನ್ನು ನಂಬಬೇಕೇ ನಾನು?"

"ಈಗ ಸೂರ್ಯನಿದ್ದಾನೆಂದು ನಾನು ಹೇಳಿದರೆ ನಂಬುತ್ತೀರೋ ಇಲ್ಲವೋ ನೀವು?"

ಪೆದ್ದರಾಯನ ಆಗಿನ ರೋಷದ ಪರಿಣಾಮವು, ಆತನ ಕಚ್ಚಿಸಿಕೊಂಡ ಕೆಳದುಟಿಯ ಮೇಲೆ ಆಯಿತು; ಮುಷ್ಟಿಯಿಂದ ಚಚ್ಚಿಸಿಕೊಂಡ ಮುಂದಲೆಯ ಮೇಲೆ ಆಯಿತು. ಈಶ್ವರನಾಯಕನು ಮತ್ತೆ ಹೇಳಿದ.

"ನರಸಿಂಹನಾಯಕರ ಮಾತಿಗೆ ರಾಜಶೇಖರನು ತಲೆದೂಗುತ್ತಲಿದ್ದಾನೆಂಬುದೂ ನನಗೆ ಗೊತ್ತಾಗಿದೆ. ಹೆಣ್ಣಿನ ಆಶೆ ಕೆಟ್ಟದು ಪೆದ್ದಣ್ಣಾ!"

ರೋಷ–ಅಭಿಮಾನಗಳಿಂದ ತಲೆ ಅಲ್ಲಾಡಿಸುತ್ತಿದ್ದ ಪೆದ್ದರಾಯನ ಮುಖದಿಂದ ಉರಿಯ ನುಡಿಯೊಂದು ಹೊರಟಿತು.

"ಆಗಲಿ! ನರಸಿಂಹನಾಯಕನನ್ನು ಒಂದು ಸಲ ಕೊನೆಯ ವರೆಗೆ ಪರೀಕ್ಷಿಸಿ ಬಿಡುತ್ತೇನೆ. ಕಮಲಾಂಬಿಕೆಯನ್ನು ನನಗೆ ಕೊಟ್ಟೇ ತೀರಬೇಕೆಂದು, ಈಗಲೆ ಆತನ ಕಡೆಗೆ ಓಲೆಯೊಂದನ್ನು ಬರೆದು ಕಳುಹಿಸುತ್ತೇನೆ."

ಗಾಬರಿಯಿಂದ ಹುಚ್ಚುಹುಚ್ಚಾದ ಮುಖದಿಂದ ಈಶ್ವರನಾಯಕನು ಹೇಳಿದ.

"ಉಳಿದ ಮಾತುಗಳಾವುವನ್ನೂ ಅದರಲ್ಲಿ ಬರೆಯಬೇಡಿ! ನನ್ನ ಮಾತನ್ನು ಕೇಳಿ! ನರಸಿಂಹನಾಯಕನ ಕಡೆಯಿಂದ, ನಾನು ಇನ್ನೂ ಎಷ್ಟೆಷ್ಟೋ ಒಳಮಾತುಗಳನ್ನು ಕೆದರಿ ಕೇಳಿ ತಿಳಿದುಕೊಳ್ಳಬೇಕಾಗಿದೆ. ನನ್ನ ಮೇಲೆ ಆತನು ಸಂಶಯತಳೆದುಕೊಳ್ಳುವಂತೆ ಮಾಡಿದರೆ ಕೆಲಸವೆಲ್ಲ ಕೆಟ್ಟುಹೋದೀತು. ಪೆದ್ದಣ್ಣಾ! ನಿಮ್ಮ ಹಿತಸಾಧನೆಯನ್ನು ನನ್ನ ಕರ್ತವ್ಯವೆಂದು ನಾನು ನಿರ್ಣಯಿಸಿ ಬಿಟ್ಟಿದ್ದೇನೆ. ಈಗ ನೀವು ನರಸಿಂಹನಾಯಕನಿಗೆ ಹೀಗೆ ಬರೆದು ತಿಳುಹಿಸಿ! 'ಈಶ್ವರನಾಯಕನು ನಿಮ್ಮ ಅರಿಕೆಯನ್ನು ತಿಳುಹಿಸಿದ. ಕಮಲಾಂಬಿಕೆಯನ್ನು ತುಳುವನರಸಿಂಹನಿಗೆ ಕೊಡಬೇಕೆಂದಿದ್ದ ಸಂಕಲ್ಪವೇನೂ ಬ್ರಹ್ಮಸಂಕಲ್ಪವಲ್ಲ! ಆ ಸಂಕಲ್ಪವನ್ನು ನನಗಾಗಿ ಸುಳ್ಳು ಮಾಡಲಿಕ್ಕೇ ಬೇಕು! ಕಮಲಾಂಬಿಕೆಯನ್ನು ನನಗೆ ಕೊಡಲೇಬೇಕು'

ಎಂದಿಷ್ಟು ಮಾತ್ರ ಬರೆದುಬಿಡಿ! ಮುಂದೆ ಏನಾಗುವುದೆಂಬುದನ್ನು ನೋಡೋಣವೆಂತೆ! ಪೆದ್ದಣ್ಣಾ! ನಿಮ್ಮ ವಿರೋಧಿಗಳನ್ನು ಕಂಡುಹಿಡಿಯ ಬೇಕಾದುದನ್ನು ನನ್ನ ಮುಖ್ಯಕರ್ತವ್ಯವೆಂದು ನಾನು ಎಣಿಸಿಬಿಟ್ಟಿದ್ದೇನೆ. ಅದಕ್ಕಾಗಿ ಎಡೆಬಿಡದೆ ಹೆಣಗುತ್ತಿರುವುದೇ ನನ್ನ ಕೆಲಸ."

ಪೆದ್ದರಾಯನು ಈಶ್ವರನಾಯಕನ ಮಾತಿನಂತೆಯೆ – ತಾನೆ – ನರಸಿಂಹ ನಾಯಕನಿಗೆ ಓಲೆಯನ್ನು ಬರೆಯಲು ತೊಡಗಿದ. ಅರ್ಧ ಓಲೆಯನ್ನು ಬರೆದು ಆಗಿರಬಹುದು; ಆಗಲೆ ಬಾಗಿಲಾಳು ಒಳಕ್ಕೆ ಬಂದು ಹೇಳಿದನು.

"ಅಣ್ಣಾಜಿಯವರ ಕಡೆಯಿಂದ ಚಿಕ್ಕಣ್ಣ ಬಂದಿದ್ದಾನೆ."

"ಏನು?" ಎಂದು ಈಶ್ವರನಾಯಕ ಪೆದ್ದಣ್ಣ ಇಬ್ಬರೂ ಒಮ್ಮೆಲೆ ಕೇಳಿದರು. ಕೆಣಕುವ ಕಣ್ಣೋಟಗಳಿಂದ ಒಬ್ಬರನ್ನೊಬ್ಬರು ಒಂದು ನಿಮಿಷ ನೋಡಿದರು. ಬಳಿಕ ಪೆದ್ದರಾಯನು ಬಾಗಿಲಾಳಿಗೆ ಹೇಳಿದನು.

"ಹೋಗು! ಇಲ್ಲಿಗೆ ಕಳುಹಿಸು ಆತನನ್ನು!"

ಬಾಗಿಲಾಳು ಹೊರಕ್ಕೆ ಹೋದ ಒಂದೆರಡು ನಿಮಿಷಗಳಲ್ಲಿಯೆ ರಾಜ ಶೇಖರನ ವ್ಯಾಗಾಪಿನವನಾದ ಚಿಕ್ಕಣ್ಣನು ಬಂದು, ಬಗ್ಗಿ ನಮಸ್ಕರಿಸಿ ಹೇಳಿದನು.

"ಅಣ್ಣಾಜಿಯವರು ತಮಗೆ ಹೇಳಿದ್ದಾರೆ; ಇಂದಿನ ಇಳಿಯಹೊತ್ತಿನ ವೇಳೆಯಲ್ಲಿ, ತಾವು ಅಲ್ಲಿಗೆ ಬಂದೆ ಬರಬೇಕೆಂತೆ!"

ಪೆದ್ದರಾಯನು ನಸುವೇಳೆ ಏನನೋ ವಿಚಾರಿಸುತ್ತಿರುವಂತೆ ಕುಳಿ-ತಿದ್ದು, ಕೊನೆಗೆ ಸ್ವಲ್ಪ ಉಕ್ಕುತ್ತಿರುವ ದನಿಯಲ್ಲಿಯೆ ಹೇಳಿದನು.

"ಆಗಲಿ! ಅಣ್ಣಾಜಿಗೆ ತಿಳುಹಿಸು · · ನಾನು ಬರುತ್ತೇನೆಂಬುದನ್ನು।"

ಪೆದ್ದರಾಯನ ಬಿರುದನಿಯು ಚಿಕ್ಕಣ್ಣನ ಎದೆಯನ್ನು ಅಲುಗಿಸಿತು. 'ದೊರೆಯಾಗಬೇಕಾದವರು ಹೀಗೆಯೆ ಮಾತನಾಡಬೇಕೋ ಏನೋ।' ಎಂದು ಮನಮನದಲ್ಲಿಯೆ ನುಡಿದುಕೊಳ್ಳುತ್ತ – ಮೆಲ್ಲಗೆ ಅಡಿಯಿಡುತ್ತ – ಅಲ್ಲಿಂದ ಹೊರಟುಬಿಟ್ಟನು.

ಬಳಿಕ ಪೆದ್ದರಾಯನು ಪತ್ರವನ್ನು ಬರೆದು ಮುಗಿಸಿದ. ಈಶ್ವರನಾಯಕ ನೆದುರು ಗಟ್ಟಿಯಾಗಿ ಓದಿ ತೋರಿಸಿದ. ಈಶ್ವರನಾಯಕನೂ ಇರಲೆಂದು ಒಪ್ಪಿಗೆ ಕೊಟ್ಟು ಮುಂದೆ ಮಾತನಾಡಿದ.

" ಇಲ್ಲಿ ನೋಡಿ ಪೆದ್ದಣ್ಣಾ! ರಾಜಶೇಖರನು ನಿಮ್ಮನ್ನು ಏತಕ್ಕಾಗಿ ಕರೆಯಿಸಿರಬಹುದೆಂಬುದು ತಿಳಿಯಿತೇನು? ನೀವು ಕಮಲಾಂಬಿಕೆಯನ್ನು ಅಪೇಕ್ಷಿಸುತ್ತಿದ್ದ ಸಂಗತಿ ನರಸಿಂಹನಾಯಕನಿಂದ ಆತನಿಗೆ ಗೊತ್ತಾಗಿದ್ದೀತು. ಎಂತಲೇ ಈಗ ನಿಮ್ಮನ್ನು ಕರೆಯಿಸಿದ್ದಾನೆ. ಬೇಕಾಗಿದ್ದರೆ ನನ್ನ ಮಾತನ್ನು ಪರೀಕ್ಷೆ ಮಾಡಿ ನೋಡಿರಿ! ಕಮಲಾಂಬಿಕೆಯ ಅಪೇಕ್ಷೆಯನ್ನು ಬಿಡಿರೆಂದು ಅವನು ನಿಮಗೆ ಉಪದೇಶ ಮಾಡುತ್ತಾನೋ ಇಲ್ಲವೋ ನೋಡಿ!"

" ಆಗಲಿ। ಆತ ಹಾಗೆ ಉಪದೇಶವನ್ನಾದರೂ ಮಾಡಲಿ। ಆಗ ಅಣ್ಣಾಜಿಗೆ ಚೆನ್ನಾಗಿ ಹೇಳಿಕೊಡುತ್ತೇನೆ.''

ಹೆದರಿಕೆಯ ಧ್ವನಿಯಲ್ಲಿ ಈಶ್ವರನಾಯಕನು ಹೇಳಿದ.

" ನಮಗೆ ಗೊತ್ತಾಗಿರುವ ಮಾತುಗಳನ್ನು ಮಾತ್ರ ಈಗಲೆ ಹೊರಕ್ಕೆ ಹಾಕಬೇಡಿ! ನಮ್ಮ ಕೆಲಸವೆಲ್ಲವೂ ಅದರಿಂದ ಕೆಟ್ಟುಹೋದೀತು!"

" ನೀನು ಅದರ ಚಿಂತೆಯನ್ನು ಬಿಟ್ಟುಬಿಡು ಈಶ್ವರಾ!"

ಈಶ್ವರನಾಯಕನು ಕೃತಾರ್ಥಭಾವದ ಕಿರುನಗೆಯೊಂದಿಗೆ ಹೊರಟು ನಡೆದ. ಆಗ ಆತನ ಎದೆಯು ಹಿಗ್ಗಿ ನಿಂತಿದ್ದರೂ ಯಾವುದೋ ಹೆದರಿಕೆಯಿಂದ ಒಳಗೊಳಗೆಯೆ ದಡದಡಿಸುತ್ತಿದ್ದಿತು.

---

## ೧೩ನೆಯ ಪರಿಚ್ಛೇದ

ನಿನ್ನೆಯ ರಾತ್ರಿಯೆಲ್ಲವೂ ರಾಜಶೇಖರನಿಗೆ ನಿದ್ದೆಯಿರಲಿಲ್ಲ; ಆದರೂ ದಿನದಂತೆಯೆ ಅರುಣೋದಯಕ್ಕೆ ಮೊದಲೆ ಹಾಸಿಗೆಯಿಂದ ಎದ್ದ. ಹೃದಯವನ್ನು ಒಂದುಬಗೆಯ ಔದಾಸೀನ್ಯವು ತಿಕ್ಕಿಮುಕ್ಕುತ್ತಿದ್ದಿತಾದರೂ ಯಾವುದಕ್ಕೂ ಚ್ಯುತಿಯಿಲ್ಲದಂತೆ ಬೆಳಗಿನ ನಿಯಮಗಳೆಲ್ಲವನ್ನೂ ತೀರಿಸಿದ. ಅನಾಥನಿಲಯದ ಕಡೆಗೆ ಹೋಗಿದ್ದಾಗ ನಾರಾಯಣ ಪಂಡಿತರು ಅಲ್ಲಿ ಇಲ್ಲದುದು ಗೊತ್ತಾಯಿತು. 'ಎಲ್ಲಿಗೆ ಹೋಗಿದ್ದಾರೆ?' ಎಂದು ಕೇಳಿದಾಗ ನಿಲಯದ ಕಾರ್ಯಕರ್ತರೊಬ್ಬರು 'ನಿನ್ನೆಯ ಸಾಯಂಕಾಲ ನರಸಿಂಹನಾಯಕರ ಕಡೆಯಿಂದ ಕರೆಬಂದಿದ್ದಿತು; ಆಗ ಹೋಗಿದ್ದವರು ಇದುವರೆಗೂ ಬಂದಿಲ್ಲ.! ಎಂದು ಹೇಳಿದರು. ಕೇಳಿದೊಡನೆಯೆ 'ಈಗೇತಕ್ಕಾಗಿ ಕರೆಯಿಸಿಕೊಂಡಿರ-

ಬಹುದು?' ಎಂದು ರಾಜಶೇಖರನಿಗೆ ಎನಿಸಿತು. ಮತ್ತೆ ತನ್ನೊಳಗೆ ತಾನೆ ನುಡಿದುಕೊಂಡ: 'ರಾಜ್ಯಾಭಿಷೇಕದ ದಿನ ತೀರ ಸಮೀಪಕ್ಕೆ ಬಂದಿದೆ; ಪಂಡಿತರೊಂದಿಗೆ ಏನನಾದರೂ ವಿಚಾರವಿನಿಮಯ ಮಾಡಬೇಕಾಗಿ ಇರಬಹುದು····!' ಎಂದು.

ರಾಜಶೇಖರನು ನಿಲಯದಲ್ಲೆಲ್ಲ ತಿರುಗಾಡಿ ನೋಡಿದ. ಅಲ್ಲಿದ್ದ ದೀನಾನಾಥರನ್ನೆಲ್ಲ ತಂದೆಯ ಕಲ್ಲುಸಕ್ಕರೆಯಂತಹ ಪ್ರೀತಿಯಿಂದ, ತಾಯಿಯ ದ್ರಾಕ್ಷೆಯಂತಹ ಮಧುರಮಮತೆಯಿಂದ, ಅಣ್ಣತಮ್ಮಂದಿರ ಸಹಜವಾದ ಸಲುಗೆಯಿಂದ–ಮಾತನಾಡಿಸಿದ. ತೋಟಗಾರರ ಮಕ್ಕಳನ್ನು ಬರೆದೋದಿಸುವುದಕ್ಕಾಗಿ ಅಲ್ಲಿಯೆ ಇರಿಸಿದ್ದ ಪಾಠಶಾಲೆಯನ್ನು ಕಂಡು, ಅಲ್ಲಿಯ 'ಕಸೆಗೋಲ ಅಣ್ಣಂದಿರ' ಕುಶಲಸಮಾಚಾರವನ್ನು ಕೇಳಿದ. 'ಅಣ್ಣಾಜಿ! ಅಣ್ಣಾಜಿ!' ಎಂದು ಕೂಗುತ್ತ ಓಡಿಬಂದು, ತನ್ನನ್ನು ಬಳಸಿ ನಿಂತ ಓದುವ ಮಕ್ಕಳನ್ನು ಒಬ್ಬೊಬ್ಬರನ್ನಾಗಿ ಕರೆದು, ವಾತ್ಸಲ್ಯದಿಂದ ಮೈದಡಹಿ, ಮುದ್ದಿನ ಮಾತುಗಳಿಂದ ಅವರ ಮನಸ್ಸನ್ನು ತಣಿಸಿದ. ಬಳಿಕ ಶಾಂತಿಕುಟೀರದತ್ತ ಮರಳಿದ.

ಮರಳಿ ಬಂದು ನೋಡುವುದರಲ್ಲಿಯೆ – ಕುಟೀರದ ಓಲಗಸಾಲೆಯಲ್ಲಿ–ತನ್ನ ದಾರಿಯನ್ನು ಕಾಯುತ್ತ ಕುಳಿತಿದ್ದ ನಾರಾಯಣಪಂಡಿತರನ್ನು ರಾಜಶೇಖರನು ಕಂಡ. ಆಗ ಪಂಡಿತರ ಮುಖದಲ್ಲಿ ಅಷ್ಟೊಂದು ಉತ್ಸಾಹವು ಕಾಣುತ್ತಿರಲಿಲ್ಲ. ರಾಜಶೇಖರನು ಬಂದೊಡನೆಯೆ ಪಂಡಿತರು ಎದ್ದು, ಆತನನ್ನು ವಿಶ್ರಾಂತಿಭವನದೊಳಕ್ಕೆ ಕರೆದುಕೊಂಡುಹೋದರು. ಅಲ್ಲಿ ಗುಣುಗುಣು ಮಾತುಗಳಲ್ಲಿ ಅರ್ಧಗಂಟೆಯ ವರೆಗೂ ಏನೇನನೊ ಮಾತನಾಡುತ್ತಿದ್ದರು. ಮಾತನ್ನು ಮುಗಿಸಿ ಪಂಡಿತರು ತಮ್ಮ ನಿವಾಸದ ಕಡೆಗೆ ಹೊರಟಿರುವಾಗಲೆ ರಾಜಶೇಖರನು ಚಿಕ್ಕಣ್ಣನನ್ನು ಕೂಗಿ ಹೇಳಿದ.

"ಚಿಕ್ಕಣ್ಣಾ! ಇಂದು ಇಳಿಹೊತ್ತಿನಲ್ಲಿ ಇಲ್ಲಿಗೆ ಬಂದುಹೋಗಬೇಕೆಂದು ಪೆದ್ದರಾಯನಿಗೆ ಹೇಳಿಬಂದುಬಿಡು!"

ಹಿಂದಣ ಪ್ರಕರಣದಲ್ಲಿ ಪೆದ್ದರಾಯ–ಈಶ್ವರನಾಯಕ ಮಾತನಾಡುತ್ತ ಕುಳಿತಿದ್ದಾಗ ಚಿಕ್ಕಣ್ಣನು ಬಂದು ತಿಳಿಯಿಸಿ ಹೋದುದು ರಾಜಶೇಖರನ ಈ ಕರೆಹದ ಸಂಗತಿಯನ್ನೆ.

ಶಾಂತಿಕುಟೀರಕ್ಕೆ ಬಂದಾಗ ಪೆದ್ದರಾಯನ ಮುಖದಲ್ಲಿ ಗೆಲುವಿನ ಗುರುತೇ ಕಾಣುತ್ತಿರಲಿಲ್ಲ; ರೋಷ-ಈರ್ಷೆಗಳು-ಆಗಾಗ ಗಂಟುಗೊಳ್ಳು-ತ್ತಿದ್ದ ಹುಬ್ಬುಹಣೆಗಳನ್ನು ಏರಿಸಿಂತು – ಮುಖ ತೋರಿಸಿ ತೋರಿಸಿ ಅಡಗು-ತ್ತಿದ್ದುವು. ಬಂದವನೆ ಹೊರಗೆಯೆ ಇದ್ದ ಚಿಕ್ಕಣ್ಣನನ್ನು ಕೇಳಿದನು.

"ಅಣ್ಣಾಜಿಯವರು ಎಲ್ಲಿ?"

ಚಿಕ್ಕಣ್ಣನು ವಿನಯದಿಂದ ಅರಿಕೆಮಾಡಿದ.

"ವಿಶ್ರಾಂತಿಭವನದಲ್ಲಿಯೆ ಇದ್ದಾರೆ. ಬುದ್ಧಿಗಳವರು ಬಂದರೆ, ಅಲ್ಲಿಗೇ ಕಳುಹಿಸಬೇಕೆಂದು ನನಗೆ ಅಪ್ಪಣೆ ಮಾಡಿದ್ದಾರೆ."

ಮಾತನೇನೂ ಆಡದೆ ಪೆದ್ದರಾಯನು – ಗಂಭೀರವಾಗಿ ಅಡಿಗಳನ್ನು ಇಡುತ್ತ – ವಿಶ್ರಾಂತಿಭವನದತ್ತ ನಡೆದನು. ಈ ಮೊದಲು ತಾನೆಂದೂ ಕಾಣದಿದ್ದ ಪೆದ್ದರಾಯನ ಸ್ಥಿತ್ಯಂತರವನ್ನು ಬೆರಗುಗಣ್ಣುಗಳಿಂದ ನೋಡುತ್ತ ಚಿಕ್ಕಣ್ಣ ಕದಲದೆ ನಿಂತಿದ್ದನು.

ಪೆದ್ದರಾಯನು ವಿಶ್ರಾಂತಿಭವನದೊಳಕ್ಕೆ ಕಾಲಿಟ್ಟಾಗ, ರಾಜಶೇಖ-ರನು ಅಂಗೈಗಲ್ಲದವನಾಗಿ, ಯೋಚನೆಯ ಕುರುಡುನೋಟದವನಾಗಿ, ತನ್ನ ಆಸನದಲ್ಲಿ ಕುಳಿತುಕೊಂಡಿದ್ದ. ಆತನು ತಮ್ಮನನ್ನು ಕಂಡೊಡನೆಯೆ ಸ್ನೇಹಸ್ವರದಲ್ಲಿ ಮಾತನಾಡಿದ.

"ಬಾ ಪೆದ್ದಣ್ಣಾ, ಕುಳಿತುಕೊಳ್ಳು!"

ಪೆದ್ದರಾಯನು ಮಾತನೇನೂ ಆಡಲಿಲ್ಲ; ರಾಜಶೇಖರನೊಂದಿಗೆ ಇದು ವರೆಗೆ ತಾನು ನಡೆದುಕೊಳ್ಳುತ್ತಿದ್ದ ವಿನಯಭಾವವನ್ನು ಮೀರಿದವನಾಗಿಯೆ ಆಸನದಲ್ಲಿ ಕುಳಿತುಕೊಂಡ. ರಾಜಶೇಖರನು ಸಹಜವಾದ ಮೆಲುದನಿಯಲ್ಲಿ ಕೇಳಿದನು.

"ಸಮಾರಂಭದ ಸಿದ್ಧತೆಯು ಚೆನ್ನಾಗಿ ನಡೆದಿದೆಯಲ್ಲವೇ?"

"ಹುಂ!" ಹೆಮ್ಮೆಯ ದನಿಯಲ್ಲಿ ಪೆದ್ದರಾಯನಿತ್ತ ಉತ್ತರವಿದು.

"ನಿನ್ನೊಡನೆ ಒಂದು ವಿಷಯ ಮಾತನಾಡಬೇಕಾಗಿದೆ ಪೆದ್ದಣ್ಣಾ!"

"ಅದೇನು?' ಹುಬ್ಬೇರಿಸಿ ಕೇಳಿದ ಪೆದ್ದರಾಯ.

"ನರಸಿಂಹನಾಯಕರು ನಾರಾಯಣ ಪಂಡಿತರ ಮುಖಾಂತರವಾಗಿ ಒಂದು ಮಾತನ್ನು ಹೇಳಿಕಳುಹಿಸಿದ್ದಾರೆ."

ಪೆದ್ದರಾಯನು ಮಾತನೇನೂ ಆಡದೆ ಇದ್ದನು. ರಾಜಶೇಖರನೇ ಮೆಲ್ಲಗೆ ಕೇಳಿದನು.

"ನೀನೇನೋ ನರಸಿಂಹನಾಯಕರ ಮಗಳನ್ನು ಮದುವೆಯಾಗಲಿಕ್ಕೆ ಅಪೇಕ್ಷಿಸುತ್ತೀಯಂತೆ! ಅಹುದೇನು?"

"ಅಪೇಕ್ಷಿಸುತ್ತಿರಬಹುದು! ಅದರಲ್ಲಿ ತಪ್ಪೇನಿದೆ?"

"ಅದೇನೋ ಸರಿ! ಮದುವೆಯಾಗದಿದ್ದ ಕನ್ಯೆಯನ್ನು ಯಾರೂ ಅಪೇಕ್ಷಿಸಬಹುದು. ಆದರೆ··!"

"ಆದರೆ ಏನು?"

"ಇನ್ನೇನೂ ಇಲ್ಲ; ಕಮಲಾಂಬಿಕೆಯ ಮದುವೆ ಅರ್ಧಮರ್ಧ ಆಗಿ ಬಿಟ್ಟಂತಿದೆ!"

ಅಣಕದ ದನಿಯಲ್ಲಿ ಪೆದ್ದರಾಯನು ಕೇಳಿದ.

"ಯಾರೊಡನೆ ಆಗಿಬಿಟ್ಟಂತಿದೆ·· ಕಮಲಾಂಬಿಕೆಯ ಅರ್ಧಮರ್ಧ ಮದುವೆ?"

"ತುಳುವ ನರಸಿಂಹನೊಡನೆ!"

"ಇರಬಹುದು; ಸರಿ! ಅರ್ಧಮರ್ಧ ಮದುವೆಯೆಂದರೆ ಸಂಪೂರ್ಣವೇನೂ ಆದಂತಾಗಲಿಲ್ಲವಲ್ಲ!"

"ಹಾಗಲ್ಲ ಪೆದ್ದಣ್ಣಾ! ಕಮಲಾಂಬಿಕೆ–ತುಳುವ ನರಸಿಂಹರು ಒಂದೆ ಮನೆಯಲ್ಲಿ ಬಳೆದವರು. ಎಳೆಯತನದಿಂದಲೂ ಅವರಲ್ಲಿ ಪ್ರೀತಿ ಬಳೆದು ಬಂದಿದೆ!"

"ಬಂದಿದ್ದೀತು ಬಳೆದು! ಅದನ್ನು ತೆಗೆದುಕೊಂಡು ನನಗೆ ಏನು ಮಾಡಬೇಕಾಗಿದೆ?"

ಪೆದ್ದರಾಯನ ಮಾತಿನ ಹೊಸ ಹೊಲಬನ್ನು ಕಂಡು ರಾಜಶೇಖರನಿಗೆ ಆಶ್ಚರ್ಯವಾಯಿತು. ತಮ್ಮನ ಮುಖವನ್ನು ನಿಟ್ಟಿಸಿನೋಡಿದ. ಅಹಂಕಾರ–ಔದ್ಧತ್ಯಗಳು ಅಲ್ಲಿ ನೆಲೆನಿಂತಿದ್ದುವು. ನೋಡಿ ಅವನ ಎದೆ ದಡದಡಿಸಿತು. ಕಣ್ಣೆದುರು–ಅದೇತಕ್ಕೋ–ತಾನು ಕೊಲೆಮಾಡಿದ್ದ ವಿರೂಪಾಕ್ಷರಾಯನ ಮೂರ್ತಿಯು, ಒಮ್ಮೆಲೆ ಬಂದು ಹಾಯ್ದುಹೋಯಿತು. ಮತ್ತೆ ಮೊದಲಿನ ಸ್ನೇಹಸ್ವರದಲ್ಲಿಯೆ ರಾಜಶೇಖರನು ಹೇಳಿದ.

"ಈ ಸಂಬಂಧದ ಅಪೇಕ್ಷೆಯನ್ನು ಬಿಟ್ಟುಬಿಡು ಪೆದ್ದಣ್ಣಾ!"

"ಏನನ್ನಾದರೂ ಉಪದೇಶಿಸಬೇಕಾಗಿದ್ದವರು, ತಮ್ಮ ಅಂತರಂಗದ ಯೋಗ್ಯತೆಯನ್ನು ಚೆನ್ನಾಗಿ ಅರಿತುಕೊಂಡು ಉಪದೇಶಿಸಬೇಕು!"

ರಾಜಶೇಖರನು ಕುತೂಹಲಿಯಾಗಿ ಕೇಳಿದನು.

"ಹೀಗೆಂದರೆ ಏನು ಪೆದ್ದಣ್ಣಾ?"

ಪೆದ್ದರಾಯನು ಬೆಚ್ಚಿಬಿದ್ದವನಂತಾಗಿ, ಆಡಬೇಕಾಗಿದ್ದುದನ್ನು ಬೈತಿಟ್ಟುಕೊಳ್ಳುತ್ತಿರುವ ರೀತಿಯಲ್ಲಿ – ತಡೆದು ತಡೆದು – ಮಾತನಾಡಿದನು.

"ಏನೆಂದರೆ‥? ಇನ್ನೇನು ಹೇಳಬೇಕು‥? ಅಂ‥ ಇಲ್ಲಿ ಕಾಣುತ್ತಿದೆ ಯಲ್ಲ ಮಾಲ್ಯವಂತ! ಅದಕ್ಕೆ 'ಹಿಂದಕ್ಕೆ ಸ್ವಲ್ಪ ಸರಿದು ನಿಲ್ಲು!' ಎಂದು ಹೇಳುವ ಯೋಗ್ಯತೆ ಯಾರಲ್ಲಿದೆ? ತುಂಗಭದ್ರೆಗೆ 'ನೀನು ಮೇಲುಗಡೆಗೆ ಮುಖಮಾಡಿ ಹರಿಯುತ್ತಿರಬೇಕು!' ಎಂದು ಆಜ್ಞೆಮಾಡುವ ಸಾಮರ್ಥ್ಯ ಯಾರಿಗೆ ಇದೆ?"

"ಬೆಟ್ಟ–ಹೊಳೆಗಳಂತೆ ಮನುಷ್ಯರು ನಿರ್ಜೀವರಲ್ಲ; ನಿರ್ಬುದ್ಧರಲ್ಲ; ನಿರ್ಹೃದಯರಲ್ಲ! ಇನ್ನೊಂದು ನೋಡು ಪೆದ್ದಣ್ಣಾ! ಬೆಟ್ಟ ನಿಂತಲ್ಲಿ ನಿಂತಿರುವುದಲ್ಲದೆ ಸರಿದಾಡಿ ಇನ್ನೊಬ್ಬರಿಗೆ ತೊಂದರೆ ಕೊಡದು. ಹೊಳೆಯು ತಾನು ಪ್ರವಹಿಸಬೇಕಾದಲ್ಲಿಯೆ ಪ್ರವಹಿಸುವುದಲ್ಲದೆ, ಮೇರೆವಿಾರಿ ನಡೆದು ಬೇರೆಯವರ ಬದುಕನ್ನು ಕೆಡಿಸದು!" ರಾಜಶೇಖರನ ಧ್ವನಿಯಲ್ಲಿ ನಸುವೆ ಬಿರುಸಿದ್ದಿತು. ಪೆದ್ದರಾಯನು ಬಿಗುಹಿನಲ್ಲಿಯೆ ಹೇಳಿದ.

"ಸರಿ! ಹಾಗೂ ಇರಬಹುದು!"

"ನೀನು ಕಮಲಾಂಬಿಕೆಯ ಆಶೆಯನ್ನು ಬಿಟ್ಟುಕೊಡಬೇಕು!"

"ಅದೇತಕ್ಕಾಗಿ ಬಿಟ್ಟುಕೊಡಬೇಕು?"

"ಆಕೆ ನಿನ್ನವಳಲ್ಲವೆಂದು! ಇನ್ನೊಬ್ಬರ ಒಡವೆಯನ್ನು ಬಯಸುವುದು ಅಧರ್ಮವೆಂದು! ಇಷ್ಟೆ ಅಲ್ಲದೆ ನರಸಿಂಹನಾಯಕರ ಮನಸ್ಸನ್ನು ನೋಯಿಸಿ, ಸಾಮ್ರಾಜ್ಯದ ನಿಜವಾದ ಹಿತೈಷಿಯೊಬ್ಬನನ್ನು ಅಸಂತುಷ್ಟನನ್ನಾಗಿ ಮಾಡಬಾರದೆಂದು!"

"ನನಗೆ ಗೊತ್ತಿದೆ ಅಣ್ಣಾಜೀ! ಕಮಲಾಂಬಿಕೆ ಇನ್ನೊಬ್ಬರ ಒಡವೆ ಯಲ್ಲ; ಆಕೆ ನನಗಾಗಿಯೆ – ವಿಜಯನಗರದ ಮಹಾರಾಣಿಯ ಪದಕ್ಕಾಗಿಯೆ

ಹುಟ್ಟಿಬಂದವಳು! ಅಂತಹ ರತ್ನವನ್ನು ತಿಪ್ಪೆಯಲ್ಲಿ ಒಗೆಯಲಿಕ್ಕೆ ನಿಂತಿದ್ದ ನರಸಿಂಹನಾಯಕರಿಗೇ – ಬೇಕಾಗಿದ್ದರೆ– ನೀವು ಉಪದೇಶಮಾಡಿರಿ! ಇನ್ನು, ಸಾಮ್ರಾಜ್ಯದ ಹಿತಾಹಿತಗಳ ಹೊಣೆಗಾರಿಕೆಯು ನನಗೂ ಗೊತ್ತಿದೆಯಲ್ಲವೇ? ಯಾರುಯಾರೊಡನೆ ಹೇಗೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ನಾನೇನೂ ಇನ್ನೊಬ್ಬರಿಂದ ಹೇಳಿಸಿಕೊಳ್ಳಬೇಕಾಗಿಲ್ಲ!"

"ಪೆದ್ದರಾಯಾ! ಮೊದಲಿನಿಂದಲೂ ನಿನ್ನ ಸ್ವಭಾವವನ್ನು ನಾನು ಬಲ್ಲೆ; ಇಲ್ಲದ ಹಟಕ್ಕೆ ಬೀಳುವವನು ನೀನು! ಮನಸ್ಸಿಗೆ ಬಂದುದು ನಡೆದೇ ತೀರಬೇಕೆನ್ನುವವನು! ದೊರೆಯಾಗಲಿರುವವನು ಹೀಗಿದ್ದರೆ ಚೆನ್ನಾಗಿರುವುದಿಲ್ಲ. ಪ್ರಜೆಗಳ ಸಂತೃಪ್ತಿ – ಸಂತುಷ್ಟಿಗಳಿಗಾಗಿ, ತನ್ನ ವೈಯಕ್ತಿಕ ಆಶೆ-ಆಕಾಂಕ್ಷೆಗಳನ್ನು ಹೋಮಿಸುತ್ತಲಿರುವ ದೊರೆಯ ಆಡಳಿತವೆ ಲೋಕಕ್ಕೆ ಬಹುಕಾಲ ಬೇಕಾಗುವುದು. ಅದಿಲ್ಲದೆ ಇದ್ದ ಚಿಕ್ಕಪ್ಪಾಜಿಯ ಆಡಳಿತದ ಪರಿಣಾಮವು ಏನಾಗಿ ಹೋಗಿದೆ· ·ನೋಡುತ್ತೀಯಲ್ಲವೇ? ಆತನ ಕಾಲದಲ್ಲಿ ಎದ್ದಿದ್ದ ಪುಂಡುಬಂಡಾಯಗಳು ರಾಜ್ಯದಲ್ಲಿ ಎಲ್ಲೆಲ್ಲಿಯೂ ತಲೆಯೆತ್ತಿ ನಿಲ್ಲಲು ತೊಡಗಿವೆ. ನೀನೀಗ ಸಾಮ್ರಾಜ್ಯಭಾರವನ್ನು ಕೈಕೊಳ್ಳುವುದೆಂದರೆ, ಪ್ರಜೆಗಳೆಲ್ಲರ ಲಕ್ಷ್ಯವನ್ನು ನಿನ್ನ ಕಡೆಗೆ ತಿರುಗಿಸಿಕೊಳ್ಳಬೇಕಾಗಿದೆ. ಅದಕ್ಕಾಗಿ ನೀನು ತ್ಯಾಗಿಯಾಗಬೇಕು! ವ್ರತಿಯಾಗಬೇಕು! ವಿರಾಗಿಯಾಗಬೇಕು.."

ಪೆದ್ದಣ್ಣ ರಭಸದಿಂದ ನಡುವೆ ಮಾತನಾಡಿದನು.

"ಹಾಂ! ಅಹುದು! ವಿರಾಗಿಯಾಗಬೇಕು! ಸಂನ್ಯಾಸಿಯಾಗಬೇಕು! ಬೂದಿ ಬೊಳೆದುಕೊಳ್ಳಬೇಕು! ಬಿಕ್ಕೆಬೇಡಬೇಕು! ಸರಿ! ಏತಕ್ಕಾಗಿ ಬೇಕು ಇವೆಲ್ಲ ಅಣ್ಣಾಜೀ! ಸಾಮ್ರಾಜ್ಯದಲ್ಲಿ ಸುಖಶಾಂತಿಗಳು ನೆಲಸಿರುವಂತೆ ಮಾಡಲಿಕ್ಕೆ ನನ್ನ ತೋಳುಗಳಲ್ಲಿ ಹರಿಹಿಂಗದ ಬಲವಿದೆ! ಮನಸ್ಸಿನಲ್ಲಿ ಅಖಂಡವಾದ ಛಲವಿದೆ! ನನ್ನ ಕೈಗತ್ತಿ ಜಂಗುತಿಂದು ಮೊಂಡುಗೊಂಡೇನೂ ಹೋಗಿಲ್ಲ! ಅದರಲ್ಲಿ ಇನ್ನೂ ಸಾಕಷ್ಟು ನೀರು ಇದೆ. ನೆತ್ತರು ಕುಡಿಯುವ ಆಶೆ, ಅದರದಿನ್ನೂ ಅಕ್ಷಯವಾಗಿಯೆ ಇದೆ. ಪುಂಡುಬಂಡಾಯಗಳಲ್ಲಿ ಸೇರಿದ್ದವರನ್ನು ಕೊತ್ತುವ ಕೆತ್ತುವ ಸಾಮರ್ಥ್ಯವು ಅದರಲ್ಲಿ ಈಗಲೂ ಅವಿಚ್ಛಿನ್ನವಾಗಿ ಇದೆ. ಅದರ ಎದುರಲ್ಲಿ ಯಾರ ಅಸಂತುಷ್ಟಿ ಅತೃಪ್ತಿಗಳೂ ಏನನೂ ಮಾಡಲಾರವು!"

"ಬರೀ ಶಸ್ತ್ರ–ಶಕ್ತಿಗಳನ್ನು ಅವಲಂಬಿಸಿಕೊಂಡಿದ್ದವನ ಆಧಿಪತ್ಯಕ್ಕೆ ಸ್ಥೈರ್ಯವಿರದು ಪೆದ್ದಣ್ಣಾ! ಅವುಗಳನ್ನು ನಂಬಿದ್ದ ದೊರೆಯ ಮನಸ್ಸಿಗೆ ಯಾವಾಗಲೂ ಹುರುಕುಹತ್ತಿದಂತಿರುವುದು. ಅಂತಹನ ರಾಜ್ಯದಲ್ಲಿ, ಇಲ್ಲದ ವಿದ್ವೇಷ–ವಿದ್ರೋಹಗಳ ಕಿಡಿಗಳು ಅಲ್ಲಲ್ಲಿ ಬಿದ್ದು ಹೊತ್ತಿಕೊಳ್ಳುತ್ತಿದ್ದು, ಅನುಕೂಲ ವಾತಾವರಣಕ್ಕಾಗಿ ದಾರಿಯನ್ನು ಕಾಯುತ್ತಿರುತ್ತವೆ. ಅದು ದೊರೆತೊಡನೆಯೆ ಭಗ್ಗೆಂದು ಉರಿದೆದ್ದು, ಸಾಮ್ರಾಜ್ಯಕ್ಕೆ ಸಾಮ್ರಾಜ್ಯವೆ ಸುಟ್ಟುಹೋದ ಉದಾಹರಣೆಗಳು ಹಲವು ಉಂಟು."

"ಒಬ್ಬೊಬ್ಬರದು ಒಂದೊಂದು ದಾರಿ; ನನ್ನ ದಾರಿ ನನಗೆ, ನಿಮ್ಮ ದಾರಿ ನಿಮಗೆ! ನೀವು ದೊರೆಗಳಾಗಿದ್ದರೆ ಸಾಮ್ರಾಜ್ಯರಥವನ್ನು ನಿಮ್ಮ ದಾರಿಯಲ್ಲಿ ನಡೆಯಿಸಿಕೊಂಡು ಹೋಗಬಹುದಾಗಿದ್ದಿತು; ಈಗ ದೊರೆಯಾಗುವವನು ನಾನು! ನನ್ನ ದಾರಿಯಲ್ಲಿ ಅದನ್ನು ಕರೆದುಕೊಂಡು ಹೋಗುತ್ತೇನೆ."

"ಪಂಪಾಪತಿ ನಿನ್ನ ದಾರಿಯನ್ನು ಸರಳವಾದುದನ್ನಾಗಿ ಮಾಡಲೆಂದು ನನ್ನ ಹೃದಯದ ಆಶೆ. ಅದಕ್ಕೆಂತಲೆ ನಾನು ಹೇಳುತ್ತಿರುವುದು. ಹೇಗಾದರೂ ಮಾಡಿ ಪೆದ್ದಣ್ಣನ ಮನಸ್ಸನ್ನು ತಿರುಗಿಸಬೇಕೆಂದು ನರಸಿಂಹನಾಯಕರು ನನಗೆ ಹೇಳಿಕಳುಹಿಸಿದ್ದಾರೆ. ಸಾಮ್ರಾಜ್ಯಕ್ಕೆ–ನರಸಿಂಹನಾಯಕರಿಂದ–ಈ ಮೊದಲೆ ಆಗಿರುವ, ಇನ್ನು ಮೇಲೆಯೂ ಆಗಬೇಕಾಗಿರುವ ಉಪಕಾರದ ಕಲ್ಪನೆ ನಿನಗೆ ಇದ್ದೆ ಇದೆ."

"ಎಂತಲೆ ಅವರನ್ನು ವಿಜಯನಗರದ ಅರಮನೆಯ ಸಂಬಂಧಿಗಳನ್ನಾಗಿ ಮಾಡಿಕೊಳ್ಳಬೇಕೆಂದಿದ್ದೇನೆ!"

"ಈ ಸಂಬಂಧ ಅವರಿಗೆ ಬೇಕಾಗಿರದಿದ್ದರೆ..!"

"ಅವರಿಗೆ ಬೇಕಾಗಿರದಿದ್ದರೆ.. ನನಗೆ ಬೇಕಾಗಿದೆಯಲ್ಲ! ಎಂತಲೆ ಇಂದೆಯೆ ಅವರಿಗೊಂದು ಓಲೆ ಬರೆದು ಕಳುಹಿಸಿದ್ದೇನೆ: 'ನೀವು ಈ ಸಂಬಂಧವನ್ನು ಒಪ್ಪಲೆಬೇಕು' ಎಂದು"

"ಬಲುಮೆಯ ಪರಿಣಾಮವು ಕಹಿಯಾಗದಿರದು ಪೆದ್ದಣ್ಣಾ!"

"ಅಣ್ಣಾಜೀ! ನಿಮ್ಮ ಈ ಅಭಿಪ್ರಾಯಕ್ಕೆ ಸಂಪೂರ್ಣ ವಿರೋಧಿಯಾದುದು ನನ್ನ ಅಭಿಪ್ರಾಯ. ಬಿರುಸಾದ ಉಕ್ಕಿನಲ್ಲಿ ಇಂಚರವನ್ನು

ಅಪೇಕ್ಷಿಸಿದಲ್ಲಿ ಅದು ಹಾಗೆಯೆ ದೊರೆಯದು. ಅದನ್ನು ಕಾಸಿ ಬಡಿದು, ಹೊಡೆದು, ಕಂಬಚ್ಚಿನಲ್ಲಿ ಹಾಕಿ ಎಳೆದೆಳೆದು ತಂತಿಯನ್ನು ಮಾಡಬೇಕು; ಬಳಿಕ ವೀಣೆಯ ದಂಡಕ್ಕೆ ಬಿಗಿದು ಕಟ್ಟಿ, ಬೆರಳಿನಿಂದ ಮಿಡಿಯಬೇಕು; ಆಗಲೆ ನಮ್ಮ ಕಿವಿಗೆ ಸಂಗೀತದ ಸವಿಯು ದೊರೆಯುವುದು. ಸಿಗುರಿನಿಂದ ಕೂಡಿದ್ದ ಕಬ್ಬು ತನ್ನ ಸಿಹಿರಸವನ್ನು 'ನಿಮ್ಮ ಬಾಯಲ್ಲಿ ಎರೆಯುತ್ತೇನೆ; ಬನ್ನಿ !' ಎಂದು ತಾನೆ ತಾನಾಗಿ ಜನರನ್ನು ಕರೆಯದು. ಅದನ್ನು ಕುಯ್ದು, ಹೆಚ್ಚಿ ಕಚ್ಚಿ ತಿನ್ನಬೇಕು! ಇಲ್ಲದಿದ್ದರೆ ಆಲೆಯ ಬಾಯಿಗೆ ಕೊಟ್ಟು ಗಾಣವಾಡಿಸ ಬೇಕು! ಆಗಲೆ ಅದರ ಸಿಹಿತನವು ನಮಗೆ ಸಿಕ್ಕುವುದು. ಅದುರುಗಳಲ್ಲಿ ಅಡಗಿಕೊಂಡಿದ್ದ ಚಿನ್ನವು, ಪ್ರೀತಿಯಿಂದ ಮುತ್ತಿಟ್ಟು ಕರೆದರೆ ನಮ್ಮ ಕಡೆಗೆ ಬರದು. ಆ ಅದುರುಗಳನ್ನು ಕುಟ್ಟಿ ಹಿಟ್ಟುಮಾಡಿ, ಸುಟ್ಟು ಸುಣ್ಣಮಾಡಿ ದಾಗಲೆ ಚೆಲುವಾದ ಚಿನ್ನವು ನಮ್ಮ ಮೈಯನ್ನು ಅಲಂಕರಿಸುವುದಕ್ಕೆ ಸಜ್ಜುಗೊಂಡು ಬರುವುದು. ಹಿಂಡಿ ಹಿಳಿದಾಗಲೆ ನೊರೆಹಾಲು ದೊರೆಯು ವುದು; ಕೊಂಡು ಮರ್ದಿಸಿದಾಗಲೆ ಗಂಧದ ಕೊರಡು ಕಂಪನ್ನು ಕರೆಯು ವುದು. ಅಣ್ಣಾಜಿ, ದೇವತೆಗಳಿಗೆ ಅಮೃತವು ಸುಮ್ಮನೆ ಸಿಕ್ಕಲಿಲ್ಲ; ಕಡಲನ್ನು ಎಡೆಬಿಡದೆ ಕಡೆಯಬೇಕಾಯಿತಂತೆ, ಗೊತ್ತಿಲ್ಲವೇ ನಿಮಗೆ?"

"ಜಗತ್ತನ್ನು ನೋಡುತ್ತಿದ್ದ ನಿನ್ನ ನೋಟದ ರೀತಿ ವಿಚಿತ್ರವಾಗಿದೆ ಪೆದ್ದಣ್ಣಾ!"

"ಅದೊಂದೂ ನನಗೆ ಗೊತ್ತಿಲ್ಲ; ಕಮಲಾಂಬಿಕೆಯ ವಿಷಯದಲ್ಲಿ ನೀವು ನನಗಿನ್ನು ಏನನೂ ಹೇಳಬೇಡಿ! ನನ್ನ ನಿರ್ಣಯವು ಪೂರ್ತಿಯಾಗಿ ರೂಪುಗೊಂಡು ಬಿಟ್ಟಿದೆ. ಅದನ್ನು ಅಳಿಸಬೇಕೆಂಬ ವ್ಯರ್ಥಪ್ರಯತ್ನದಿಂದ ನೀವು ದಣಿದುಕೊಳ್ಳಬೇಡಿರಿ! ಸರಿ! ನನಗೆ ಮತ್ತೆ ನೂರಾರು ಕೆಲಸ; ಈಗ ನಾನು ಹೊರಡಲೆ ಬೇಕು!"

ಎಂದಿಷ್ಟು ನುಡಿದ ಪೆದ್ದರಾಯನು ಅಣ್ಣಾಜಿಯ ಅಪ್ಪಣೆಯನ್ನೂ ಮನದೆದುರು ತಂದುಕೊಳ್ಳದೆ ದಡದಡನೆಂದು ನಡೆದುಬಿಟ್ಟ. ಶಾಂತಿಕುಟೀರ-ದಿಂದ ಹೊರಬಿದ್ದು ತನ್ನ ಕುದುರೆಯನ್ನೇರಿ, ಕೂಡಲೆ ಹೊರಟುನಡೆದ. ರಾಜಶೇಖರನು ನಿಟ್ಟುಸಿರುಗಳೊಂದಿಗೆ ತನ್ನ ಕಳವಳವನ್ನು ಹೊರಕ್ಕೆ ಹಾಕುತ್ತ – ಎಷ್ಟೋ ವೇಳೆಯ ವರೆಗೆ – ಕುಳಿತಲ್ಲಿಯೆ ಕುಳಿತುಬಿಟ್ಟಿದ್ದ.

ಆಗ ಆತನ ಕರುಳನ್ನು ತುಳಿಯುತ್ತಿದ್ದ ವ್ಯಕ್ತಿಗಳೆಂದರೆ ಎರಡು. ನಿನ್ನೆಯ ನಟ್ಟಿರುಳಲ್ಲಿ ಬಂದು ಮಾತನಾಡಿ ಹೋಗಿದ್ದ ರತ್ನಾಂಬಿಕೆ; ಇದೀಗಲೇ ಮಾತನಾಡಿಹೋದ ಪೆದ್ದರಾಯ. . ಇವರೆ ಆ ಎರಡು ವ್ಯಕ್ತಿಗಳು. ಒಮ್ಮೆ ಅವಳು ಬಂದು ಆಟವಾಡಿ ಹೋಗುವಳು; ಇನ್ನೊಮ್ಮೆ ಇವನು ಬಂದು ಕುಣಿದು ಕುಣಿದು ಹೋಗುವನು. ಕೊನೆಗೆ ಬಳಲಿದ ಮನಸ್ಸಿನವನಾಗಿ ರಾಜಶೇಖರನು ಮೆಲ್ಲಗಿನ ಧ್ವನಿಯಲ್ಲಿ, ಉಪನಿಷತ್ತಿನ ಶಾಂತಿಮಂತ್ರವೊಂದನ್ನು ಹೇಳಲು ಮೊದಲುಮಾಡಿದ:—

“ ಓಂ ಭದ್ರಂ ಕರ್ಣೇಭಿಶ್ಶೃಣುಯಾಮ ದೇವಾಃ ॥
“ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ॥
“ ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ—
“ ವ್ಯಶೇಮ ದೇವಹಿತಂ ಯದಾಯುಃ ॥
“ ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ ॥
“ ಸ್ವಸ್ತಿನಃಪೂಷಾ ವಿಶ್ವವೇದಾಃ ॥
“ ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ ॥
“ ಸ್ವಸ್ತಿನೋ ಬೃಹಸ್ಪತಿರ್ದಧಾತು ॥
“ ಓಂ ಶಾಂತಿಃ ಶಾಂತಿಃ ಶಾಂತಿಃ ! ”

ಈ ಸಂದರ್ಭದಲ್ಲಿ ತಾನು ಪರಮಾತ್ಮನ ಬಳಿಯಲ್ಲಿ ಏನು ಬೇಡಿಕೊಳ್ಳಬೇಕಾಗಿದ್ದಿತೋ ಅದೇ ಬೇಡಿಕೆಯು ಈ ಮಂತ್ರದಲ್ಲಿ ಹುದುಗಿಕೊಂಡಿರುವುದೆಂದು ರಾಜಶೇಖರನಿಗೆ ಎನಿಸಿದ್ದಿತೇನೊ! ಅವನು ಮತ್ತೆ ಮತ್ತೆ ಇದನ್ನೆ ಹೇಳುವುದಕ್ಕೆ ತೊಡಗಿ, ಇದರಲ್ಲಿಯೆ ವೈಮನಸ್ಸುಗಳನ್ನು ಮರೆತು ಹೋದನು.

---

## ೧೪ನೆಯ ಪರಿಚ್ಛೇದ.

ಪೆದ್ದರಾಯನ ಒತ್ತಾಯದ ಓಲೆ ಬಂದಾಗಿನಿಂದಲೂ ನರಸಿಂಹನಾಯಕನ ಯೋಚನೆಯು ಘನಕ್ಕಿಟ್ಟಿತು. ಎಂತೆಂತಹ ತೊಡಕುತೊಡಕಿನ ರಾಜಕಾರ್ಯದಲ್ಲಿಯೂ ಕೂಡಲೆ ದಾರಿಯನ್ನು ಕಂಡುಹಿಡಿಯುತ್ತಿದ್ದ ಆತನಿಗೆ, ಈಗ ತಾನು ಸಾಗಬೇಕಾಗಿದ್ದ ದಾರಿಯೆ ಕಾಣಲೊಲ್ಲದಾಯಿತು.

ನರಸಿಂಹನಾಯಕನ ಕಣ್ಣೆದುರು, ಒಮ್ಮೆ ಕಮಲಾಂಬಿಕೆಯ ನಿಸ್ಸೀಮವಾದ ಪ್ರೇಮಮಯ-ಹೃದಯವು ಬಂದು ನಿಲ್ಲುವುದು. ಇನ್ನೊಮ್ಮೆ ವಿಜಯ-ನಗರದ ಭವ್ಯವಾದ ಸಾಮ್ರಾಜ್ಯವು ಬಂದು ನಿಲ್ಲುವುದು. ಎರಡೂ ಬಂದು ಬಂದು 'ನಮ್ಮನ್ನು ಏನು ಮಾಡುತ್ತೀಯೇ' ಎಂದು ದೈನ್ಯದಿಂದ ಕೇಳುತ್ತಿದ್ದುವು. ಈ ಕಳವಳದ ಪ್ರಶ್ನೆಗಳಿಗೆ ಯಾವ ಉತ್ತರವನ್ನೂ ಕೊಡ-ಲಾರದವನಾಗಿ, ನಾಯಕನು ಮನಮನದಲ್ಲಿಯೇ ಮಿಡುಕಲುತೊಡಗುವನು. ಆತನ ಆಲೋಚನಾಪ್ರವಾಹವು ಹೀಗೆ ಹೀಗೆ ಸಾಗಿದ್ದಿತು:—

" ರಾಜಶೇಖರನು ದೊರೆಯಾಗಲಿಕ್ಕೆ ಒಪ್ಪಿಬಿಟ್ಟಿದ್ದರೆ, ಪೆದ್ದರಾಯನಿಗೆ ದೊರೆತನದ ಅಧಿಕಾರವೆಲ್ಲಿ ಬರುತ್ತಿದ್ದಿತು? ಅದು ಇಲ್ಲದಿದ್ದರೆ ಇಷ್ಟೊಂದು ಅಧಿಕಾರದ ಬಲುಮೆಯನ್ನು ಆತನಿಗೆ ಹೇಗೆ ತೋರಿಸಲಿಕ್ಕೆ ಬರುತ್ತಿದ್ದಿತು? ಇಬ್ಬರೂ ಒಬ್ಬನೆ ತಂದೆಯ ಮಕ್ಕಳು; ಒಬ್ಬಳೆ ತಾಯಿಯ ಬಸಿರಿಂದ ಬಂದ-ವರು; ಆದರೆ ಇಬ್ಬರ ಗುಣಸ್ವಭಾವಗಳಲ್ಲಿಯೂ ಎಷ್ಟೊಂದು ಅಭ್ಯಂತರವು? ಒಂದು ಉತ್ತರಧ್ರುವವಾದರೆ ಇನ್ನೊಂದು ದಕ್ಷಿಣ ಧ್ರುವ! ದೊರೆಗಳಲ್ಲಿರ-ಬೇಕಾದ ಧೈರ್ಯ-ಶೌರ್ಯ-ಸಾಹಸಪ್ರೀತಿ ಇವೆಲ್ಲ ಸದ್ಗುಣಗಳೂ ಪೆದ್ದ-ರಾಯನಲ್ಲಿ ಇವೆ; ಆದರೂ – ಬಾಳೆಯ ಗಿಡದ ಬಳಿಯಲ್ಲಿಯೆ ಬೆಳೆದ ಜಾಲಿಯ ಕಂಟಿಗಳಂತೆ ಅಹಂಕಾರ, ದುರಭಿಮಾನ, ಔದ್ಧತ್ಯ, ಅಧಿಕಾರಲಾಲಸೆಗಳೂ ಜೊತೆಜೊತೆಯಲ್ಲಿಯೆ ಬಳೆದುಕೊಂಡು ಬಂದಿವೆ. ದೊರೆಗಳಾಗಬೇಕಾದವರಲ್ಲಿ ಛಲವೇನೋ ಇರಬೇಕಾದುದು ಸರಿ! ಆದರೆ ಅದು ರಾಜಕಾರ್ಯ ದಲ್ಲಿಯೆ ಆಗಲಿ, ಬೇರೆ ಯಾವ ವ್ಯವಹಾರದಲ್ಲಿಯಾಗಲಿ; ಉಚಿತರೀತಿಯಿಂದ ಉಪಯೋಗವಾಗುತ್ತಿರಬೇಕು. ಪೆದ್ದರಾಯನ ಛಲಗಾರಿಕೆಗೆ ಈ ಬಗೆಯ ವಿವೇಕಬುದ್ಧಿಯ ನೆರವು ಇಲ್ಲ; ಮನಃಸಂಯಮದ ಸಹಾಯವಿಲ್ಲ. ಆತನ ಮನಸ್ಸಿಗೆ ಬಂದುದು ಆಗಲೇಬೇಕು! ಹುಡುಗತನದಲ್ಲಿ ಇದೆಲ್ಲ ಹೇಗೊ-ಹೇಗೋ ನಡೆದುಹೋಯಿತು. ಈಗ ದೊರೆಯಾಗಲಿರುವವನು ಹೀಗೆಲ್ಲ ಮಾಡುತ್ತ ಕುಳಿತರೆ ಹೇಗೆ ಸಾಗಬೇಕು? ಪ್ರಜೆಗಳ ಪ್ರೀತಿಯ ಬೆಂಬಲವು ಆತನಿಗೆ ಹೇಗೆ ಸಿಕ್ಕಬೇಕು? ಆದುದರಿಂದಲೆ ಪೆದ್ದರಾಯನ ಸ್ವಭಾವದ ತಕ್ಕಡಿಯ ಒಲವನ್ನು ಹಿಡಿದುಕೊಂಡು ನಡೆಯುವುದಕ್ಕೆ. .ನಾನು ರಾಜಧಾನಿ ಯಲ್ಲಿ ಇರಲೇಬೇಕು. ಇರುವುದಾದಲ್ಲಿ ಕಮಲಾಂಬಿಕೆಯ ವಿಚಾರದ

ತೊಡಕನ್ನು ಹೇಗೆ ಬಿಡಿಸಬೇಕು··? ಪೆದ್ದರಾಯನ ಮಾತಿನಂತೆ ನಾನೀಗ ಕಮಲಾಂಬಿಕೆಯನ್ನು ಕೊಡದೆ ಇದ್ದರೆ, ಆತನ ಹಟವು ನನ್ನನ್ನು ವಿಜಯನಗರದಲ್ಲಿ ಇರಲಿಕ್ಕೆ ಕೊಟ್ಟೀತೇ?·· ಹಾಗಿದ್ದರೆ ಸಾಮ್ರಾಜ್ಯದ ಸುರಕ್ಷಿತತೆಗಾಗಿ ನಾನು ಇದೂ ಒಂದು ತ್ಯಾಗಕ್ಕೆ ಸಿದ್ಧನಾಗಿ ಬಿಡಲೇ?·· ಕಮಲಾಂಬಿಕೆಯನ್ನು ಪೆದ್ದರಾಯನಿಗೆ ಕೊಟ್ಟುಬಿಡಲೇ?.... ''

* * * *

'' ಸರಳ ಹೃದಯದ, ಮುಗ್ಧಸ್ವಭಾವದ ಕಮಲಾಂಬಿಕೆಗೆ ಇದುವರೆಗೆ ಇದಾವ ಸಂಗತಿಯೂ ತಿಳಿದಿಲ್ಲ; ಒಂದು ವೇಳೆ ತಿಳಿದಿದ್ದರೆ, ಇಷ್ಟರಲ್ಲಿಯೆ ಪ್ರಸಂಗವು ಎಷ್ಟೊಂದು ರಗಳೆಗಿಡುತ್ತಿದ್ದಿತೊ! ನಾನು ತನ್ನನ್ನು ಪೆದ್ದರಾಯನಿಗೆ ಕೊಡಬೇಕೆಂಬ ವಿಚಾರದಲ್ಲಿ ಇರುತ್ತೇನೆಂಬುದು ತಿಳಿದುಬಿಟ್ಟರೆ, ಆಕೆ ನೆಲ-ಮುಗಿಲುಗಳನ್ನು ಒಂದೆ ಮಾಡಿಬಿಡಬಹುದು! ಸಾಮ್ರಾಜ್ಯದ ವಿಷಯಕ-ವಾಗಿದ್ದ ನನ್ನ ಅಭಿಮಾನಕ್ಕಾಗಿ, ಹೂವಿನಂತಹ ನನ್ನ ಕಮಲಾಂಬಿಕೆಯ ಪ್ರೇಮಹೃದಯವನ್ನು ಬಲಿಕೊಟ್ಟುಬಿಡಬೇಕೇ? ದೇವಿಯನ್ನು ಮೆಚ್ಚಿಸುವೆ-ವೆಂದು ಜೀವಿಗಳನ್ನು ಬಲಿಕೊಡಲಿಕ್ಕೆ ಸಿದ್ಧರಾದ ಕಾಳಿಯ ಭಕ್ತರ ನೆನಪು ಉಂಟಾಗುತ್ತದೆ ನನಗೆ! ತಾಯ ಪ್ರೀತಿಯನ್ನು ಕಳೆದುಕೊಂಡಿದ್ದರೂ ಆ ಕೊರತೆಯ ಅನುಭವವು ಕಮಲಾಂಬಿಕೆಗೆ ಆಗದಂತೆ – ಇದುವರೆಗೂ ಅವಳನ್ನು – ಮೆಲುನಗೆಯ ಮೂರ್ತಿಯನ್ನಾಗಿ ಮಾಡಿ ನಡಪಿದ್ದೇನೆ, ಇನ್ನು ಮುಂದೆಯೂ ಆಕೆಯ ಮೆಲುನಗೆಯು ಮರೆಯಾಗದಂತೆ ನೋಡಿಕೊಂಡಿರಬೇಕು ನಾನು! ಹೀಗಿರುವಾಗ ಕಮಲಾಂಬಿಕೆಯನ್ನು ಪೆದ್ದರಾಯನಿಗೆ ಕೊಡುವ ಬಗೆ ಹೇಗೆ··? ಏನೋ! ರಾಜಶೇಖರನಿಗೆ ಹೇಳಿಕಳುಹಿಸಿದ್ದೇನೆ; ಪೆದ್ದರಾಯನ ಪ್ರೀತಿ-ವಿಶ್ವಾಸಗಳು – ಇತ್ತೀಚೆಗೆ ರಾಜಶೇಖರನಲ್ಲಿ – ಸ್ವಲ್ಪ ಹೆಚ್ಚಿಕೊಂಡಂತೆ ಇವೆ. ಅಣ್ಣನ ಉಪದೇಶದಿಂದ ಆತನು ಕಮಲಾಂಬಿಕೆಯ ಅಪೇಕ್ಷೆಯನ್ನು ಬಿಟ್ಟರೂ ಬಿಡಬಹುದೇನೋ – ಎನಿಸುತ್ತಿದೆ. ಆದರೂ ಬಿರುಗಾಳಿ ಯಾವಾಗ ಯಾವರೀತಿಯಲ್ಲಿ ಬೀಸುವುದೋ ನಿಯಮವಿಲ್ಲ. ಹಡಗಿನ ಹಾಯಿ ( ಪಟ )ಗಳಿಗೆ ಅದು ಒಮ್ಮೊಮ್ಮೆ ಅನುಕೂಲವಾಗಿರುವುದು; ಮತ್ತೆ ಒಮ್ಮೊಮ್ಮೆ ಪ್ರತಿಕೂಲವಾಗಿರುವುದು. ಕರ್ಣಾಟಕದೇವಿ ನನ್ನ ಮೊರೆಕೇಳಲಿ! ಪೆದ್ದರಾಯನ ಬಗೆಯ ಬಿರುಗಾಳಿಯನ್ನು

ತನ್ನ ಸಾಮ್ರಾಜ್ಯದ ಹಡಗಿನ ಹಾಯಿಗೆ ಅನುಕೂಲವಾದುದನ್ನಾಗಿ ಮಾಡಿಕೊಳ್ಳಲಿ··"

ಹಗಲು ಹತ್ತುಗಳಿಗೆ ಕಳೆದಿರಬಹುದು; ನಾಯಕನು ಕುಳಿತಿದ್ದ ವಿಶ್ರಾಂತಿಭವನದೊಳಕ್ಕೆ ನಾರಾಯಣಪಂಡಿತರು ಬಂದರು. ಪಂಡಿತರ ಮೊಗದ ಬಗೆಯನ್ನು ಕಂಡೊಡನೆಯೆ ನಾಯಕನ ಎದೆ ದಡದಡಿಸಿತು. ಆದರೂ ಇಂತಹ ಅನೇಕ ತೊಡಕುಬಲೆಗಳಲ್ಲಿ ಸಿಕ್ಕಿಸಿಕ್ಕಿ, ದಾಟಿ ಪಾರಾಗಿ ಬಂದು ಅನುಭವವಿದ್ದ ನಾಯಕನು, ಸಹಜಭಾವದಲ್ಲಿಯೆ ಪಂಡಿತರನ್ನು – ಆದರದಿಂದ – ಬರಮಾಡಿಕೊಂಡನು; ಬದಿಯ ಆಸನದಲ್ಲಿಯೆ ಕುಳ್ಳಿರಿಸಿದನು. ಬಳಿಕ ಸಸುವೆ ಕುತೂಹಲವು ಬೆರೆತ ಸ್ವರದಲ್ಲಿ ಕೇಳಿದನು.

"ಅಣ್ಣಾಜಿಯವರು ಪೆದ್ದರಾಯನನ್ನು ಕರೆಯಿಸಿಕೊಂಡಿದ್ದರಲ್ಲವೇ?"

ನಿರಾಶೆಯ ನಿಟ್ಟುಸಿರಿನೊಂದಿಗೆ ಪಂಡಿತರು ಹೇಳಿದರು.

"ಹುಂ! ಕರೆಯಿಸಿಕೊಂಡಿದ್ದರು!"

"ಏಕೆ? ಏನಾಯಿತು?"

"ಆಗುವುದೇನು? ಪೆದ್ದರಾಯನ ಮನಃಸ್ಥಿತಿಯೂ ತೀರ ವಿಚಿತ್ರವಾಗಿದೆಯಂತೆ. ಅಣ್ಣಾಜಿಯವರಿಗೆ ಕೂಡ ಹುಚ್ಚುಪಚ್ಚಾಗಿ ಮಾತನಾಡಿಬಿಟ್ಟನಂತೆ. ಆತನ ಚಲಪಾದಿತನವು ನಿಮಗೆ ಗೊತ್ತಿಲ್ಲವೇ ನಾಯಕರೇ!"

"ಅಣ್ಣಾಜಿಯವರು ಹೇಳಿದರೂ ಕೇಳಲಿಲ್ಲವೇ?"

"ಸಾಕ್ಷಾತ್ ಪಂಪಾಪತಿಯೇ ಎದ್ದುಬಂದು ಹೇಳಿದರೂ ಕೇಳುವಂತಹ ಮನಃಸ್ಥಿತಿ ಆತನದಿಲ್ಲ!"

ನರಸಿಂಹನಾಯಕನು ಕಳೆಗುಂದಿದ ಮೊಗದವನಾಗಿ ಬಿಮ್ಮಗೆ ಕುಳಿತುಕೊಂಡನು. ಆತನ ಕಳವಳ – ತಳಮಳಗಳನ್ನು ಕಂಡ ನಾರಾಯಣಪಂಡಿತರ ಬಾಯಿಂದಲೂ ಮಾತು ಹೊರಕ್ಕೆ ಹೊರಡದೆ ಹೋಯಿತು. ಕೆಲವು ನಿಮಿಷಗಳ ವರೆಗೆ ಇಬ್ಬರೂ ಹಾಗೆಯೆ ಕುಳಿತಿದ್ದರು. ಬಳಿಕ ನರಸಿಂಹನಾಯಕನು ಕರುಣಾಸ್ವರದಲ್ಲಿ ಉದ್ಗಾರವೊಂದನ್ನು ತೆಗೆದ:

"ರಾಜಶೇಖರನೆ ದೊರೆಯಾಗಲಿಕ್ಕೆ ಒಪ್ಪಿಬಿಟ್ಟಿದ್ದರೆ ಎಷ್ಟು ಚೆನ್ನಾಗುತ್ತಿದ್ದಿತು!"

ಕಳವಳದ ರೋಷದಲ್ಲಿ ಪಂಡಿತರು ಗುಡುಗಿದರು.

" ಪೆದ್ದರಾಯನು ಒಂದು ಬಗೆಯ ಹಟವಾದಿಯಾದರೆ, ಅಣ್ಣಾಜಿಯವರು ಇನ್ನೊಂದು ಬಗೆಯ ಹಟವಾದಿಗಳು ! ಸುಳ್ಳಲ್ಲ ನಾಯಕರೇ ! ಅಣ್ಣಾಜಿಯವರು ಹಟವಾದಿಗಳೇ ಎಂದು ನನ್ನದಂತೂ ಭಾವನೆಯಾಗಿ ಬಿಟ್ಟಿದೆ ನೋಡಿ ! ದೇಶಕ್ಕೆ ದೇಶವೇ ಅವರ ಆಡಳಿತವನ್ನು ಅಪೇಕ್ಷಿಸುತ್ತಿರುವಾಗ, ಇಲ್ಲದ ವಿಕ್ಷಿಪ್ತವಿಚಾರಗಳನ್ನು ಮುಂದೆ ಒಡ್ಡಿ, ಸಿಂಹಾಸನವನ್ನೇರಲಿಕ್ಕೆ ಸಮ್ಮತಿಸದೆ ಇರುವುದೆಂದರೆ. . ಇದಕ್ಕಿಂತ ಹೆಚ್ಚಿನ ಹಟವು ಇನ್ನೇನಿರಬೇಕು ? ಅವರ ಖಂಡಿತವಾದ ಅಸಮ್ಮತಿಯನ್ನು ಕಂಡಾಗಲೆ ನಾನು ಎಂದುಕೊಂಡೆ : ' ವಿಜಯನಗರದ ಪುನರಭ್ಯುದಯದ ಕಾಲ ಇನ್ನೂ ದೂರದಲ್ಲಿದೆ ' ಎಂದು. "

ಬಿಸಿಯಾಗಿ ಉಸಿರೊಂದನ್ನು ಹಾಕಿ ನರಸಿಂಹನಾಯಕನು ನುಡಿದ.

" ಸರಿ ! ನಾನೀಗ ಏನು ಮಾಡಬೇಕೆನ್ನುತ್ತೀರಿ ಪಂಡಿತರೇ ! "

ಪಂಡಿತರು ನಿಧಾನವಾಗಿ ಹೇಳಲು ಮೊದಲುಮಾಡಿದರು.

" ನನ್ನದೊಂದು ವಿಚಾರವಿದೆ ನೋಡಿ ! ಅಣ್ಣಾಜಿಯವರ ಎದುರು ಹೇಳಿದಾಗ, ಅವರೂ ಹೀಗಾಗಬಹುದೆಂದು ಒಪ್ಪಿದರು. ಸದ್ಯ ನೀವು ಪೆದ್ದರಾಯನಿಗೆ, ಕಮಲಾಂಬಿಕೆಯನ್ನು ಕೊಡುವುದಿಲ್ಲವೆಂದೂ ಹೇಳಬೇಡಿ ! ಕೊಡುತ್ತೇನೆಂದೂ ಹೇಳಬೇಡಿ ! ಹೇಗೂ ಚಂದ್ರಗಿರಿಯಿಂದ ಅಲ್ಲಿಯ ಅಶಾಂತ ಪರಿಸ್ಥಿತಿಯ ಓಲೆ ನಿಮಗೆ ಬಂದಿದೆ. ಬೇಗನೆ ನಿಮಗೆ ಅಲ್ಲಿಗೆ ಹೋಗಿ ಬರಲೇ ಬೇಕಾಗಬಹುದು. ನೀವೀಗ ಇದನ್ನೇ ನೆಪಮಾಡಿಕೊಂಡು, ಸಿಂಹಾಸನಾರೋಹಣದ ದಾರಿಯನ್ನೇನೂ ನೋಡದೆ, ಕೂಡಲೆ ಚಂದ್ರಗಿರಿಗೆ ಹೊರಟುಬಿಡಿ ! ' ಚಂದ್ರಗಿರಿಯ ನಾಡಿನಲ್ಲಿ ಬಂಡಾಯಗಳು ಎದ್ದ ಓಲೆ ಬಂದುದರಿಂದ ಕೂಡಲೆ ನಾನು ಅಲ್ಲಿಗೆ ಹೋಗಬೇಕಾಗಿದೆ. ಈಗಿನ ಅಸಮಾಧಾನದ ಮನಃಸ್ಥಿತಿಯಲ್ಲಿ ತಮ್ಮ ಬೇಡಿಕೆಗೆ ನಾನು ಯಾವ ಉತ್ತರವನ್ನೂ ಕೊಡಲಾರೆ. ಅಲ್ಲಿ ಶಾಂತತೆಯನ್ನು ಪ್ರಸ್ಥಾಪಿಸಿ, ಮರಳಿ ಬಂದೊಡನೆಯೆ ಇದರ ವಿಷಯದಲ್ಲಿ ಮಾತನಾಡೋಣವೆಂತೆ ! ' ಎಂದಿಷ್ಟೇ ಈಗ ಪೆದ್ದರಾಯನಿಗೆ ಹೇಳಿ ಕಳುಹಿಸಿ ಬಿಡಿ ! ಇನ್ನು ಸಮಾರಂಭದ ಬಗೆಗೆ ವಿಚಾರ; ಅದಕ್ಕಾಗಿ ನೀವು ಇದ್ದೇ ತೀರಬೇಕೆಂಬ ನಿಯಮವೇನೂ ಇಲ್ಲವಲ್ಲ ! "

ಸ್ವಲ್ಪಕಾಲ ಯೋಚನೆಯಲ್ಲಿ ಕುಳಿತಿದ್ದು ನರಸಿಂಹನಾಯಕನು

ಆಶೆಯ ಸ್ವರದಲ್ಲಿ ಹೇಳಿದ.

"ನಿಮ್ಮ ವಿಚಾರವು ಚೆನ್ನಾಗಿದೆ ಪಂಡಿತರೆ! ಎದುರಿಸಿದ್ದ ಅನಿಷ್ಟ ಸಂದರ್ಭಗಳಿಗೆ ಒಮ್ಮೆಲೆ ಎದೆಯೊಡ್ಡಿ ನಿಲ್ಲದೆ, ಸ್ವಲ್ಪ ಬದಿಗೆ ಸರಿದು, ಕಾಲವನ್ನು ಹೋಗಲಾಡಿಸುವುದರಿಂದಲೂ ಎಷ್ಟೋ ಸಲ ಪ್ರಯೋಜನವಾಗುವುದು. ಈ ಮಾತಿನ ಅನುಭವವು ನನಗೂ ಬಾರದೆ ಇಲ್ಲ. ಆದರೆ ಪಟ್ಟಾಭಿಷೇಕವಾಗುವ ವರೆಗೆ ವಿಜಯನಗರವನ್ನು ಬಿಡಲಿಕ್ಕೆ ಮನಸ್ಸೊಲ್ಲದೆ ಮಿಡುಕುತ್ತಲಿದ್ದೇನೆ."

"ನಿಮ್ಮ ಮಿಡುಕಾಟವೂ ಸರಿಯಾದುದೇ ನಾಯಕರೆ! ದೇವಣ್ಣ ನಾಯಕರೊಬ್ಬರನ್ನು ನಮ್ಮ ಹಿಡಿತದಲ್ಲಿ ಇಟ್ಟುಕೊಂಡೆವೆಂದರೆ ನಮಗೆ ಯಾವ ತೊಂದರೆಯೂ ಇಲ್ಲ. ಮೊನ್ನೆ ಮೊನ್ನೆ ಅವರ ಕಣ್ಣಿನ ರೋಗದ ಚಿಕಿತ್ಸೆಯನ್ನು ನಾನು ಮಾಡಿದಂದಿನಿಂದ, ಅವರದು ನನ್ನಲ್ಲಿ ಒಂದು ಬಗೆಯ ವಿಶ್ವಾಸವುಂಟಾಗಿದೆ. ಅಲ್ಲದೆ ದೊರೆಯಾಗಲಿದ್ದ ಪೆದ್ದರಾಯನು ಅವರಿಗೆ ತೀರ ಬೇಕಾದವನು. ಆದುದರಿಂದ ಸಮಾರಂಭದ ಕಾರ್ಯವು ಯಾವ ತಡೆಯೂ ಇಲ್ಲದೆ ಸಾಗುವುದು. ನೀವು ಬರುವ ವರೆಗೆ ನಿಮ್ಮ ಇಲ್ಲಿಯ ಕಾರ್ಯದ ಹೊಣೆಯನ್ನು ನಾನು ಹೊತ್ತಿರುತ್ತೇನೆ ಬೇಕಾದರೆ..!"

"ಪಂಡಿತರೆ! ನೀವು ಹೊಣೆಯನ್ನು ಹೊತ್ತು ನಿಂತರೆ ನನಗೆ ಯಾವ ಚಿಂತೆಯೂ ಇಲ್ಲ; ಕೂಡಲೆ ಹೊರಟುಬಿಡುವೆನು. ನಾನು ಮರಳಿ ಬರುವ ವರೆಗೆ ಅಣ್ಣಾಜಿಯವರ ಲಕ್ಷ್ಯವೂ–ರಾಜಕಾರ್ಯದ ಕಡೆಗೆ ತೊಡಕಿಕೊಳ್ಳುವಂತೆ ಮಾಡಬೇಕು ನೀವು! ಏತಕ್ಕೆಂದರೆ ಪೆದ್ದರಾಯನ ಮನಸ್ಸಿನ ತೂಕವನ್ನು ಸರಿಯಾಗಿರಿಸಲಿಕ್ಕೆ ಅವರ ಆವಶ್ಯಕತೆಯೆ ಹೆಚ್ಚಲ್ಲವೇ?"

"ಅದನ್ನೂ ನಾನು ಮಾಡುತ್ತೇನೆ."

"ಇದೆಲ್ಲವೂ ಆಯಿತು ಪಂಡಿತರೇ! ಮರಳಿ ಬಂದಮೇಲೆಯಾದರೂ ಪೆದ್ದರಾಯನಿಗೆ ಸಮಾಧಾನವಾಗುವಂತೆ ನಡೆದುಕೊಳ್ಳಲೇ ಬೇಕಲ್ಲವೇ ನಾನು?"

"ಅದರ ನಿರ್ಣಯಕ್ಕಾಗಿಯೆ ಅಲ್ಲವೇ.. ನಾವೀಗ ಈ ಅವಕಾಶವನ್ನು ಅಪೇಕ್ಷಿಸುವುದು? ಮುಂದಿನ ಯೋಚನೆಗೆ ಇಂದೆಯೆ ನಾವೇಕೆ ತೊಡಕಾಡಬೇಕು? ಅದುವರೆಗೆ ಪೆದ್ದರಾಯನ ಚಿತ್ತವೂ ಎಲ್ಲೆಲ್ಲಿ ಹರಿದಾಡಿ,

ಯಾವ ಯಾವ ಮೆಟ್ಟಿಲಿನಲ್ಲಿ ನಿಂತಿರುವುದೋ ಎಂಬುದನ್ನೂ ನೋಡಲಿಕ್ಕೆ ಆಗುವುದು. ''

'' ಹಾಗಾದರೆ. . ನಾನು ನಾಳೆಯ ಬೆಳಗಿನಲ್ಲಿಯೆ ಪಯಣ ಬೆಳೆಯಿಸುವ ಸಿದ್ಧತೆಗೆ ಹತ್ತಿಕೊಳ್ಳಲೇ ? ''

'' ಯಾವ ಯೋಚನೆಯೂ ಇಲ್ಲದೆ ಹತ್ತಿಕೊಳ್ಳಿ ! ''

'' ಪೆದ್ದರಾಯನಿಗೆ ಇಂದೆಯೆ ಮಾರುಬರೆದು ಕಳುಹಿಸುತ್ತೇನೆ.''

ಪಂಡಿತರು ಏನನೋ ಹೇಳಬೇಕೆಂದಿರುವಾಗಲೆ ಈಶ್ವರನಾಯಕನು ಅಲ್ಲಿಗೆ ಬಂದ. ಅವನನ್ನು ಕಂಡೊಡನೆಯೆ ಪಂಡಿತರ ಮುಖವು–ಅದೇತಕ್ಕೊ–ಜುಗುಪ್ಸೆಯಿಂದ ಮುದುರಿಕೊಂಡಂತಾಯಿತು. ನರಸಿಂಹನಾಯಕನು ಈಶ್ವರನನ್ನು ಆದರಿಸಿ ಕುಳ್ಳಿರಿಸಿದ. ಕುಳಿತುಕೊಳ್ಳುತ್ತಿರುವಾಗಲೆ ಈಶ್ವರನಾಯಕನು ಹೇಳಿದ.

'' ಪೆದ್ದರಾಯರೆದುರು ತಮ್ಮ ಅರಿಕೆಯನ್ನು ವಿಶದಪಡಿಸಿ ಹೇಳಿದೆ. ನಾನೂ ಬಗೆಬಗೆಯಿಂದ ಬಿನ್ನವಿಸಿಕೊಂಡೆ. ಆದರೂ ಅವರು ತಮ್ಮ ಒಂಟಿಯ ಹಿಡಿತವನ್ನು ಬಿಡಲೊಲ್ಲರು ? ಸುಹಾ ಹಟವಾದಿಗಳು ಅವರು. . ನಾಯಕರೇ ! ''

'' ಮಾಡುವುದೇನು ಈಶ್ವರನಾಯಕರೇ ! ನಾನು ಹೇಳಿದ ಕೆಲಸವನ್ನು ನೀವೇನೋ ಮಾಡಿದ್ದೀರಿ. ಅದಕ್ಕಾಗಿ ನಾನು ಉಪಕೃತನು ನಿಮಗೆ. ಆಗಲಿ ! ಮುಂದೆ ಏನೇನಾಗುವುದೋ ನೋಡೋಣವೆಂತೆ. ಸದ್ಯಕ್ಕಂತೂ ನಾನು ಚಂದ್ರಗಿರಿಗೆ ಹೊರಟುನಿಂತಿದ್ದೇನೆ. ''

ಆಶ್ಚರ್ಯಗೊಂಡವನಾಗಿ ಈಶ್ವರನಾಯಕನು ಕೇಳಿದ.

'' ಚಂದ್ರಗಿರಿಗೆ. . ? ಈಗ. . ? ''

'' ಅಹುದು ! ಮೊನ್ನೆಯ ದಿನವೆ ನಿಮಗೆ ಹೇಳಲಿಲ್ಲವೇ ! – ಚಂದ್ರಗಿರಿಯಿಂದ ಬಂದಿದ್ದ ಓಲೆಯ ಸಮಾಚಾರವನ್ನು ! ನೀವೆಲ್ಲರೂ ಇದ್ದೀರಿ ! ಪಟ್ಟಾಭಿಷೇಕದ ಸಮಾರಂಭವು ಹೇಗೂ ಸರಳವಾಗಿ ನೆರವೇರುವುದು. ಅಲ್ಲಿಯ ಪರಿಸ್ಥಿತಿಯನ್ನು ಕೇಳಿದರೆ, ಒಂದು ಗಳಿಗೆ ಕೂಡ ನಾನಿಲ್ಲಿ ತಡೆಮಾಡಲಾಗದು; ಇಲ್ಲದ ಯೋಚನೆಯಲ್ಲಿ ಸುಮ್ಮನೆ ಇದುವರೆಗೆ ಕಾಲಹರಣ ಮಾಡಿದೆ. ಇನ್ನು ಹಾಗೆ ಮಾಡುವಂತಿಲ್ಲ; ನಾಳೆಯ ಬೆಳಗಿನಲ್ಲಿ ಹೊರಟೇ

ಬಿಡುತ್ತೇನೆ. ''

" ಅಯ್ಯೋ! ಎಂತಹ ಕೆಟ್ಟ ಸಂದರ್ಭ ನೋಡಿ ನಾಯಕರೇ! ಸಿಂಹಾಸನಾರೋಹಣದ ಸಮಯದಲ್ಲಿ ನೀವು ಇರುವದಿಲ್ಲವೆಂದರೆ ಏನು ಮಾತು ನಾಯಕರೇ ! "

" ಅನಿವಾರ್ಯ ಪ್ರಸಂಗ ! ಪೆದ್ದರಾಯರಿಗೆ ನಾನೂ ಈ ಮಾತನ್ನು ಬೇರೆಯಾಗಿ ಬಿನ್ನವಿಸಿಕೊಳ್ಳುತ್ತೇನೆ. ನೀವೂ ಅವರಿಗೆ ವಸ್ತುಸ್ಥಿತಿಯನ್ನು ವಿವರಿಸಿ ಹೇಳಿರಿ! ''

" ಆಗಲಿ! ಮಾಡುವುದೇನು? " ಈಶ್ವರನಾಯಕನು ಉಸಿರುಗಳೆದ.

ಆಗಲೆ ಪಂಡಿತರು ನಾಯಕನನ್ನು ಬೀಳ್ಕೊಂಡು ಹೊರಟುನಡೆದರು. ಈಶ್ವರನಾಯಕನೂ ಅವರ ಬೆನ್ನಹಿಂದೆಯೆ - ಮುಖಬಾಡಿಸಿಕೊಂಡವನಾಗಿ ನಡೆದುಬಿಟ್ಟ. ಅಂದು ನಾಯಕರ ಮನೆಯಲ್ಲಿ ಚಂದ್ರಗಿರಿಗೆ ಹೊರಡುವ ಸಿದ್ಧತೆಯ ಗೊಂದಣವೇ ಗೊಂದಣ ! ಕಮಲಾಂಬಿಕೆಯು ತನ್ನ ಉಲ್ಲಸಿತ ಭಾವದ ನೆಗೆದಾಟ - ಕುಣಿದಾಟಗಳಿಂದ - ಅಂತಃಪುರದಲ್ಲಿ - ಎಲ್ಲೆಲ್ಲಿಯೂ ಕಣ್ಣಿಗೆ ಬೀಳುತ್ತಿದ್ದಳು. ಮರುದಿನದ ಬೆಳಗು ಯಾವಾಗ ಬಂದೀತೆಂಬ ಹಾರಯಿಕೆಯಲ್ಲಿದ್ದ ಆಕೆಯ ದೃಷ್ಟಿಗೆ, ತಂದೆಯ ಮುಖದಲ್ಲಿ ಮೂಡಿನಿಂತಿದ್ದ ಶಾಶ್ವತ ಚಿಂತಾರೇಷೆಗಳು ಕಾಣಲೆ ಇಲ್ಲವೇನೋ!

---

## ೧೫ನೆಯ ಪರಿಚ್ಛೇದ.

ನರಸಿಂಹನಾಯಕನು ಇಂದಿನ ಬೆಳಗಿನಲ್ಲಿಯೆ ಚಂದ್ರಗಿರಿಗೆ - ಕಮಲಾಂಬಿಕೆಯೊಂದಿಗೆ-ಹೊರಟುಹೋದನು. ಅವನು ಹೊರಟುಹೋದುದನ್ನು ಕೇಳಿದಾಗಿನಿಂದ ಪೆದ್ದರಾಯನ ಮನಸ್ಸಿಗೆ ವಿಜಯನಗರವೆಲ್ಲವೂ ಬರಿದು ಬರಿದಾದಂತೆ ಕಂಡಿತು. ಬೆಳಕು - ಗಾಳಿಗಳು ಕೂಡ ಔದಾಸೀನ್ಯವನ್ನೆ ಹೊತ್ತುಕೊಂಡು ಬರುತ್ತಿರುವಂತೆ ಆತನಿಗೆನಿಸಿತು. ಹಗಲಿರುಳೂ ಕಣ್ಣೆದುರಲ್ಲಿ ಇಟ್ಟುಕೊಂಡಿದ್ದ ಕಮಲಾಂಬಿಕೆಯ ಮೂರ್ತಿಯನ್ನೂ ಆತನ ಯೋಚನೆಗಳ ಮೋಡವು ಮರೆಮಾಡಿಬಿಟ್ಟಿದ್ದಿತು. ನರಸಿಂಹನಾಯಕನು ಇಲ್ಲದ ತನ್ನ ಪಟ್ಟಾಭಿಷೇಕದ ಸಮಾರಂಭವು ಹಾಳುಹಾಳಾಗಿ ತೋರಬಹುದೆಂದು

ಪೆದ್ದರಾಯನಿಗೆ ಎನಿಸಲಾರಂಭಿಸಿತು. ಬಂಡುಗಾರರನ್ನು ಅಡಗಿಸಿ – ನರಸಿಂಹನಾಯಕನು – ಮರಳಿ ಬರುವ ವರೆಗೂ ಸಮಾರಂಭದ ದಿನವನ್ನು ಮುಂದಕ್ಕೆ ಹಾಕಬೇಕೆಂಬ ಯೋಚನೆಯೂ ಆಗಾಗ ಆತನ ತಲೆಯಲ್ಲಿ ಸುಳಿ-ದಾಡಲುತೊಡಗಿತು. 'ಬಂಡುಗಾರರನ್ನು ಹಣಿದು ಬರಲಿಕ್ಕೆ ನರಸಿಂಹ-ನಾಯಕನಿಗೆ ನೆರವು.. ಎಂದು ತಾನೂ ಹೊರಟು ಬಿಡಲೇ?' ಎಂಬ ವಿಚಾರವು ರಾಯನ ಮನಸ್ಸನ್ನು ಕೆಣಕಿ ಕೆಣಕಿ ಕೇಳಲುತೊಡಗಿತು. ಕೊನೆಗೆ ಹೀಗೆ ಕೂಡ ಭಾವತರಂಗವೊಂದು ಆತನ ಹೃದಯದಲ್ಲಿ ಅಲೆದಾಡಿಹೋಯಿತು.

"ನರಸಿಂಹನಾಯಕರು ಮರಳಿ ಬರಲಿ! 'ಕಮಲಾಂಬಿಕೆಯನ್ನು ನಾನು ಬಯಸುತ್ತಿರುವುದು ನಿಜವಾಗಿಯೂ ನಿಮ್ಮ ಮನಸ್ಸನ್ನು ಅಳುಕಿ ಸುತ್ತಿದ್ದರೆ, ನಾನು ಆ ಬಯಕೆಯನ್ನು ಬಿಟ್ಟುಬಿಡಲಿಕ್ಕೆ ಮನಸಾರೆಯತ್ನಿ ಸುತ್ತೇನೆ,' ಎಂದು ಹೇಳಿಬಿಡುತ್ತೇನೆ. ವಿಜಯನಗರದ ಸಾಮ್ರಾಜ್ಯಕ್ಕಾಗಿ ಅವರು ಮಾಡಿರುವಷ್ಟು ತ್ಯಾಗ–ಸಾಹಸಗಳನ್ನು, ಸಮ್ರಾಟರೆನಿಸಿಕೊಂಡು ವಂದಿ–ಮಾಗಧರಿಂದ ಹೊಗಳಿ ಹಾಡಿಸಿಕೊಳ್ಳುತ್ತಿದ್ದವರಾದರೂ ಮಾಡಿ-ದ್ದಾರೆಯೇ?"

ಈಶ್ವರನಾಯಕನು ಒಮ್ಮೆಲೆ ಅವಸರದ ನಡಿಗೆಯಿಂದ ಅಲ್ಲಿಗೆ ಬಂದ; ಪೆದ್ದರಾಯನ ಬಾಡಿ ಬತ್ತಿಯಾಗಿದ್ದ ಮುಖವನ್ನು ನೋಡಿ, ಆತುರದ ಧ್ವನಿಯಲ್ಲಿ ಕೇಳಿದ.

"ಏನು ಪೆದ್ದಣ್ಣಾ! ಹೀಗೇತಕ್ಕೆ ನಿಮ್ಮ ಮುಖ?"

"ಏನೋ ನೋಡು ಈಶ್ವರಾ! ನರಸಿಂಹನಾಯಕರು ಹೊರಟು ಹೋದುದನ್ನು ಕೇಳಿದಾಗಿನಿಂದ, ಮನಸ್ಸಿನ ಉತ್ಸಾಹವೇ ಹೊರಟು ಹೋದಂತಾಗಿದೆ."

ಗೊಂದಲದಲ್ಲಿ ಬಿದ್ದವನಂತೆ ಮುಖ ಮಾಡಿಕೊಂಡು ಈಶ್ವರನಾಯ-ಕನು ಸುಮ್ಮನೆ ನಿಂತ.

"ಸಮಾರಂಭದ ದಿನವನ್ನು – ನರಸಿಂಹನಾಯಕರು ಮರಳಿ ಬರುವ ವರೆಗೆ – ಮುಂದೆ ಹಾಕಿಬಿಡಬೇಕೆಂದು ನಿರ್ಣಯಿಸಿದ್ದೇನೆ ನಾನು!"

ಚುಚ್ಚುವ ಧ್ವನಿಯಲ್ಲಿ ಈಶ್ವರನು ಹೇಳಿದನು.

“ಎಂತಲೇ ನಾನು ನಿಮಗೆ ಆಗಾಗ ಹೇಳುತ್ತಿರುವೆನು..ಪೆದ್ದಣ್ಣಾ ನೀವು ತೀರ ಭಾವನಾಪ್ರಧಾನ ಮನುಷ್ಯರೆಂದು !”

“ಈಗೇನಾಯಿತು ಮತ್ತೆ? ನನ್ನ ಭಾವನಾಪ್ರಧಾನ ಸ್ವಭಾವವು ಈಗೇನು ಮಾಡಿತು ?”

“ಇನ್ನೂ ಏನು ಮಾಡಬೇಕೆನ್ನುತ್ತೀರಿ? ನರಸಿಂಹನಾಯಕರು ಈಗ ಈ ಸಮಾರಂಭವನ್ನು ಕೂಡ ಬಿಟ್ಟು, ಏತಕ್ಕಾಗಿ ಹೋಗಿದ್ದಾರೆ ಗೊತ್ತಿ-ದೆಯೇ ನಿಮಗೆ?”

“ಗೊತ್ತಿರದೆ ಏನು ? ಪತ್ರವನ್ನೇ ಬರೆದು ಕಳುಹಿಸಿದ್ದಾರಲ್ಲ ! ಚಂದ್ರ-ಗಿರಿಯ ನಾಡಿನಲ್ಲಿದ್ದ ಬಂಡುಗಾರರನ್ನು ಅಡಗಿಸಲಿಕ್ಕೆಂದು ಹೋಗಿದ್ದಾರೆ!”

“ನಿಮಗೊಂದು ಹುಚ್ಚು ಪೆದ್ದಣ್ಣಾ !”

“ಇನ್ನೇನು ಹಾಗಾದರೆ?”

“ಬಂಡುಗಾರರನ್ನು ಅಡಗಿಸಲಿಕ್ಕಷ್ಟೆ ಹೋಗಬೇಕಾಗಿದ್ದರೆ, ಜೊತೆಗೆ ಕಮಲಾಂಬಿಕೆಯನ್ನೂ ಏತಕ್ಕಾಗಿ ಕರೆದುಕೊಂಡು ಹೋಗಬೇಕು ?”

“ಏತಕ್ಕೆ ಕರೆದುಕೊಂಡು ಹೋಗಬಾರದು ! ಅಲ್ಲಿಯೆ ಆಕೆ ಹುಟ್ಟಿ ಬೆಳೆದವಳು; ಜೊತೆಗೆ ಹೋಗಿರಬಹುದು !”

ಈಶ್ವರನಾಯಕನು ಮಾತನೇನೂ ಆಡದೆ ‘ಹಾ ಹಾ ಹಾ’ ಎಂದು ಗಟ್ಟಿಯಾಗಿ ನಕ್ಕು ಪೆದ್ದರಾಯನ ಮನಸ್ಸನ್ನು ಏಡಿಸಿದನು ಮಾತ್ರ. ಪೆದ್ದರಾಯನು ಆತುರಮನನಾಗಿ ಕೇಳಿದ.

“ನಗುತ್ತೀ ಏತಕ್ಕೆ ಈಶ್ವರಾ ? ಅದುದಾದರೂ ಏನು? ಹೇಳಬಾರದೇ?”

“ಇನ್ನು ನಾನೇನು ಹೇಳಬೇಕು ನಿಮಗೆ? ನರಸಿಂಹನಾಯಕರು ಹೀಗೆ ಒಮ್ಮೆಲೆ ಹೊರಟುಹೋದುದು, ಕೇವಲ ಬಂಡುಗಾರರನ್ನು ಅಡಗಿಸಲಿಕ್ಕೆಂದೇ ನಿಮ್ಮ ಭಾವನೆಯೇನು ?”

“ಹಾಗಾದರೆ ಇನ್ನೇತಕ್ಕೆ ಹೋಗಿರುವರು ?”

“ಇನ್ನೇತಕ್ಕೆಂದರೆ.. ನಿಮ್ಮ ಕಣ್ಣ ಮೇಲೆ ಮಂಕುಬೂದಿ ತಳಿಯಲಿಕ್ಕೆ !”

“ಅದು ಹೇಗೆ?”

“ನಿನ್ನೆಯ ಹಗಲಲ್ಲಿಯೆ ಅವರು ಹೊರಡುವುದರ ನಿರ್ಣಯವನ್ನು

ಮಾಡಿದುದು. ಅದುವರೆಗೆ ನಾಯಕರ ಯೋಜನೆಯು ಸಮಾರಂಭವನ್ನು ತೀರಿಸಿಕೊಂಡೆ ಹೋಗಬೇಕೆಂದಿದ್ದಿತು."

"ಒಮ್ಮಿಂದೊಮ್ಮೆ ಅವರ ಯೋಚನೆಯು ಬೇರೆಯಾಗುವುದಕ್ಕೆ ಅದೇನು ಕಾರಣ?"

"ಏನು ಕಾರಣವೇ? ಅದನ್ನೆ ಹೇಳುತ್ತೇನೆ ಕೇಳಿ ಈಗ! ನಿನ್ನೆಯ ಹಗಲು ಹನ್ನೊಂದು ಗಳಿಗೆಯ ಸುಮಾರಿಗೆ ನಾನು ನರಸಿಂಹನಾಯಕರ ಮನೆಗೆ ಹೋಗಿದ್ದೆ; ಆಗ ಅನಾಥನಿಲಯದ ನಾರಾಯಣಪಂಡಿತರು ಮೊದಲೆ ಬಂದು ಅಲ್ಲಿ ಕುಳಿತಿದ್ದರು. ಇಬ್ಬರಲ್ಲಿಯೂ ಮಾತುಕತೆ ನಡೆದಿದ್ದಿತು. ನಾನು ನರಸಿಂಹನಾಯಕರೊಡನೆ ತೀರ ನಂಬುಗೆಯುವನಂತೆ ವರ್ತಿಸುತ್ತಿರುವುದರಿಂದ, ನಾನು ಇರುವಾಗಲೆ ಎಲ್ಲ ವಿಚಾರ–ತರ್ಕಗಳು ನಡೆದುವು. ನಾರಾಯಣಪಂಡಿತರು ರಾಜಶೇಖರನಿಂದ ಸಂದೇಶವನ್ನು ತೆಗೆದುಕೊಂಡು ಬಂದಿದ್ದರು. ಆ ಸಂದೇಶವನ್ನು ಕೇಳಿದೊಡನೆಯೆ ನರಸಿಂಹನಾಯಕರು–ಕೂಡಲೆ–ಚಂದ್ರಗಿರಿಗೆ ಹೊರಡುವುದನ್ನು ನಿರ್ಣಯಿಸಿದರು."

"ಹೀಗಾಯಿತೇನು? ಅಣ್ಣಾಜಿಯಿಂದ ಏನೆಂದು ಬಂದಿದ್ದಿತು ಸಂದೇಶ?"

"ರಾಜರ್ಷಿಗಳಲ್ಲವೇ ನಿಮ್ಮ ಅಣ್ಣಾಜಿಯವರು! ಆ ರಾಜರ್ಷಿ ಹೇಳಿ ಕಳುಹಿಸಿದುದನ್ನು ಚೆನ್ನಾಗಿ ತೆರೆದ ಕಿವಿಗಳಿಂದ ಕೇಳಿಕೊಳ್ಳಿ! ಆ ಸಂದೇಶ ಹೀಗಿದ್ದಿತು: 'ನಾನು ನಿನ್ನೆಯ ಸಾಯಂಕಾಲ ಪೆದ್ದರಾಯನನ್ನು ಕರೆಯಿಸಿ ಹೇಳಿದೆ; ಅವನೇನೂ ಕೇಳುವಂತೆ ತೋರುವುದಿಲ್ಲ. ಈಗ ನಾವು ಒಮ್ಮೆಲೆ ವಿರೋಧಿಗಳಾಗಿ ನಿಂತರೆ ಸರಿಯಾಗಿರದು! ಅದಕ್ಕಾಗಿ ಕೆಲವು ದಿನಗಳು ಕಳೆದು ಹೋಗಲಿ! ನೀವು ಈಗ ಇನ್ನೇನನೂ ಮಾಡದೆ, ಬಂಡುಗಾರರ ನೆಪಮಾಡಿಕೊಂಡು–ಕಮಲಾಂಬಿಕೆಯೊಂದಿಗೆ–ನಿಮ್ಮ ಚಂದ್ರಗಿರಿಯ ಮಂಡಲಕ್ಕೆ ಹೊರಟುಬಿಡಿ! ಅಲ್ಲಿ ನಿಮ್ಮ ಎಲ್ಲ ಬಗೆಯ ಬಲವನ್ನೂ ಹೆಚ್ಚಿಸಿಕೊಳ್ಳಿ! ಕೆಲವು ದಿನಗಳಲ್ಲಿಯೆ, ನಾನು ಸಹ ಅತ್ತ ಕಡೆಗೇ ಹೊರಟು ಬಂದುಬಿಡುತ್ತೇನೆ! ಮುಂದಿನ ವಿಚಾರವನ್ನು ಆ ಮೇಲೆಯೇ ಮಾಡೋಣ!' ನಿಮ್ಮ ಅಣ್ಣಾಜಿಯವರ ಮಾತಿನ ಮುತ್ತುಗಳಿವು ಪೆದ್ದಣ್ಣಾ!"

ಪೆದ್ದರಾಯನ ಮೈಯ ನೆತ್ತರೆಲ್ಲವೂ ತಟ್ಟನೆ ಮುಖದಲ್ಲಿ ಒಟ್ಟು-

ಗೂಡಿತು. ನರನರಗಳಲ್ಲಿಯೂ ಮಿಂಚು ಸುಳಿದಾಡಿದಂತಾಗಿ, ಮೈಜುಮ್ಮೆಂದಿತು. ಅಭಿಮಾನ – ರೋಷಗಳ ಸ್ವರದಲ್ಲಿ ಅವನು ಕೇಳಿದನು.

"ಮುಂದಿನ ವಿಚಾರವನ್ನೇನು ಮಾಡುವರಂತೆ ಅವರು?"

"ಅದನ್ನು ಬೇರೆಯಾಗಿ ಹೇಳಬೇಕೇನು? ಕಮಲಾಂಬಿಕೆಯ ಮದುವೆಯ ವಿಚಾರ! ವಿಜಯನಗರದ ಸಿಂಹಾಸನದ ವಿಚಾರ! ಬೇರೆ ಇನ್ನೇನಿದೆ?"

ವಿಚಾರಶೂನ್ಯನಾದವನಂತಾಗಿ ಪೆದ್ದರಾಯನು ಕೇಳಿದನು.

"ಕಮಲಾಂಬಿಕೆಯ ಮದುವೆ..? ಯಾರೊಡನೆ..?"

"ಯಾರೊಡನೆ..ಎಂದರೆ ರಾಜಶೇಖರನೊಡನೆ! ಗೊತ್ತಿದ್ದೂ ಮತ್ತೆ ಮತ್ತೆ ಕೇಳುತ್ತೀರಲ್ಲ ನೀವು ಪೆದ್ದಣ್ಣಾ!"

ಪೆದ್ದರಾಯನು ಅವಡುಗಚ್ಚಿ, ಕುಳಿತಿದ್ದ ಆಸನವನ್ನು ಮುಷ್ಟಿಯಿಂದ ಗುದ್ದಿ, ಸಿಡಿಲಿನ ದನಿಯಲ್ಲಿ ನುಡಿದನು.

"ರಾಜ್ಯವು ತನಗೆ ಬೇಡವೆಂದು, ವೈರಾಗ್ಯದ ಮಾತುಗಳ ಮಳೆಯನ್ನೇ ಕರೆದ ಅಣ್ಣಾಜಿಗೆ ಮತ್ತೆ ಸಿಂಹಾಸನದ ಲೋಭವುಂಟಾಯಿತೇ..?"

"ಸಂಗಾತ್ ಸಂಜಾಯತೇ ಕಾಮಃ! ಹೆಣ್ಣಿನ ಬೆನ್ನನ್ನು ಹತ್ತಿದವನು ಹೊನ್ನು – ಮಣ್ಣುಗಳಿಗೆ ಆಶೆಪಡುವುದರಲ್ಲಿ ಆಶ್ಚರ್ಯವೇನು?"

ರೋಷದ ಆವೇಶದಲ್ಲಿ ಪೆದ್ದರಾಯನು ಒಂದು ನಿಮಿಷದ ವರೆಗೆ ಸುಮ್ಮಗೆ ಕುಳಿತಿದ್ದ. ಬಳಿಕ ಕ್ರೋಧಯುಕ್ತವಾದ ಕರುಣೆಯ ಉದ್ಗಾರವೊಂದನ್ನು ತೆಗೆದ.

"ನಾನು .. ಹೆಮ್ಮೆಪಟ್ಟುಕೊಳ್ಳುತ್ತಿದ್ದೆ! ಎಷ್ಟೊಂದು ಒಳ್ಳೆಯ ಅಣ್ಣನನ್ನು ಪಡೆದಿದ್ದೇನೆಂದು ಹೆಮ್ಮೆಪಟ್ಟುಕೊಳ್ಳುತ್ತಿದ್ದೆ!"

"ಇನ್ನು ಮೇಲಾದರೂ ನಿಮ್ಮ ಕಣ್ಣುಗಳು ತೆರೆದಿರಲಿ, ಎಂದರಾಯಿತು!"

"ಈಶ್ವರಾ! ನೋಡೋಣ; ಈ ಪೆದ್ದರಾಯನ ಕೈಯ ನಿಡುಗತ್ತಿಯನ್ನು ವಿರೋಧಿಸಿ, ಯಾರು ಯಾರು ಹೇಗೆ ಬದುಕಿಕೊಂಡಿರುತ್ತಾರೋ.. ಒಮ್ಮೆ ನೋಡಿ ಬಿಡೋಣ! ಪಟ್ಟಾಭಿಷೇಕದ ಗಲಾಟೆ ಒಂದು ಸಲ ಮುಗಿದು ಹೋಗಿಬಿಡಲಿ! ಆ ಮೇಲೆ ನನ್ನ ಕೈಯ ಗುಣವನ್ನು ಒಬ್ಬೊಬ್ಬರಿಗೆ ತೋರಿಸುತ್ತೇನೆ; ನೋಡುವೆಯಂತೆ!"

ಮಾತುಗಳು ಸಿಡಿಲಿನ ತುಣುಕುಗಳಾಗಿದ್ದುವಾದರೂ ಪೆದ್ದರಾಯನ ದೇಹದ ಶಕ್ತಿಯನ್ನು ಒಳಗೊಳಗೆಯೆ ಯಾರೋ ಹೀರಿಕೊಂಡಂತೆ ಆಯಿತು. ಅವನು ಮಾತುಗಳ ಕೊನೆಯೊಡನೆಯೆ, ಜೀಸತ್ತು ಹೋಗಿದ್ದವನಂತೆ ದಿಂಬಿಗೊರಗಿ ಬಿದ್ದುಬಿಟ್ಟನು. ನಾಲ್ಕೈದು ನಿಮಿಷಗಳ ಬಳಿಕ ನಿದಾನವಾಗಿ ಎದ್ದು ಕುಳಿತು ಹೇಳಿದನು.

"ಈಶ್ವರ! ಇಂದಿನಿಂದ ಸಮಾರಂಭದ ವ್ಯವಸ್ಥೆಯೆಲ್ಲವೂ ನಿನ್ನ ತಲೆಯ ಮೇಲೆ! ಎಲ್ಲವನ್ನೂ ನೀನೆ ನಿಂತು ಮಾಡಿಸಬೇಕು!"

ಕೃತಾರ್ಥಭಾವದಿಂದ ಪೆದ್ದರಾಯನು ಹೇಳಿದನು.

"ಪೆದ್ದಣ್ಣಾ! ಎಂತಹ ಕೆಲಸದ ಹೊರೆಯನ್ನೂ ನನ್ನ ಮೇಲೆ ಹೊರಿಸಬಹುದು! ನಿಮಗಾಗಿ ಯಾವುದನ್ನು ಮಾಡಲಿಕ್ಕೂ – ಯಾವಾಗಲೂ – ಈ ಈಶ್ವರನು ಸಿದ್ಧನಾಗಿರುವನು."

ಪೆದ್ದರಾಯನು ಆಗ ಹಾಕಿದ ನಿಟ್ಟುಸಿರು ಸಮಾಧಾನದುದೋ! ಅಸಮಾಧಾನದುದೋ!

---

## ೧೬ನೆಯ ಪರಿಚ್ಛೇದ

ಗಂಗಣಯ್ಯನು ಕಲ್ಲಿನಾಥೇಶ್ವರನ ಅರ್ಚಕ; ಅರ್ಚಿಸಿಕೊಳ್ಳುತ್ತಿರುವ ದೇವರು ಆತನ ಹೊಟ್ಟೆಬಟ್ಟೆಯ ಚಿಂತೆಯನ್ನು ಪೂರ್ತಿಯಾಗಿ ಇಲ್ಲದಂತೆ ಮಾಡಿದ್ದ. ನಿತ್ಯದ ನೈವೇದ್ಯ-ನಂದಾದೀಪಗಳಿಗಾಗಿ–ಅರಮನೆಯ ಉಗ್ರಾಣದಿಂದ – ಪ್ರತಿದಿನವೂ ಒಂದು ಬಳ್ಳ ಅಕ್ಕಿ, ಅರ್ಧ ಕೊಳಗ ತುಪ್ಪ–ಕಲ್ಲಿನಾಥೇಶ್ವರನಿಗೆ ಸಲ್ಲುತ್ತಿದ್ದಿತು. ದೇವರ ಪ್ರತಿನಿಧಿಯೆಂದರೆ ಪೂಜಾರಿಯೆ ಅಲ್ಲವೆ! ಕಲ್ಲಿನಾಥೇಶ್ವರ ತನ್ನ ಪ್ರತಿನಿಧಿಯಾದ ಗಂಗಣಯ್ಯನಿಗೆ ಆ ಅಕ್ಕಿ–ತುಪ್ಪಗಳನ್ನು ಉಪಯೋಗಿಸಿಕೊಳ್ಳುವ ಸ್ವಾತಂತ್ರ್ಯವನ್ನು ಕೊಟ್ಟು, ತಾನು ತನ್ನ ಗರ್ಭಗುಡಿಯಲ್ಲಿ ಹಾಯಾಗಿ ಕುಳಿತು ಬಿಟ್ಟಿದ್ದ. ಸೋಮವಾರಕ್ಕೊಮ್ಮೆ ಭಕ್ತಜನರು ಸಲ್ಲಿಸುತ್ತಿದ್ದ ಮುಡಿಪಿನ ಪುಡಿಗಾಸುಗಳು ಗಂಗಣಯ್ಯನ ಬಟ್ಟೆಬರೆಗೆ – ಅಡಿಕೆಲೆಗೆ – ಉಂಡೆನಸ್ಯಕ್ಕೆ ಸಾಕಾಗಿ ಉಳಿಯುತ್ತಿದ್ದಿತು. ಅವನು ಒಬ್ಬನೆ ಒಬ್ಬ; ಹೆಂಡತಿ–ಮಕ್ಕಳು ಸತ್ತು, ಹನ್ನೆರಡು ವರ್ಷಗಳಾಗಿ

ಹೋಗಿವೆ; ಅಂದಿನಿಂದಲೂ ಗಂಗಣಯ್ಯನಿಗೆ—ದೇವಾಲಯವೇ ಮನೆ, ಮನೆಯೇ ದೇವಾಲಯ—ಆಗಿಬಿಟ್ಟಿದೆ. ಎಂತಲೆ ತನಗೆ ಸಾಕಾಗಿ ಉಳಿಯುತ್ತಿದ್ದ ಧಾನ್ಯವನ್ನೂ ದುಡ್ಡುಗಳನ್ನೂ ಆತನು, ತನ್ನ ಬಳಿಯಲ್ಲಿ ಕೂಡಿಟ್ಟುಕೊಂಡೇನೂ ಇರುತ್ತಿರಲಿಲ್ಲ; ತನಗೆ ಬೇಕೆನಿಸಿದಾಗ ದೇವರಿಗೆ ವಿಶೇಷ—ಪ್ರಸಾದವೆಂದು, ಏನನಾದರೂ ಸವಿದಿನಿಸುಗಳನ್ನು ಮಾಡಿ, ಪರಿಚಯದ ಜನರನ್ನೆಲ್ಲ ಕರೆದು ಹಂಚಿಬಿಡುವನು. ಇಲ್ಲದಿದ್ದರೆ ದೇವಾಲಯದ ಪೌಳಿಯಲ್ಲಿ ಬಂದು ಬಂದು ಇಳಿದುಕೊಳ್ಳುತ್ತಿದ್ದ ದೇಶ-ವಿದೇಶದ ಭಿಕ್ಷುಕರಿಗೆ ಆ ಕಾಳು-ಕಡಿ, ದುಡ್ಡು-ದುಗ್ಗಾಣಿಗಳನ್ನು ದಾನಮಾಡಿ ಬಿಡುವನು.

ಗಂಗಣಯ್ಯನಿಗೆ ಓದುಬರೆಹವು ಚೆನ್ನಾಗಿ ಗೊತ್ತು. ಧ್ವನಿಯು ದಪ್ಪಗಿನದಾದರೂ ಸಂಗೀತದ ಒಪ್ಪನ್ನು ಪಡೆದಂತಹದು. ದಿನದಿನವೂ ಇಳಿ-ಹೊತ್ತಿನ ಸಮಯದಲ್ಲಿ ಗಂಗಣಯ್ಯನು, ಹರಿಹರನ ಗಿರಿಜಾಕಲ್ಯಾಣವನ್ನಾಗಲಿ—ರಾಘವಾಂಕನ ಹರಿಶ್ಚಂದ್ರಕಾವ್ಯವನ್ನಾಗಲಿ—ಓದಿ, ಪುರಾಣವನ್ನು ಹೇಳುವನು. ಇದನ್ನು ಕೇಳಲಿಕ್ಕೆಂದು ಬೀದಿಯಲ್ಲಿಯ ಅನೇಕ ಜನರು ದೇವಾಲಯಕ್ಕೆ ಬಂದು, ಗಂಗಣಯ್ಯನನ್ನು ಬಳಸಿ ಕುಳಿತಿರುವರು. ಗಂಗ-ಣಯ್ಯನ ಗಮಕವು ಕೇಳುವವರ ಮೇಲೆ ತುಂಬ ಪರಿಣಾಮಮಾಡಿ ಬಿಡುವುದು. ಹರಿಶ್ಚಂದ್ರಕಾವ್ಯದಲ್ಲಿಯ ಹೊಲೆತಿಯರಿಬ್ಬರೂ ಬಂದು, ದೊರೆಯಲ್ಲಿ ರಾಜಚ್ಛತ್ರ ಬೇಡಿದುದನ್ನು ಕೇಳಿ, ತಿರಸ್ಕಾರದಿಂದ ಅವರನ್ನು ಬೈದು ಬಿಡುವವರು ಹಲವರು. ವಿಶ್ವಾಮಿತ್ರನ ನೈಷ್ಠುರ್ಯವನ್ನು ಕೇಳಿದಾಗ 'ಇವನೇನು ಋಷಿಯೋ ರಾಕ್ಷಸನೋ?' ಎಂದು ರೋಷದ ಮಾತುಗಳನ್ನು ಆಡದವರೇ ಅಲ್ಲಿ ಇರುತ್ತಿರಲಿಲ್ಲ. ಮಗನು ಸತ್ತು ಹೋದಾಗ ಅಳುತ್ತಿದ್ದ ಚಂದ್ರಮತಿಯ ಮಾತುಕತೆಗಳನ್ನು ಕೇಳಿ, ಅಲ್ಲಿ ಕಣ್ಣೀರ ಕಾಲುವೆ ಹರಿದು ಬಿಡುವುದು. ಗಿರಿಜಾಕಲ್ಯಾಣದಲ್ಲಿಯ ಬೇರೆ ಬೇರೆ ಪ್ರಸಂಗಗಳನ್ನು ಕೇಳುತ್ತಿರುವಾಗಲಂತೂ—ಜನರಲ್ಲಿಯ ಕಲ್ಲಿನಾಥೇಶ್ವರನ ವಿಷಯಕ್ಕಿದ್ದ—ಭಕ್ತಿಗೆ ಹೆಚ್ಚು ಕಳೆಯೇರಿದಂತಾಗುತ್ತಿದ್ದಿತು. ಪುರಾಣಗಳನ್ನು ಓದುತ್ತಿರುವಾಗ ಗಂಗಣಯ್ಯನಿಗೆ ಅಡಿಕೆಲೆ, ನಸ್ಯ ಒಂದೂ ಬೇಕಾಗುತ್ತಿರಲಿಲ್ಲ; ಅದರಲ್ಲಿಯೆ ಮೈಮರೆತು ಹೋಗಿರುವನು.

ಓದುವುದು ಮುಗಿದೊಡನೆಯೆ—ದಿನದಿನವೂ—ನೆರೆದ ಜನರಲ್ಲಿ ಅನೇಕ

ಪ್ರಕಾರದ ಚರ್ಚೆ-ವಿಚರ್ಚೆಗಳು ನಡೆಯುವುವು. ಆ ಚರ್ಚೆ-ವಿಚರ್ಚೆಗಳಲ್ಲಿ ಬೀದಿಗೂಡಿಸುವ ಮರಿಯಪ್ಪನ ಕಸಬೊರಿಗೆಯ ಕಡ್ಡಿಯನ್ನು ಮೊದಲು ಮಾಡಿಕೊಂಡು, ವಿಜಯನಗರದ ರಾಜಕಾರ್ಯದವರೆಗೆ ಎಲ್ಲ ಸಂಗತಿಗಳೂ ಸಂದರ್ಭಾನುಸಾರ ಬಂದು ಬಂದು ಹೋಗುತ್ತಿರುವುವು. ಅವರವರಲ್ಲಿ ಏನಾದರೂ ತೊಡಕು ಉಂಟಾಗಿ, ಮಾತು ಅರೆದಾಟಕ್ಕೆ ಬಿದ್ದಿತೆಂದಾಗ, ಗಂಗಣಯ್ಯನು ನ್ಯಾಯಾಧೀಶನಾಗಿ ನಿರ್ಣಯ ಕೊಡುತ್ತಿದ್ದ. ಅವನ ನಿರ್ಣಯವನ್ನು ಕೇಳಿ ಸಮಾಧಾನವಾಗಿದ್ದವರೂ ಸುಮ್ಮನಿರಬೇಕು; ಆಗದೆ ಇದ್ದವರೂ ಸುಮ್ಮನಿರಬೇಕು. ಹಾಗೆ ಸುಮ್ಮಗಿರದೆ ಆತನೊಡನೆ ಏನಾದರೂ ವಾದ ಹೂಡಿದವರು, ವಿಶೇಷಪ್ರಸಾದಕ್ಕೆ ಎರವಾಗಬೇಕಾಗುತ್ತಿದ್ದಿತು.

ಸಿಂಹಾಸನಾರೋಹಣದ ಸಮಾರಂಭಕ್ಕೆ ಮೊದಲನೆಯ ದಿನ, ಎಂದಿನಂತೆಯೆ ಗಂಗಣಯ್ಯನ ಪುರಾಣಕಾಲಕ್ಷೇಪವು ಮುಗಿದು ಹೋಯಿತು. ಬಳಿಕ ಸ್ವಲ್ಪಕಾಲದವರೆಗೆ ಅಂದಿನ ಪುರಾಣದಲ್ಲಿಯ ವ್ಯಕ್ತಿಗಳ ಗುಣವರ್ಣನೆಯು ನಡೆಯಿತು. ಅದು ನಡೆದಿರುವಾಗಲೆ ರಾಮಲಿಂಗರಡ್ಡಿ ಮಾತನಾಡಿದ.

"ನಮ್ಮ ರಾಜಶೇಖರ ದೊರೆಗಳೂ ಹರಿಶ್ಚಂದ್ರನಂತವರೇ . . ನೋಡಿ ಗಂಗಣಯ್ಯನವರೇ !"

ಗಂಗಣಯ್ಯ ಮರುಕದ ದನಿಯಲ್ಲಿ ಹೇಳಿದ.

"ಅಹುದು ರಡ್ಡಿ ! ನಿನ್ನ ಮಾತು ನಿಜ ! ಆದರೆ ಏನಿದ್ದು ಏನು ಮಾಡುವುದಿದೆ ! ಅವರು ಸಿಂಹಾಸನವನ್ನು ಏರಲಿಕ್ಕೆ ಒಪ್ಪಿಕೊಳ್ಳಲೇ ಇಲ್ಲವಲ್ಲ !"

ಬೆಲ್ಲದಂಗಡಿಯ ಬುಳ್ಳಪ್ಪ ರೋಷದಿಂದ ಮಾತನಾಡಿದ.

"ಅಂತವರಿಂದೆಲ್ಲಾ ಏನಾದೀತು ಅಯ್ಯನೋರೇ ! ಬರೀ ಒಳ್ಳೆಯತನ ಇದ್ದುಬಿಟ್ಟರೆ ದೊರೆತನಮಾಡಲಿಕ್ಕೆ ಬಂದೀತೇನು ? ನೋಡುತ್ತಿರೋ ಇಲ್ಲವೋ ಹರಿಶ್ಚಂದ್ರನ್ನ ! ಹುಚ್ಚನನ್ನ ಮಗ ! 'ಸತ್ಯ ಸತ್ಯ' ಎಂದು ಹೇಣಾ ಕಾಯೋ ಹೊಲೆಯನ ಮನೇಲಿ ಯಾರಾದರೂ ಆಳಾಗಿ ನಿಂತಾರೇನು ? ಕೈಹಿಡಿದ ಹೆಂಡತೀನ–ಹೊಟ್ಟೇಲಿ ಹುಟ್ಟಿದ ಮಗುವನ್ನ ಯಾರಾದರೂ ಮಾರಿಕೊಂಡು ಬಿಟ್ಟಾರೇನು ? ಒಂದು ವೇಳೆ ನಾನು ಆ ಹರಿಶ್ಚಂದ್ರನ

ಸ್ಥಳದಲ್ಲಿ ಇದ್ದವ್ನಾಗಿದ್ದರೆ, ಆ ಬೂಟಾಟಿಕೇ ದಾಸಯ್ಯನಾದ ವಿಶ್ವಾಮಿತ್ರ-ನನ್ನ, ಒಂದೇ ಒಂದು ಕತ್ತಿಯೇಟಿನಿಂದ ಚೆಂಡಾಡಿಬಿಡುತ್ತಿದ್ದೆ! ಸತ್ಯ, ಒಳ್ಳೆಯತನ, ಎಂತ ಕೂತುಬಿಟ್ಟರೆ ಬದುಕಿನ ವ್ಯವಹಾರ ಸಾಗಬೇಕಾದರೂ ಹೇಗೆ?''

"ಭಲೆ! ಬುಳ್ಳಪ್ಪಾ ನೀನೇ ಹೌದು! ಹಾಗೆಂತಲೇ ಏನಪ್ಪಾ! ನಿನ್ನ ಬೆಲ್ಲಾ ತೂಗುವ ಕಲ್ಲು ಕಾಲುತೂಕ ಕಡಿಮೆಯಾಗಿದೆ! ಅಯ್ಯನೋರೇ ಇದು ನೋಡಿ! ಮೊನ್ನೆಯ ಸಂಕ್ರಾಂತಿಯ ಹಬ್ಬಕ್ಕೆ, ನಮ್ಮ ರಂಗಮ್ಮ ಇಲ್ಲವೇ! ಆಕೆ ಬುಳ್ಳಪ್ಪನಲ್ಲಿ ಎಂಟು ತೂಕ. .ಎಂದು ಬೆಲ್ಲಾತಂದಳು. ಮನೆ-ಯಲ್ಲಿ ಬಂದು ತೂಗಿದರೆ ಅಲ್ಲೇನಿದೆ! ಆರು ತೂಕಕ್ಕೆ ಇನ್ನೂ ಒಂದು ಹರಳಿ-ನಷ್ಟು ಕಡಿಮೆಯಾಯಿತು!" ನೇಗೆಯ ನಾಗಪ್ಪ ನಗುನಗುತ್ತ ನುಡಿದ.

"ಹಾಗಲ್ಲ ನಾಗಪ್ಪಾ! ನಾ ಹೇಳತೇನೆ ಕೇಳಿಲ್ಲಿ! ಬುಳ್ಳಪ್ಪನ ಕೈಗೆ ತಕ್ಕಡಿಯ ದಂಡಿಗೆಯಲ್ಲದೆ, ಹರಿಶ್ಚಂದ್ರನ ಕತ್ತಿ ಚೆಂದ ಕಂಡೀತೇ?" ಮೂಲೆಮನೆಯ ಮಹಾಲಿಂಗನು ಮಾತನಾಡಿದ. ಕೂಡಿದ್ದ ಜನರಲ್ಲಿ ನಗೆಯ ಹೊಳೆ ಹರಿದುಬಿಟ್ಟಿತು. ಎಲ್ಲೆಲ್ಲಿಯೂ 'ಹಾ, ಹ್ಹಾ, ಹ್ಹಾ,' 'ಹಿ, ಹ್ಹಿ ಹ್ಹೀ, !'. ಎಲ್ಲರ ಜೊತೆಯಲ್ಲಿ ಬುಳ್ಳಪ್ಪನೂ ನಗುತ್ತಿದ್ದ.

ಬಣ್ಣಗಾರರ ಬಸವಂತಯ್ಯ ಹೇಳಲು ತೊಡಗಿದ.

"ಈ ಸಲಕ್ಕೆ ಪಟ್ಟಣದ ಸಿಂಗಾರ ಬಲೆಬಲೆ ನಡೆದುಬಿಟ್ಟಿದೆಯಪ್ಪಾ! ಹಿಂದಿನ ದೊರೆಗಳ ಪಟ್ಟಾಭಿಷೇಕವನ್ನೂ ನಾನು ನೋಡಿದ್ದೆ – ಇಷ್ಟೇನೂ ಇರಲಿಲ್ಲ ಬಿಡಿ – ಸೊಬಗು ಸಿಂಗಾರ! ಬೀದಿಬೀದಿಗೆ ಅಗಸೆಗಳೇನು! ಮಕರ ತೋರಣಗಳೇನು! ಚಿತ್ರವಿಚಿತ್ರವಾದ ಗುಡಿ-ಪತಾಕೆಗಳೇನು! ಅರಮನೆ-ಯಂತೂ ಇಂದ್ರನ ಅಮರಾವತಿ ಭೂಮಿಗೆ ಇಳಿದು ಬಂದಹಾಗೆ ಕಾಣುತ್ತದೆ!"

"ಎಲ್ಲವೂ ಸಾಳುವ ನರಸಿಂಹನಾಯಕರ ವ್ಯವಸ್ಥೆಯೇನೋ! ಅಲ್ಲವೆ?" ಬುಳ್ಳಪ್ಪ ಕೇಳಿದ.

"ಇಲ್ಲಿ ಕೇಳಿ! ಈ ಬುಳ್ಳಪ್ಪನವರಿಗೆ ಅರ್ಧಊರ ಸುದ್ದಿಯೇ ಗೊತ್ತಿರು ವುದಿಲ್ಲ; ನರಸಿಂಹನಾಯಕರು ಊರಲ್ಲಿಯಾದರೂ ಇದ್ದಾರೇನು ಬುಳ್ಳಪ್ಪ?" ಮಹಾಲಿಂಗನು ಕೇಳಿದ.

"ಊರಲ್ಲಿ ಇಲ್ಲವೇ? ಎಲ್ಲಿಗೆ ಹೋಗಿದ್ದಾರೆ?" ರಾಮಲಿಂಗರಡ್ಡಿ

ಮುರಳಿ ಕೇಳಿದ.

“ ಅವರು ಚಂದ್ರಗಿರಿಗೆ ಹೋಗಿ ನಾಲ್ಕು ದಿನಗಳಾದುವಂತೆ! ಏನು ರಡ್ಡೀ ! ನಿನಗೆ ಬುಳ್ಳಪ್ಪನ ಬೆಲ್ಲದ ಅಂಗಡಿಯು ಹೊರತು ಬೇರೆಯ ಪ್ರಪಂಚವೇ ಇಲ್ಲವೆಂದು ತೋರುತ್ತದೆ; ಸ್ವಲ್ಪ ನಗರದಲ್ಲಿ ತಿರುಗಾಡು; ಎಲ್ಲ ಸಂಗತಿಯೂ ತಿಳಿಯುತ್ತದೆ. ”

ಮಹಾಲಿಂಗನಾಡಿದ ಮಾತಿನ ಕೊನೆಯೊಡನೆಯೆ ಇನ್ನಾವನೋ ಮಾತನಾಡಿದ.

“ ಹೀಗೇನು ಹೇಳುತ್ತೀಯೆ ಮಾಲಿಂಗಪ್ಪಾ ! ಬುಳ್ಳಪ್ಪನ ಅಂಗಡೀ ಬಿಟ್ಟರೆ, ರಡ್ಡಿಗೆ ದಿನಕ್ಕೆ ಒಂದು ಹಿಡಿ ಹೊಗೆಸೊಪ್ಪು ಸಿಕ್ಕೀತೆಲ್ಲಿಂದ ? ”

ಮತ್ತೊಂದು ಮಾತು ಹೊರಕ್ಕೆ ಬಂದಿತು.

“ ಬುಳ್ಳಪ್ಪನೇನು – ರಡ್ಡಿಗೆ – ಹೊಗೆಸೊಪ್ಪು ಸುಮ್ಮನೆ ಕೊಡುತ್ತಾನೆಯೇ ? ಆರು ಹಣ ಬಾಡಿಗೆ ಕೊಡಬೇಕಾಗಿದ್ದಲ್ಲಿ ಮೂರು ಹಣ ಕೊಡುತ್ತಾನೆ.. ರಡ್ಡಿಯ ಚಕ್ಕಡಿಗೆ ! ಅಬಾಬಾ ! ಇದನ್ನು ಬಿಟ್ಟುಬಿಡಿ ನೀವು ! ಎತ್ತಕಡೆಗೆ ಬಿದ್ದರೂ ಸೆಟ್ಟಿ ತನ್ನ ಲೆಕ್ಕದೊಳಗೆ ಇರುತ್ತಾನೆ ! ”

‘ ಸಮಾರಂಭವನ್ನು ಕೂಡ ಬಿಟ್ಟುಹೋಗುವಂತಹದೇನಪ್ಪಾ . . ನರಸಿಂಹನಾಯಕರಿಗೆ ಕೆಲಸ ? ’ ಕೊತ್ತಳದ ಕಾಶೀಪತಿಯು ಕೆಣಕುದನಿಯಲ್ಲಿ ಕೇಳಿದನು.

“ ಎಲ್ಲವೂ ಮೊದಲಿನ ದೊರೆಗಳ ಖ್ಯಾತಿ ಕಾಶೀಪತೀ ! ಕೇಳಿಲ್ಲವೇ ? ಎಲ್ಲಕಡೆಗೂ ಪುಂಡುಬಂಡಾಯಗಳ ಸುದ್ದಿ ! ಕಳವು-ಕೊಳ್ಳೆ-ಸುಲಿಗೆಗಳ ವರ್ತಮಾನ ! ಚಂದ್ರಗಿರಿಯಲ್ಲಿ ತುಳುವ ನರಸಿಂಹನೋ ಯಾರೋ; ದೊಡ್ಡ ದೊಂಬೆಗಾರನಿದ್ದಾನಂತೆ. ಅವನನ್ನು ಮಣ್ಣುಮುಕ್ಕಿಸಿ ಬರಲಿಕ್ಕೆ ನರಸಿಂಹನಾಯಕರು ಇಲ್ಲಿಂದ ಹೊರಟುಹೋಗಿದ್ದಾರಂತೆ ! ”

ಬಣ್ಣಗಾರ ಬಸವಂತಯ್ಯನು ಹೀಗೆ ಹೇಳಿದೊಡನೆಯೆ ಮಹಾಲಿಂಗನು ತಡೆಯದೆ ಮಾತನಾಡಿದ.

“ ಏನೂ ಗೊತ್ತಿಲ್ಲದೆ ಹಾಗೆಲ್ಲಾ ಏನೇನಾದರೂ ಹೇಳಬೇಡವೋ ಬಸವಂತಯ್ಯಾ ! ‘ ತುಳುವ ನರಸಿಂಹ ’ ಎಂದರೆ ನರಸಿಂಹನಾಯಕರಿಗೆ ಸೋದರಳಿಯನಾಗಬೇಕು. ಆತನು ಚಂದ್ರಗಿರಿಯ ಮಂಡಲದ ಆಡಳಿತಗಾರ;

ದೊಂಬಿಯೆಬ್ಬಿಸಿದವನು ಅವನಲ್ಲ; ತೆಲುಗುದೇಶದಲ್ಲಿಯ ಪಾಳೆಯಗಾರರು ಯಾರುಯಾರೋ ಎಬ್ಬಿಸಿದ್ದಾರಂತೆ!"

"ನನಗೇನು ಗೊತ್ತಪ್ಪಾ! ಯಾರೋ ತುಳುವ ನರಸಿಂಹ..ಎಂದು ಏನೋ ಹೇಳುತ್ತಿದ್ದರು."

"ಯಾರೋ ಏನೋ ಹೇಳಿದುದನ್ನು ನೀನೂ ಏನೋ ಏನೋ-ಹೇಳಿಬಿಟ್ಟೆ–ಸರಿ!"

ಸೊನ್ನಾರರ ಸುಬ್ಬಾಚಾರಿ ಹೇಳಲಿಕ್ಕೆ ಆರಂಭಿಸಿದ.

"ನೋಡಿ; ಈಗ ತೆಲುಗು ದೇಶ..ಎಂದೊಡನೆಯೆ ಥಟ್ಟನೆ ಜ್ಞಾಪ-ಕಕ್ಕೆ ಬಂತು. ಪಟ್ಟಾಭಿಷೇಕದ ಸಮಾರಂಭಕ್ಕಾಗಿ, ಎಲ್ಲಿಯೆಲ್ಲಿಂದಲೋ ಜನ–ನೆರೆಬಂದಹಾಗೆ–ಬಂದೇ ಬರುತ್ತಿದೆಯಲ್ಲ! ಒಳಗೋಟೆಯ ಅರಮನೆ-ಗಳಂತೂ ಬೇರೆಬೇರೆ ದೇಶಗಳಿಂದ ಬಂದಿದ್ದ ರಾಜರು, ಸಾಮಂತರು, ಪಾಳೆಯ ಗಾರರು ಇವರಿಂದ ತುಂಬಿಹೋಗಿದೆ."

"ಅದೆಲ್ಲವೂ ಆಯಿತಪ್ಪಾ! ಹೊಸ ದೊರೆಗಳ ಕಾಲದಲ್ಲಿ ದಂಡ-ನಾಯಕರ ಅಧಿಕಾರಕ್ಕೆ ಯಾರು ಬರುತ್ತಾರೆ... ಎನ್ನುತ್ತೀರಿ.?" ಕಾಶೀಪತಿ ಕೇಳಿದ.

"ಬೇರೆ ಯಾರಿದ್ದಾರೆ? ನರಸಿಂಹನಾಯಕರೇ!" ಕೂಡಲೆ ಮಹಾಲಿಂಗನು ಉತ್ತರಕೊಟ್ಟ.

"ಅವರು ಬರುವುದು ಶಕ್ಯವೇ ಇಲ್ಲ!" ಕಾಶೀಪತಿ ನುಡಿದ.

"ನಿನಗೆ ಹುಚ್ಚು ಕಾಶೀಪತೀ! ಅವರ ಹೊರತು ಇನ್ನು ಯಾರು ಬರುತ್ತಾರೆನ್ನುತ್ತೀಯೋ?"

"ನನ್ನ ಮಾತನ್ನು ಪರೀಕ್ಷೆಮಾಡಿ ನೋಡು ಬೇಕಾದರೆ..ಮಹಾ-ಲಿಂಗಾ! ಮುಖ್ಯ ಸೈನ್ಯದಲ್ಲಿ ರಾವುತರ ಮೇಲಾಳು ಈಶ್ವರನಾಯಕನೆಂದು ಇದ್ದಾನಲ್ಲ! ಅವನು ಆ ಸ್ಥಳಕ್ಕೆ ಬರುವವನಿದ್ದಾನೆ. ನನಗೆ ಅಂತರಂಗದ ವಿಷಯವೆಲ್ಲ ಗೊತ್ತಾಗಿದೆ."

"ನಿನ್ನ ತಲೆ ಗೊತ್ತಾಗಿದೆ ನಿನಗೆ! ಈಶ್ವರನಾಯಕನು ಬರುತ್ತಾನಂತೆ ಆ ಸ್ಥಳಕ್ಕೆ! ಈಶ್ವರನಾಯಕನು ಬರುತ್ತಾನೋ? ಕೊತ್ವಾಳದ ಕಾಶೀಪತಿ ಬರುತ್ತಾನೋ?"

ಕಾಶೀಪತಿಗೆ ಬಮ್ಮಲೆ ರೇಗಿಹೋಯಿತು. ಇನ್ನು ಅವನು ಏನನೋ ಮಾತನಾಡುವವನು; ಅಷ್ಟರಲ್ಲಿಯೆ ಗಂಗಣಯ್ಯ ನಡುವೆ ಮಾತನಾಡಿದ:

“ ಅಹುದು ಬಿಡೋ ಮಹಾಲಿಂಗಾ ! ಕಾಶೀಪತಿ ಹೇಳಿದ್ದ ಸಂಗತಿಯನ್ನೇ ಹೇಳುವ ಹಲವು ಸುದ್ದಿಗಳು ಉರೊಳಗೆ ಸುತ್ತಾಡುತ್ತಿವೆ. ”

ಗಂಗಣಯ್ಯನ ಮಾತಿನಿಂದ ಬಳೆಯುಲಿದ್ದ ಕಾಶೀಪತಿ-ಮಹಾಲಿಂಗರ ವಾದವು ಅಲ್ಲಿಯೆ ನಿಂತಿತು. ಸಿದ್ಧರಾಮಯ್ಯನವರು ಸ್ವಲ್ಪ ವಯಸ್ಸಾದವರು; ಅವರು ತಮ್ಮ ಹಿರಿಯತನದ ಅಧಿಕಾರವಾಣಿಯಲ್ಲಿ ಹೇಳಿದರು.

“ ಯಾರು ದಂಡನಾಯಕರಾದ ಭಾಗ್ಯ ನಮಗೇನು ಅಯ್ಯನವರೇ ! ಏಳಿ ! ಬೇಗನೆ ಎದ್ದು, ಅಮಾವಾಸ್ಯೆಯ ಮಂಗಳಾರತಿ ತೀರಿಸಿ, ಪ್ರಸಾದ ಕೊಟ್ಟುಬಿಡಿ ! ”

ಗಂಗಣಯ್ಯ ಎದ್ದು ಕಲ್ಲಿನಾಥೇಶ್ವರನಿಗೆ ಮಂಗಲಾರತಿಯನ್ನೆತ್ತಿದ. ಬೆಲ್ಲ-ಕೊಬ್ಬರಿಯ ಪ್ರಸಾದವನ್ನು ಎಲ್ಲರಿಗೂ ಹಂಚಿದ. ‘ ನಾಳೆಯ ಸಮಾರಂಭವನ್ನು ನೋಡಲಿಕ್ಕೆ ಹೋಗಲೇಬೇಕು ! ’ ಎಂದು ಎಲ್ಲರೂ ಮಾತನಾಡಿಕೊಳ್ಳುತ್ತ ಮನೆಗಳಿಗೆ ಹೊರಟುಬಿಟ್ಟರು. ಗಂಗಣಯ್ಯನು ಗರ್ಭಗುಡಿಯಲ್ಲಿ ಕುಳಿತು – ಗಟ್ಟಿಯಾಗಿ – ಕಲ್ಲಿನಾಥಾಷ್ಟಕವನ್ನು ಹೇಳಲು ತೊಡಗಿದ.

---

## ೧೭ನೆಯ ಪರಿಚ್ಛೇದ

ಇಂದು ಸಿಂಹಾಸನಾರೋಹಣದ ದಿವಸ. ವಿಜಯನಗರದ ವೈಭವಲಕ್ಷ್ಮಿಯು ನವವಧುವಿನಂತೆ ಶೃಂಗರಿಸಿಕೊಂಡು ನಿಂತಿದ್ದಾಳೆ. ರಾಜಬೀದಿಗಳಲ್ಲಿ ಎಲ್ಲೆಲ್ಲಿಯೂ ಕನಕತೋರಣಗಳೂ ತಳಿರುತೋರಣಗಳೂ ತೊನೆದು ತೂಗುತ್ತಿವೆ. ಮುಗಿಲಿಗೆ ಮುತ್ತುಕೊಡಲು ಹೊರಟಂತೆ – ನಿಡಿದಾಗಿ ನಿಂತುಕೊಂಡಿದ್ದ – ಧ್ವಜಕೇತನದಂಡಗಳ ಮೇಲಿನ ವಿವಿಧವರ್ಣದ ಪಟಗಳು ಗಾಳಿಗೆ ಪಟಪಟಿಸುತ್ತಿವೆ. ಬೀದಿಗಳ ಇಕ್ಕಡೆಯ ಸೌಧಾಗ್ರದಲ್ಲಿಯೂ ಕಲಶಕನ್ನಡಿಗಳಿಂದ ಕೂಡಿದ್ದ ಕಿರುಗುಡಿಗಳು ನಗೆಮೊಗದಿಂದ ನಿಂತುಕೊಂಡಿವೆ. ಬೇರೆ ಬೇರೆ ವಾದ್ಯವಾದನಕಾರರಿಗಾಗಿ ಅಲ್ಲಲ್ಲಿ ನಿರ್ಮಿಸ-

ಲಾಗಿದ್ದ ಚಿತ್ರವಿಚಿತ್ರವಾದ ನೆಲೆಮುಂಚಿಕೆಗಳು, ಬೇರೆ ಬೇರೆ ಮಂಗಲವಾದ್ಯ-ಸ್ವನಗಳನ್ನು ದಿಕ್ಕುದಿಕ್ಕುಗಳಲ್ಲಿಯೂ ತುಂಬಿಬಿಡುತ್ತಲಿವೆ. ಕಂಪುನೀರಿನ ತಳಿಯಿಂದ, ರಂಗುರಂಗಿನ ಸಾರಣೆ-ಕಾರಣೆಗಳಿಂದ, ಕುಸುರುಕುಸುರಿನ ಬಳ್ಳಿ-ಸುಳಿವುಗಳುಳ್ಳ ರಂಗವಲ್ಲಿಗಳಿಂದ ರಮಣೀಯವಾಗಿರುವ ಬೀದಿಯ ನೆಲಗಳು – ಮನೆಗಳ ಮುಂಬದಿಗಳು – ಯಾರ ಕಣ್ಮನಗಳನ್ನೂ ಸೆಳೆದು ಕೊಳ್ಳುತ್ತಲಿವೆ.

ದಾರಿದಾರಿಗಳಲ್ಲಿಯೂ ದೇಶವಿದೇಶದ ಜನರ ಜಾತ್ರೆಯು ಮೇರೆವಿಾರಿ ಹೋಗಿಬರುವುದರಲ್ಲಿದೆ. ಮುಖ್ಯ ಮುಖ್ಯ ಬೀದಿಗಳಂತೂ ರಥ, ಅಂದಣ, ಆನೆ, ಕುದುರೆ, ಒಂಟೆ ಮೊದಲಾದ ವಾಹನಗಳಿಂದ ಕಿಕ್ಕಿರಿದು ಹೋಗಿವೆ. ಆನೆಗಳ ಕೊರಳ ಗಂಟೆಗಳ ಘಣಘಣನೆಂಬ ಸಪ್ಪಳ; ಕುದುರೆಗಳ ಕೊರಳ ಗೆಜ್ಜೆಸರಗಳ ಖಳಿಖಳಿಲೆಂಬ ಸಪ್ಪಳ; ಮುಂದುವರಿವ ರಥದ ಗಾಲಿಗಳ ಘರಘರನೆಂಬ ಸಪ್ಪಳ; ಸಾರಥಿಗಳ – ಮಾವುತರ – ರಾವುತರ – 'ಹೈಹೈ!' 'ಹೋಹೋ!' 'ತ್ಚ್‌ತ್ಚ್' ಎಂಬ ಬೆದರಿಕೆ-ಎಚ್ಚರಿಕೆಗಳ ಕೂಗಾಟ; ನಡೆಯುತ್ತಲೆ ಹೋಗುವ ಜನರ ಬೀದಿಮಾತುಗಳ ಕಳಕಳ; ಇವೆಲ್ಲವೂ ಕೂಡಿ ಉಂಟಾಗಿದ್ದ ಮಿಶ್ರಧ್ವನಿಯು ಸಾಗರದ ಘೋಷವನ್ನು ಸರಿಗಟ್ಟಿ ನಿಂತಿದೆ.

ಅರಮನೆಯ ಹೆಬ್ಬಾಗಿಲ ಮುಂದಣ ಬಯಲಲ್ಲಿ ನೋಡಬೇಕು! ಸಟ್ಟನಡುವೆ ವಿಜಯನಗರದ ಸಾಮ್ರಾಜ್ಯಾಂಕಿತವಾದ ವರಾಹಧ್ವಜವು, ಎಲ್ಲಕ್ಕೂ ಎತ್ತರವಾಗಿ ನೀಡಿಕೊಂಡು ನಿಂತಿದೆ. ಧ್ವಜದ ಎಡಕ್ಕೆ ಬಲಕ್ಕೆ ಪಟ್ಟದ ಆನೆಕುದುರೆಗಳು, ಸಾಮ್ರಾಜ್ಯದ ಸಂಪತ್ತಿಯನ್ನು ಪ್ರದರ್ಶಿಸುತ್ತಿರುವ ಅಲಂಕಾರಗಳಿಂದ ಕೂಡಿ, ರಾಜಗಾಂಭೀರ್ಯದಿಂದ ನಿಂತುಕೊಂಡಿವೆ. ಅವುಗಳನ್ನು ಬಳಸಿಕೊಂಡು, ಕಾಲಾಳುಗಳು ಶಸ್ತ್ರಧಾರಿಗಳಾಗಿ ಪದ್ಮವ್ಯೂಹದಲ್ಲಿ ನಿಂತುಕೊಂಡಿದ್ದಾರೆ. ಆ ವ್ಯೂಹದ ಬಲಗಡೆಗೆ ರಂಗುರಂಗಿನ ರೇಷ್ಮೆಯ – ಜರಿಯ – ಜೂಲುಗಳಿಂದಲೂ ಚಿನ್ನರನ್ನಗಳ ತಲೆದೊಡವಿನಿಂದಲೂ ಅಲಂಕೃತವಾದ ಕೊಂಬಿನಾನೆಗಳು – ಸಾಲುಸಾಲಾಗಿ – ಸಾವಿರ ದೆಣಿಕೆಯಲ್ಲಿ – ನಿಂತು, ಉಯ್ಯಾಲೆಯಾಡುತ್ತಲಿವೆ. ಎಡಗಡೆಗೆ ಜಾತಿಜಾತಿಯ ಕುದುರೆಗಳು, ಹೊಂದೊಡವುಗಳಿಂದಲೂ, ಕುಸುರುಕುಸುರಿನ ತಲೆಯ ತುರಾಯಿಗಳಿಂದಲೂ, ಹಸನಾದ ಕೊರಳಗೊಂಡೆಯ – ಹೊಸಹೊಸತಾದ

ಜೀನುಗಳಿಂದಲೂ ಸಜ್ಜಾಗಿ, ಓರಣಗೊಂಡು ನಿಂತುಕೊಂಡಿವೆ. ವರಾಹ-ಧ್ವಜದ ಪಟದ ಫಡಫಡಾಟ, ಆನೆಗಳ ಮೈ-ಸೊಂಡಿಲುಗಳ ತೂಗಾಟ, ಕುದುರೆಗಳ ಉತ್ಸಾಹದ ಫುರ್‌ಫುರಾಟ, ಇವೆಲ್ಲವೂ ಸೇರಿ ನೆಲಮುಗಿಲು ಗಳನ್ನೆಲ್ಲ ಚೈತನ್ಯದಿಂದ ತುಂಬಿಬಿಡುತ್ತಲಿವೆ. ಹೆಬ್ಬಾಗಿಲ ನೆಲೆವಾಡದ ಮಂಗಲವಾದ್ಯಗಳ ಅವಿಶ್ರಾಂತವಾದ ಮೊಳಗು, ಎಲ್ಲರ ಕಿವಿಗಳಲ್ಲಿಯೂ ಸೇರಿ, ಉಲ್ಲಾಸ–ಉತ್ಸಾಹಗಳಲ್ಲಿ ರೂಪಾಂತರಗೊಂಡು, ನರನರಗಳಲ್ಲಿಯೂ ಹರಿದಾಡುತ್ತಲಿದೆ.

ವಿಜಯನಗರದ ಅರಮನೆಯೆಂದರೆ, ಮೊದಲೆ ಅದು ಕಲಾಸುಂದರಿಯ ಆವಾಸ; ಆದರಲ್ಲಿಯೂ ಇಂದಿನ ಅದರ ಶೃಂಗಾರವಂತೂ ಅಪೂರ್ವ ವಾಗಿದ್ದಿತು. ಅರಮನೆಗೆ ಉಪಯೋಗಿಸಲಾಗಿದ್ದ ಕಲ್ಲುಗಾರೆಗಳು ಎಲ್ಲೆ ಲ್ಲಿಯೂ ಹೊರಕ್ಕೆ ಕಾಣದಂತೆ–ಎಲ್ಲ ಕಡೆಗೂ ಗೋಡೆಗಳಿಗೆ–ಬಣ್ಣ ಬಣ್ಣದ ಚೀನಾಂಬರದ ನೇಪಥ್ಯಗಳು; ಮೇಲ್‌ಬದಿಗೆ ಬೆಳ್ಳನೆಯ ಮೇಲ್ಹಾಸು ಗಳು; ನೆಲದಲ್ಲಿ – ಔಚಿತ್ಯವರಿತು – ಶತರಂಜಿ, ರತ್ನಗಂಬಳಿ, ತೀವಾಸಿಗೆಗಳು. ಕುಸುರುಕುಸುರಿನ ಗಾಜಿನ ಜುಮ್ಮುರು, ಗುಂಡು, ಹಂಡೆಯದೀಪಗಳು ಮೇಲ್ಹಾಸಿನ ಕೆಳಕ್ಕೆ ನೇತುಕೊಂಡಿವೆ. ದಾರಿಯ ಕಂಬಗಳೆರಡೆರಡರ ನಡುವೆ ನಿಲ್ಲಿಸಿದ್ದ ಕನ್ನಡಿಯ ಕಮಾನುಗಳು, ಹೋಗುಬರುವ ಜನರ ರೂಪುಗಳನ್ನು ತಮ್ಮಲ್ಲಿ ಹಿಡಿದು ಹಿಡಿದು ಇಟ್ಟುಕೊಳ್ಳುತ್ತಲಿವೆ.

ಮೂರ್ಧಾಭಿಷೇಕಕ್ಕೆ ಒಳ್ಳೆಯ ಲಗ್ನವು ಹತ್ತುಗಳಿಗೆಗಳಾದ ಬಳಿಕ ಇದೆಯೆಂದು ಅರಮನೆಯ ಜೋಯಿಸರು ನಿರ್ಣಯಿಸಿ, ಗಳಿಗೆಬಟ್ಟಲನ್ನು ಚಿನ್ನದ ಪಡಿಗದ ನೀರಲ್ಲಿ ತೇಲಲುಬಿಟ್ಟು, ಅದರಲ್ಲಿಯೆ ಕಣ್ಣಿಟ್ಟು ಕುಳಿತು ಕೊಂಡಿದ್ದರು. ರಾಜಪ್ರಾಸಾದದ ಮುತ್ತಿನ ಚಾವಡಿಯಲ್ಲಿ, ರಾಜಪುರೋ-ಹಿತರು ಬ್ರಾಹ್ಮಣವೃಂದದೊಂದಿಗೆ ಕುಳಿತು, ಪೆದ್ದರಾಯನಕಡೆಯಿಂದ – ಸಿಂಹಾಸನಾರೋಹಣಕ್ಕೆ ಮೊದಲಿನ – ಬೇರೆ ಬೇರೆ ಶಾಂತಿಹೋಮಗಳನ್ನು ಮಾಡಿಸುತ್ತಿದ್ದರು. ಆಗ ನಾರಾಯಣಪಂಡಿತರು ಬ್ರಾಹ್ಮಣಸಭೆಯಲ್ಲಿ – ರಾಜಪುರೋಹಿತರ ಬಲಗಡೆಗೆ – ಕುಳಿತಿದ್ದರು.

* * * *

ಮೂರ್ಧಾಭಿಷೇಕ, ಸಿಂಹಾಸನಾರೋಹಣಗಳು ನಡೆಯಬೇಕಾಗಿದ್ದ

ಜಂತದ ಚಾವಡಿಯು ಬೇರೆ ಬೇರೆ ಮಾಂಡಲಿಕರಿಂದ, ಸಾಮಂತಮನ್ನೆಯ ರಿಂದ, ಪಾಳೆಯಗಾರರಿಂದ, ಸೇನಾಪತಿಗಳಿಂದ, ರಾಜಶ್ರೇಷ್ಠಿಗಳಿಂದ, ನಗರಪ್ರಮುಖರಿಂದ – ಇಷ್ಟರಲ್ಲಿಯೆ – ತುಂಬಿ ಗಜಬಜಿಸುತ್ತಿರುವುದು. ಆ ಓಲಗಸಾಲೆಯ ಪಶ್ಚಿಮದ ಬದಿಗೆ – ಸಟ್ಟನಡುವೆ – ಪೂರ್ವಾಭಿಮುಖವಾಗಿ ಮಂಡಿಸಲಾಗಿದ್ದ ಸಾಮ್ರಾಜ್ಯದ ಸುವರ್ಣಸಿಂಹಾಸನವು ಗಂಭೀರಭಾವ ದಿಂದ ನಿಂತುಕೊಂಡಿದೆ. ಸಿಂಹಾಸನದ ಹಿಂಬದಿಯ ರತ್ನಖಚಿತ ಪ್ರಭಾ ವಲಯದ ತುದಿಯಿಂದ, ಮುಂದಕ್ಕೆ ಮಣಿದುಬಂದಿದ್ದ ದಂಡದ ತುದಿಗೆ, ಶ್ವೇತಚ್ಛತ್ರವು ಮುತ್ತಿನಜಾಳಿಗೆಯ ಅಂಚಿನೊಂದಿಗೆ ಅರಳಿ ನಿಂತಿದೆ. ಅದರ ವಜ್ರದ ಕಳಸವು, ಸುತ್ತಲೂ ಕಿರಣಗಳನ್ನು ಹರಿಸಿ, ಪ್ರಕಾಶದ ಪುಂಜವೊಂದನ್ನು ಮಾಡಿ ಇರಿಸಿದಂತೆ ಕಾಣುತ್ತಿದೆ. ಸಿಂಹಾಸನದ ಎಡಕ್ಕೆ ಬಲಕ್ಕೆ ಇದ್ದ ನಾಲ್ಕಾರು ಆಸನಗಳು ಮಾತ್ರ ಬರಿಯವಾಗಿಯೆ ಇವೆ. ಉಳಿದುವೆಲ್ಲವೂ ಸದಸ್ಯರಿಂದ ತುಂಬಿತೋರುತ್ತಿವೆ. ಸಿಂಹಾಸನದ ಮೆಟ್ಟಿಲಿ ನಿಂದ ಮೊದಲುಮಾಡಿ, ಓಲಗಸಾಲೆಯ ಮುಂಬಾಗಿಲವರೆಗೂ ಹಾಸಿದ್ದ ನಿಡಿದಾದ ಕೆಂಪು ಕಿನ್‌ಕಾಫಿನ ಪಾವುಡವು, ವಿಜಯನಗರದ ಸಮ್ರಾಟನ ಪಾದಧೂಳಿಯನ್ನು ಕಾಯುತ್ತ ಬಿದ್ದುಕೊಂಡಿದೆ.

ಈಶ್ವರನಾಯಕನಿಗೆ ಇಂದು ಬಿಡುವೇ ಇದ್ದಂತೆ ಕಾಣಲಿಲ್ಲ; ಒಮ್ಮೆ ಹೆಬ್ಬಾಗಿಲೆದುರಿನ ಧ್ವಜದ ಬಯಲಲ್ಲಿ ಕಂಡರೆ, ಇನ್ನೊಮ್ಮೆ ಶಾಂತಿಹೋಮ ನಡೆದಿರುವಲ್ಲಿ ಕಾಣುವನು. ಒಂದು ಕ್ಷಣದಲ್ಲಿ ಕುದುರೆಯೇರಿದವನಾಗಿ ಬೀದಿಯಲ್ಲಿ ಕಾಣುತ್ತಿದ್ದರೆ, ಇನ್ನೊಂದು ಕ್ಷಣದಲ್ಲಿ ಮುಖ್ಯ ಓಲಗಸಾಲೆ ಯೊಳಕ್ಕೆ ಕಾಣುವನು.

ಬೆಳಗಿನಿಂದಲೂ ಇದುವರೆಗೆ ಕಳೆದುಹೋಗಿದ್ದ ಒಂಬತ್ತು ಗಳಿಗೆಗಳು ಯಾವಾಗ, ಹೇಗೆ ಹೋದುವೆಂಬುದರ ಎಚ್ಚರು ಯಾರಿಗೂ ಇರಲಿಲ್ಲ. ಮೂರ್ಧಾಭಿಷೇಕಕ್ಕೆ ಇನ್ನು ಒಂದೆ ಒಂದು ಗಳಿಗೆಯ ಅವಕಾಶವಿರುವಾಗ, ಈಶ್ವರನಾಯಕನು ಓಲಗಸಾಲೆಯೊಳಕ್ಕೆ ಬಂದು, ಎಲ್ಲ ವ್ಯವಸ್ಥೆಯನ್ನೂ ಕಣ್ಣಿಟ್ಟು ನೋಡುತ್ತ ತಿರುಗಾಡಲು ತೊಡಗಿದನು. ಆಗಲೆ ರಾಜಶೇಖರನು ಓಲಗಸಾಲೆಯೊಳಗೆ ಪ್ರವೇಶಿಸಿದನು. ಕೂಡಲೆ ಸಭೆಗೆ ಸಭೆಯು ಒಮ್ಮೆಲೆ ಕೂಗಿತು: ಜಯ ರಾಜಶೇಖರ ಮಹಾರಾಯ!' 'ಜಯ ಕರ್ಣಾಟಕ

ರಾಜ್ಯಲಕ್ಷ್ಮೀ? 'ಜಯ ಭುವನೇಶ್ವರೀ!'. ಕೇಳಿ ಈಶ್ವರನಾಯಕನ ಎದೆಯು ತತ್ತರಗೊಂಡಿತು. ಆದರೂ ಓಲಗಕ್ಕೆ ಉಚಿತವಾದ ಆದರವನ್ನು ತೋರಿ-ಸುತ್ತ, ರಾಜಶೇಖರನನ್ನು ಬರಮಾಡಿಕೊಂಡು, ಸಿಂಹಾಸನದ ಬಲಗಡೆಗಿರುವ ಮೊದಲನೆಯ ಆಸನದಲ್ಲಿ ಕುಳ್ಳಿರಿಸಿದನು. ಬಳಿಕ ಮುಖ್ಯ ದಳಪತಿ ದೇವಣ್ಣನಾಯಕರು ಬಂದರು. ಅವರನ್ನೂ ಆದರಿಸಿ, ಸಿಂಹಾಸನದ ಎಡ-ಗಡೆಯ ಆಸನದಲ್ಲಿ ಕುಳ್ಳಿರಿಸಿ ಆಯಿತು. ವಿಜಯನಗರದ ದುರ್ಗಾಧಿಪತಿ ಕುಮಾರನಾಯಕನು ಬಂದ; ದೇವಣ್ಣನಾಯಕರ ಬಳಿಯ ಪೀಠವನ್ನು ಹಿಡಿದು ಕುಳಿತ. ಅರಮನೆಗೆ ಸೇರಿದ್ದ ಹೆಂಗುಸುರೂ ನಗರದಲ್ಲಿಯ ಬೇರೆ ಬೇರೆ ಪ್ರತಿಷ್ಠಿತ ಜನರ ಮನೆಯ ಹೆಂಗುಸುರೂ ಬಂದು ಬಂದು, ಅವರಿಗಾಗಿ ನಿರ್ಮಿಸಲಾಗಿದ್ದ ನೇಪಥ್ಯದೊಳಕ್ಕೆ, ತಾರತಮ್ಯವನ್ನರಿತು ಎಡೆಗೊಂಡು ಕುಳಿತರು. ಹೋಮ-ಹವನಗಳನ್ನೆಲ್ಲ ಮುಗಿಸಿಕೊಂಡು ಬಂದ ರಾಜಪುರೋಹಿತರೂ ಮನ್ನಣೆಯೊಂದಿಗೆ ಬಂದು, ತಮ್ಮ ಆಸನವನ್ನು ಅಲಂ-ಕರಿಸಿದರು. ಅವರ ಬೆನ್ನೊಡನೆಯೆ ಮೂರ್ಧಾಭಿಷೇಕದ ಸಾಮಗ್ರಿಗಳನ್ನು ತೆಗೆದುಕೊಂಡು ಬಂದ ಪರಿವಾರದವರು, ಅವೆಲ್ಲವನ್ನು ಅಭಿಷೇಕಪೀಠದ ಬಳಿಯಲ್ಲಿ ಓರಣವಾಗಿ ಇರಿಸಿ, ತಮ್ಮತಮ್ಮ ಸ್ಥಳಗಳನ್ನು ಹಿಡಿದು ಕುಳಿತರು.

ನಿಯಮಿತ ವೇಳೆಗೆ ಇನ್ನೇನು ಕಾಲುಗಳಿಗೆ ಕೂಡ ಉಳಿದಿರಲಿಲ್ಲ; ಆಗ ಸ್ತುತಿಪಾಠಕರ ಉಗ್ಗಡಣೆಯ ಉಲುಹು ಓಲಗದೊಳಕ್ಕೆ ನುಗ್ಗಿ ಬಂದಿತು. 'ಶ್ರೀಮದ್ ರಾಜಾಧಿರಾಜ! ಮುಮ್ಮಡಿ ವಿರೂಪಾಕ್ಷ ಮಹಾರಾಜ! ಭೋ! ಪರಾಕು!' ಎಂಬ ಶಬ್ದ ಕಿವಿಯೊಳಕ್ಕೆ ಸೇರಿದೊಡನೆಯೇ, ಅನೇಕ ಜನ ಸಾಮ್ರಾಜ್ಯಾಭಿಮಾನಿಗಳು – ನಾವಿಂದು ಸನಾಥರಾದೆವೆಂಬ ಭಾವನೆಯಿಂದ–ಜುಮ್ಮೆದಟ್ಟಿದ ದೇಹದವರಾದರು. ಹೊಂಗಟ್ಟಿಗೆಯವರು ಮುಂದೆನಡೆದು ದಾರಿಯನ್ನು ತೋರಿಸುತ್ತಿರಲು, ಪೆದ್ದರಾಯನು, ಗಂಭೀರವಾಗಿ ಅಡಿಯಿಡುತ್ತ ಒಳಕ್ಕೆ ಬರುತ್ತಲಿದ್ದ. ಹೋಮಹವನಗಳ ಹೊಗೆಯಿಂದ ಉಂಟಾಗಿದ್ದ ಆತನ ಕಣ್ಣುಗಳ ಸಸುಗೆಂಪು ಇನ್ನೂ ಕಡಿಮೆಯಾಗಿರಲಿಲ್ಲ; ಉಟ್ಟಿರುವ ಬಿಳಿಯ ದುಕೂಲ; ಹೊತ್ತಿದ್ದ ಬಿಳಿಯ ಸೆಲ್ಲೆಯ ಎರಡೆ ಎರಡು ವಸ್ತ್ರಗಳಲ್ಲಿ ಬರುತ್ತಿದ್ದ ಪೆದ್ದರಾಯನು ವ್ರತಿಯಂತೆ ಒಪ್ಪುತ್ತಿದ್ದ. ರಾಜಪುರೋಹಿತರು ಎದ್ದು, ಕೈಗೊಟ್ಟು, ಆತನನ್ನು–ಮೂರ್ಧಾ-

ಭಿಷೇಕಕ್ಕಾಗಿ ಏರ್ಪಡಿಸಲಾಗಿದ್ದ – ಮಂಗಲಸ್ನಾನ ಪೀಠದಲ್ಲಿ ಕುಳ್ಳಿರಿಸಿದರು. ಆಗಲೆ ಮಂಗಲವಾದ್ಯರವದೊಂದಿಗೆ ಐದುಜನ ಮಂಗಲವತಿಯರು –ಮಹಾನದಿಗಳ ನೀರಿನಿಂದ ತುಂಬಿದ್ದ – ಐದು ಹೊಂಗೊಡಗಳನ್ನು ತಂದು ಸ್ನಾನಪೀಠದ ಬಳಿಯಲ್ಲಿ ಇರಿಸಿದರು. ವೈದಿಕರು ಬೇರೆಬೇರೆ ವೇದಗಳ ಮಂಗಲಸೂಕ್ತಗಳನ್ನು ಹೇಳುವುದಕ್ಕೆ ಆರಂಭಿಸಿದರು. ಸಭಾಸದರೆಲ್ಲರ ಕುತೂಹಲದ ಕಣ್ಣುಗಳು ಪೆದ್ದರಾಯನಲ್ಲಿ ಕೀಲಿಸಿನಿಂತುವು. ಶುಭಲಗ್ನದ ಸಮಯ ಬಂದುಬಿಟ್ಟಿತು. ಎಲ್ಲೆಲ್ಲಿಯೂ ಭೇರಿ, ದುಂದುಭಿ, ಢೋಲು, ಢಕ್ಕೆಗಳು ಮೊರೆಯುತೊಡಗಿದುವು. ಕಹಳೆ, ಕೊಂಬು, ತುತೂರಿ, ಸುನಾದಿಗಳು ಕೂಗಲು ತೊಡಗಿದುವು. ರಾಜಪುರೋಹಿತರು ತಟ್ಟನೆ ಮುಂದುವರಿದು ಬಂದು, ಸಂದರ್ಭೋಚಿತ ವೇದಮಂತ್ರಗಳೊಂದಿಗೆ ಮೂರ್ಧಾಭಿಷೇಕದ ವಿಧಿಗೆ ಪ್ರಾರಂಭಮಾಡಿದರು. ಐದೂ ಜನ ಸುವಾಸಿನಿಯರು ಐದು ಕಲಶಗಳನ್ನು ಹಿಡಿದು, ಪುರೋಹಿತರ ಹೇಳಿಕೆಯಂತೆ– ಪೆದ್ದರಾಯನ ತಲೆಯಮೇಲೆ—ನೀರಧಾರೆಗಳನ್ನು ಬಿಡುತ್ತಿದ್ದರು. ಆಗ ಓಲಗಕ್ಕೊಂದು ಅಪೂರ್ವವಾದ ಮನೋಜ್ಞತೆಯು ಬಂದುಬಿಟ್ಟಿತು.

ಅಭಿಷೇಕದ ವಿಧಿಯು ಮುಗಿಯಿತು. ಸೇವಕರು ಬಂದು ಹಿಡಿದಿದ್ದ ನೇಪಥ್ಯದ ಮರೆಯಲ್ಲಿ, ಪೆದ್ದರಾಯನು ರಾಜವಸ್ತ್ರಗಳನ್ನು ಧರಿಸಿ, ಹೊರಕ್ಕೆ ಬಂದನು. ಬಂದವನೇ ಸಭೆಗೆ ಕೈಮುಗಿದು, ಸಿಂಹಾಸನಕ್ಕೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಬಳಿಕ ಅದರ ಮೇಲೆ ಏರಿ, ಉಚಿತವಾದ ಭಂಗಿಯಲ್ಲಿ ಕುಳಿತುಕೊಂಡನು. ಚಾಮರದ ಸೂಳೆಯರು– ಮಂಜಿನಿಂದ ನವಿರನ್ನು ಎತ್ತಿ ಮಾಡಿದ್ದಂತಹ – ಬೆಳ್ಳನೆಯ ಚಾಮರಗಳನ್ನು ಎತ್ತಿ ಢಾಳಿಸಲು ತೊಡಗಿದರು. ಸಾಮ್ರಾಜ್ಯಚಿಹ್ನವಾದ ಸಿಂದ – ಸೀಗುರಿ – ಟೆಕ್ಕೆಯಗಳನ್ನು ಊಳಿಗದವರು ಮೇಲಕ್ಕೆತ್ತಿ ಹಿಡಿದರು. ಇನ್ನೇನು! ಸಾಮ್ರಾಜ್ಯಮುಕುಟ, ಪಟ್ಟದ ಕತ್ತಿಗಳನ್ನಷ್ಟು ಸಮರ್ಪಿಸಿ ಬಿಟ್ಟರೆ, ಸಿಂಹಾಸನಾರೋಹಣದ ಎಲ್ಲ ವಿಧಿಗಳೂ ಮುಗಿದಂತಾಗುವುವು. ಮುಕುಟ ಸಮರ್ಪಣೆಯ ವಿಧಿಯು ಅರಮನೆಗೆ ಸೇರಿದ್ದ ಹಿರಿಯರೊಬ್ಬರ ಕಡೆಯಿಂದ ನಡೆಯಬೇಕಾದುದು ಪರಂಪರೆಯಿಂದ ಬಂದ ರೀತಿ. ಸದ್ಯಕ್ಕೆ ರಾಜಶೇಖರನೆ ಹಿರಿಯ; ರಾಜಪುರೋಹಿತರ ಸೂಚನೆಯಂತೆ ಆತನು ತನ್ನ ಆಸನದಿಂದೆದ್ದು, ಸಿಂಹಾಸನದ

ಬಳಿಗೆ ಬಂದ. ಚಿನ್ನದ ಹರಿವಾಣದಲ್ಲಿ ಪೂಜೆಗೊಂಡು ಕುಳಿತಿದ್ದ—ನವರತ್ನ ಗಳಿಂದ ತುಂಬಿದ—ಮುಕುಟವನ್ನು ಎರಡೂ ಕೈಗಳಿಂದ ಎತ್ತಿಕೊಂಡು, ಅತಿಶಯವಾದ ಭಕ್ತಿಯಿಂದ ಹಣೆಗೆ ಹಚ್ಚಿಕೊಂಡ. ಬಳಿಕ ಅದನ್ನು ಹಾಗೆಯೆ ಕೈಯಲ್ಲಿ ಹಿಡಿದುಕೊಂಡೇ, ಸಭೆಯಕಡೆಗೆ ಮುಖಮಾಡಿ, ಮಾತನಾಡಲು ತೊಡಗಿದ.

"ಸಾಮ್ರಾಜ್ಯಮುಕುಟ ಸಮರ್ಪಣೆಯ ಈ ಮಂಗಲ ಪ್ರಸಂಗದಲ್ಲಿ, ವಿಜಯನಗರದ ಸಾಮ್ರಾಜ್ಯವು ತನ್ನೆದುರಿಗೆ ಇರಿಸಿಕೊಂಡಿದ್ದ ಆದರ್ಶವನ್ನು ಕುರಿತು ಒಂದೆರಡು ಮಾತುಗಳನ್ನು ಎಲ್ಲರ ಜ್ಞಾಪಕಕ್ಕೂ ತಂದುಕೊಡ ಬೇಕೆಂದು ನನಗೆ ಆಶೆಯುಂಟಾಗಿದೆ."

"ನನ್ನ ಕನ್ನಡನಾಡಿನ ಪ್ರಜಾಪ್ರಮುಖರೆ! ಮಾಂಡಲಿಕ—ಸಾಮಂತ ಬಂಧುಗಳೆ! ಈ ವಿಜಯನಗರದ ಸುವರ್ಣಸಿಂಹಾಸನವನ್ನು ಏರಿ ಕುಳಿತ ವನು ಬರೀ ಒಬ್ಬ ಸಮ್ರಾಟನು ಮಾತ್ರವಲ್ಲ, ದೇವಾಧಿದೇವನಾದ ಶ್ರೀ ಪಂಪಾಪತಿಯ ಪ್ರತಿನಿಧಿಯವನು! ಸಾಮ್ರಾಜ್ಯವೆಲ್ಲವೂ ಶ್ರೀವಿರೂಪಾಕ್ಷನ ಸೊತ್ತು. ಸಮ್ರಾಟನು ಅದರ ಆಡಳಿತಗಾರನು ಮಾತ್ರ. ಆ ದೇವ-ದೇವನ ಸಂದೇಶಗಳನ್ನು ರಾಷ್ಟ್ರದ ಜನತೆಯಲ್ಲಿ ಹರಡಿ, ಅದನ್ನು ಶಾಂತಿಸುಖಗಳತ್ತ ಕೈಹಿಡಿದು ಕರೆದುಕೊಂಡು ಹೋಗುವುದೇ ಆತನ ಆಡಳಿತಗಾರನ ಕರ್ತವ್ಯವಾಗಿದೆ. ಗಾಳಿ, ಬೆಂಕಿ, ಬಿಸಿಲು, ಮಳೆಗಳಂತೆ ವಿಜಯನಗರದ ಸಮ್ರಾಟನೂ ಸಮದರ್ಶಿಯಾಗಿರಬೇಕು! ನಿಷ್ಪಕ್ಷಪಾತಿ ಯಾಗಿರಬೇಕು! ವೈದಿಕಧರ್ಮದ ಅನುಯಾಯಿಗಳಲ್ಲದವರನ್ನು, ಅವೈದಿಕ ರಾದ ಮ್ಲೇಚ್ಛರೆಂದು ಸೂರ್ಯನು ಅವರಿಗೆ ಬೆಳಕು ಕೊಡುವುದನ್ನು ಬಿಡುತ್ತಾನೆಯೆ? ಬೆಂಕಿ ಬರೀ ಅವರನ್ನು ಸುಟ್ಟುಹಾಕುವ ಕೆಲಸವನ್ನೇ ಮಾಡುವುದೇ? ಗಾಳಿಯು ಅವರಿದ್ದಲ್ಲಿ ಸುಳಿಯದೆ ದೂರಕ್ಕೆ ಓಡಿಹೋಗು ವುದೇ? ಮಳೆಯು ಪ್ರಳಯಕಾಲದ ಮಳೆಯಾಗಿ, ಅವರನ್ನು ತೇಲಿಸಿಕೊಂಡು ಹೋಗಿ ಕಡಲನ್ನು ಕಾಣಿಸಿಬಿಡುವುದೇ? ಇದೆಂದಿಗೂ ಅಸಂಭವನೀಯ ವಾದ ಮಾತು. ಹಾಗೆಯೆ ನಮ್ಮ ಕನ್ನಡ ಸಮ್ರಾಟನು—ಪಂಪಾಪತಿಯ ಪ್ರತಿನಿಧಿಯು—ಎಲ್ಲರಲ್ಲಿಯೂ ದಯೆಯ—ನ್ಯಾಯದ—ಸತ್ಯದ ನೋಟ ಗಳನ್ನು ಹರಿಸಬೇಕಾಗುವುದು. ದುಷ್ಟರ ದಂಡನೆಯ ಕಾರ್ಯ, ಶಿಷ್ಟರ

ಸಂರಕ್ಷಣೆಯು ಕಾರ್ಯ ಎರಡೂ ಸತ್ಯ–ನ್ಯಾಯ– ದಯೆ ಗಳನ್ನೇ ಅವಲಂಬಿಸಿರಬೇಕು. ”

“ ಸಮ್ರಾಟನ ಭಂಡಾರವು ಸಮುದ್ರನಾಥನ ಭಂಡಾರದಂತೆ ಕೆಲಸ ಮಾಡುತ್ತಿರಬೇಕು. ಭೂಮಿಯೆಲ್ಲವೂ ಉಂಡು, ತಣಿದು, ಹೆಚ್ಚಾದ ಮಳೆಯ ನೀರನ್ನು, ಸಮುದ್ರವು ನದಿಗಳ ಮುಖಾಂತರವಾಗಿ ತನ್ನೊಳಕ್ಕೆ ತೆಗೆದುಕೊಳ್ಳುವುದು; ಮತ್ತೆ ಸೂರ್ಯನ ಕಿರಣಗಳ ಸೆಕೆಯಿಂದ – ಮೋಡಗಳಲ್ಲಿ ರೂಪಾಂತರಗೊಳಿಸಿ – ಅದನ್ನೆ ಭೂಮಿಗೆ ಮಳೆಗರೆಯುವುದು. ಅದರಂತೆಯೆ ಪ್ರಜೆಗಳು ಉಂಡು ತಣಿದು ಮಿಕ್ಕುದನ್ನು ನಮ್ಮ ಸಮ್ರಾಟನು ಬೇರೆ ಬೇರೆ ಕಂದಾಯ-ಶುಲ್ಕಗಳ ಮುಖಾಂತರವಾಗಿ ಭಂಡಾರವನ್ನು ತುಂಬಿಕೊಳ್ಳಬೇಕು ! ಅದನ್ನೇ ನಾಡಿನ ಜನರಲ್ಲಿ ಸಂಸ್ಕೃತಿಯನ್ನು ಹಬ್ಬಿಸಹರಡಿಸುವುದಕ್ಕಾಗಿ – ಶಾಂತಿಸಮಾಧಾನಗಳ ಪ್ರಸ್ಥಾಪನೆಗಾಗಿ ಮಾಡುತ್ತಿದ್ದ ಯೋಜನೆಗಳಿಗೆ ವಿನಿಯೋಗಿಸುತ್ತಿರಬೇಕು ! ಪ್ರಜೆಗಳಿಗೆ ತಲೆಹೊರೆಯಾಗುವಂತೆ ಹಲವುಬಗೆಯ ತೆರಿಗೆ-ಸುಂಕಗಳನ್ನು ಒತ್ತಾಯದಿಂದ ಕಿತ್ತುಕೊಂಡು, ತನ್ನ ವೈಭವ ವರ್ಧನೆಗಾಗಿ, ಸುಖೋಪಭೋಗಕ್ಕಾಗಿ ವ್ಯರ್ಥ ವ್ಯಯ ಮಾಡುತ್ತಿರುವುದು ವಿಜಯನಗರದ ಸಮ್ರಾಟರ ಶೀಲಕ್ಕೆ ಎಂದೂ ಸರಿಯಾದುದಲ್ಲ ! ”

“ನಮ್ಮ ಕನ್ನಡ ಸಾಮ್ರಾಜ್ಯವು ಭಾರತದ ಬೇರೆ ಬೇರೆ ದೇಶದ ರಾಜ್ಯಗಳಿಗೆ ಆದರ್ಶವಾಗಿರಬೇಕೆಂಬ ಮಾತು, ರಾಜಪ್ರಜೆಗಳಿಬ್ಬರ ಹೃದಯದಲ್ಲಿಯೂ ಬೇರೂರಿ ನಿಲ್ಲಬೇಕು ! ಹಾಗೆ ಆದಾಗಲೆ ‘ ದೊರೆಯು ದೇವದೇವನ ಪ್ರತಿನಿಧಿ ! ಪ್ರಜೆಗಳು ಆತನ ಪ್ರಾತಿನಿಧ್ಯವನ್ನು ಒಪ್ಪಿ ನಡೆಯುವವರು’ ಎಂಬಂತಾಗಿ, ಶಾಂತಿಸಮಾಧಾನಗಳು ಅಖಂಡವಾಗಿ ನೆಲೆಗೊಳ್ಳುವುವು. ರಾಜ-ಪ್ರಜೆಗಳಿಬ್ಬರ ಕರ್ತವ್ಯ-ತತ್‌ಪರತೆಯೆ ರಾಷ್ಟ್ರದ ಏಳಿಗೆಗೆ ಕಾರಣವಾಗುವುದು ; ಇಲ್ಲಿ ಪ್ರಜೆಗಳ ಪ್ರತಿನಿಧಿಗಳಾದ ತಾವೆಲ್ಲ ಸದಸ್ಯರೂ ಇದ್ದೀರಿ ! ಶ್ರೀಪಂಪಾಪತಿಯ ಪ್ರತಿನಿಧಿಯಾದ–ನೂತನ ಸಮ್ರಾಟರಾದ ಮುಮ್ಮಡಿ ವಿರೂಪಾಕ್ಷದೊರೆಗಳವರೂ ಇದ್ದಾರೆ. ಇಬ್ಬರೂ ನಿಮ್ಮ ನಿಮ್ಮ ಕರ್ತವ್ಯಪಾಲನೆಯ ಪ್ರತಿಜ್ಞಾಕ್ಷರಗಳನ್ನು, ಈ ಮಂಗಲಪ್ರಸಂಗದಲ್ಲಿ ನಿಮ್ಮ ನಿಮ್ಮ ಹೃದಯಗಳಲ್ಲಿ ಮೂಡಿಸಿಕೊಂಡು ಬಿಡಿ ! ಅದರ ಮೂಲಕವಾಗಿ

ಕರ್ಣಾಟಕ ದೇಶವನ್ನು ಭೂಲೋಕದ ಸ್ವರ್ಗವನ್ನಾಗಿ ಮಾಡಿ ತೋರಿಸಿ!"

"ಇನ್ನೊಂದು ಮಾತೆಂದರೆ: ಇಂದಿನ ಓಲಗದಲ್ಲಿ ನರಸಿಂಹನಾಯಕರಂತಹ ಸ್ವಾರ್ಥತ್ಯಾಗಿಗಳಾದ ಸಾಮ್ರಾಜ್ಯಾಭಿಮಾನಿಗಳು ಇಲ್ಲದುದು, ನಮಗೆಲ್ಲರಿಗೂ ಒಂದು ದೊಡ್ಡ ಕೊರತೆಯೆಂದು ಕಾಣದಿರದು! ಶ್ರೀವಿರೂಪಾಕ್ಷನು ಬೇಗನೆ ಅವರನ್ನು ಇಲ್ಲಿಗೆ ಕ್ಷೇಮದಿಂದ ಕರೆಯಿಸಿಕೊಂಡು, ಅವರ ಕಾರ್ಯಭಾರವನ್ನು ಅವರು ನೋಡಿಕೊಳ್ಳುತ್ತಿರುವಂತೆ ಮಾಡಲೆಂದು ನಮ್ಮೆಲ್ಲರ ಪ್ರಾರ್ಥನೆಯನ್ನು ಆತನಿಗೆ ಸಲ್ಲಿಸೋಣ......"

ನರಸಿಂಹನಾಯಕರ ಹೆಸರು ಕಿವಿಗೆ ಬಿದ್ದೊಡನೆಯೆ ಸದಸ್ಯರೆಲ್ಲರ ಲಕ್ಷ್ಯವು ಅವರ ಆಸನದ ಕಡೆಗೆ ಓಡಿತು. ರಾಜಶೇಖರನ ಬಲಗಡೆಗೆ ಮಂಡಿಸಿದ್ದ ದಂಡನಾಯಕರ ಪೀಠವು ಬರಿದು ಬರಿದಾಗಿ ಕುಳಿತಿದ್ದಿತು. ಆಗ, ಸಮಾರಂಭದಲ್ಲಿ ಮೈಮನಗಳನ್ನು ಮರೆತಿದ್ದ ಸದಸ್ಯರಲ್ಲಿಯ ಬಹುಜನರ ಹೃದಯಗಳು ಕಳವಳಕ್ಕೆ ಎಡೆಗೊಟ್ಟುವು. ಅದೇತಕ್ಕೋ ಪೆದ್ದರಾಯನ ಮುಖವು ಮಾತ್ರ ಒಂದು ಸಲ ಗಂಟುಗೊಂಡು, ಮತ್ತೆ ಮೊದಲಿನಂತೆ ಆಯಿತು ರಾಜಶೇಖರನು ತನ್ನ ಮಾತನ್ನು ಹೀಗೆ ಮುಂದುವರಿಸಿ ಮುಗಿಸಿದನು:—

"ಈಗ ಸಾಮ್ರಾಜ್ಯಮುಕುಟವನ್ನು ತಲೆಯಲ್ಲಿ ಧರಿಸಬೇಕಾಗಿದ್ದವರು, ಎಲ್ಲೆಲ್ಲಿಯೂ—ಎಲ್ಲರಿಂದಲೂ ಹೊಗಳಿಸಿಕೊಳ್ಳುತ್ತಿರುವ ಮಲ್ಲಿಕಾರ್ಜುನ ಮಹಾರಾಯರ ಸಾಕ್ಷಾತ್ ಪುತ್ರರು. ತಂದೆಯ ಧೈರ್ಯ-ಶೌರ್ಯ-ಸಾಹಸಗಳು ಇವರಲ್ಲಿ ಸಹಜವಾಗಿ ಇಳಿದುಬಂದಿವೆಯೆಂಬುದು ತಮಗೆಲ್ಲ ಗೊತ್ತಿದ್ದ ಮಾತಾಗಿದೆ. ಮಲ್ಲಿಕಾರ್ಜುನ ದೊರೆಗಳ ನೀತಿನೈಪುಣ್ಯ, ನ್ಯಾಯಶೀಲತೆ, ಸತ್ಯಪಕ್ಷಪಾತ ಮೊದಲಾದ ಸದ್ಗುಣಗಳನ್ನು, ಈ—ಸಾಮ್ರಾಜ್ಯಮುಕುಟವು—ಅವರ ತಲೆಯಮೇಲೆ ಇದ್ದು, ಚೆನ್ನಾಗಿ ಪರಿಚಯ ಮಾಡಿಕೊಂಡಿದೆ. ಅದೇ ಮುಕುಟವೀಗ ಈ ಮುಮ್ಮಡಿ ವಿರೂಪಾಕ್ಷ ದೊರೆಗಳ ತಲೆಯಮೇಲೆ ಕುಳಿತು, ತನಗೆ ಪರಿಚಯವಾಗಿದ್ದ ಮಲ್ಲಿಕಾರ್ಜುನ ಮಹಾರಾಯರ ಸದ್ಗುಣಗಳನ್ನು ಇವರ ಹೃದಯದಲ್ಲಿ ಮೂಡಿಸುತ್ತಿರಲಿ! ಜಯ ಕರ್ಣಾಟಕ ರಾಜ್ಯಲಕ್ಷ್ಮೀ! ಜಯಭುವನೇಶ್ವರೀ!! ಜಯ ಪಂಪಾಪತೇ!!!"

ಸಭೆಗೆ ಸಭೆಯೆ ಜಯಘೋಷಮಾಡಿತು;

“ಜಯಕರ್ಣಾಟಕ ರಾಜ್ಯಲಕ್ಷ್ಮೀ! ಜಯಭುವನೇಶ್ವರೀ!! ಜಯ ಪಂಪಾಪತೇ!!!”

ರಾಜಶೇಖರನು ಸಾಮ್ರಾಜ್ಯಮುಕುಟವನ್ನು ಪೆದ್ದರಾಯನ ತಲೆಯ ಮೇಲೆ ಇರಿಸಿದ. ಪಟ್ಟದ ಕತ್ತಿಯನ್ನೆತ್ತಿ ಕೈಯಲ್ಲಿ ಕೊಟ್ಟ. ಮತ್ತೆ ಕಿವಿಗಳು ಕಿವುಡಾಗುವಂತೆ ವಾದ್ಯಗಳು ಧ್ವನಿಮಾಡಿದುವು. ವೈದಿಕರು ಶಾಂತಿ-ಸೂಕ್ತಗಳನ್ನು ಹೇಳುತ್ತ ಮಂಗಲಾಕ್ಷತೆಗಳನ್ನು ಹಾಕಿದರು. ಸುವಾಸಿನಿಯರು ಬಂದು ಆರತಿಗಳನ್ನೆತ್ತಿ – ಸುವರ್ಣಮುದ್ರಿಕೆಗಳಿಂದ – ತಳಿಗೆಗಳನ್ನು ತುಂಬಿಸಿಕೊಂಡು ಹೋದರು. ಸ್ತುತಿಪಾಠಕರು ಹೊಗಳಲು ತೊಡಗಿದರು.

“ಶ್ರೀಮದ್ ರಾಜಾಧಿರಾಜ ರಾಜಪರಮೇಶ್ವರಾ! ಶ್ರೀಕರ್ಣಾಟ ರಾಜ್ಯರಮಾ ಕರಕಮಲಧರಾ! ವಿಜಯನಗರ ವೈಭವವನಿತಾ ಮನೋಹರಾ! ಯವನಸುರತ್ರಾಣ ತ್ರಾಣವಿದಾರಾ! ನಿಜಭುಜದಂಡ ಶಕ್ತಿ ಪ್ರಚಂಡಾ! ಮೂರು ರಾಯರನಾಳ್ವ ಗಂಡಾ! ಹಿಂದೂರಾಯ ಸುರ-ತ್ರಾಣಾ! ದೇವದ್ವಿಜಸೇವಾಧುರೀಣಾ! ಶ್ರೀಮುಮ್ಮಡಿ ವಿರೂಪಾಕ್ಷ ಮಹಾಪ್ರಭೋ! ಭೋ! ಪರಾಕು!”

ಹೊಗಳಿಕೆಯ ಕೊನೆಯ ಶಬ್ದದೊಡನೆಯೆ ದೊರೆಯು ಮಾತಿಗೆ ಮೊದಲುಮಾಡಿದ. ಸಭೆಯೆಲ್ಲವೂ ಕಿವಿಗೊಟ್ಟು ಸುಮ್ಮಗೆ ಕುಳಿತಿತು. ಯಾರೂ ಗಟ್ಟಿಯಾಗಿ ಉಸಿರು ಕೂಡ ಬಿಡುತ್ತಿರಲಿಲ್ಲ.

“ಸಾಮ್ರಾಜ್ಯದ ಪ್ರೇಮಿಗಳಾದ ನನ್ನ ಕನ್ನಡ ವೀರಬಂಧುಗಳೇ! ಸಿಂಹಾಸನವನ್ನು ಏರಿ ಕುಳಿತವನು ಅನುಸರಿಸಬೇಕಾದ ಕರ್ತವ್ಯಗಳ ಜಾಗ್ರತಿಯು ನನ್ನಲ್ಲಿಯೂ ಇದೆಯೆಂದು ನಾನು ಭಾವಿಸುತ್ತೇನೆ. ಕನ್ನಡ ಜನರೆಲ್ಲರೂ ಸೌಖ್ಯವಾಗಿ ಇರಬೇಕೆಂದು ನನ್ನ ಮನಃಪೂರ್ವಕವಾದ ಆಶೆಯಿದೆ. ಎಲ್ಲೆಲ್ಲಿಯೂ ನಮ್ಮ ವೈದಿಕಧರ್ಮವು ತಲೆಯೆತ್ತಿ ನಿಲ್ಲಬೇಕೆಂದು ನನ್ನ ಅಂತರಂಗದ ಅಪೇಕ್ಷೆಯಿದೆ. ‘ಕನ್ನಡಿಗರೆಲ್ಲರೂ ವೀರರು, ಧೀರರು, ಸಾಹಸಿಗಳು, ಗಂಡೆದೆಯವರು’ ಎಂದು – ನಮಗೆ ವೈರಿಗಳಾಗಿದ್ದವರೂ ನಮ್ಮನ್ನು ಹಾಡಿಹೊಗಳುವಂತೆ ಮಾಡಬೇಕೆಂದು, ನಿರಂತರವೂ ನನ್ನ ಹೃದಯವು ತಾಂಡವವಾಡುತ್ತಲಿದೆ. ತಮ್ಮೆಲ್ಲರ ತೋಳ ನೆರವು ನನಗೆ ಇದ್ದುದಾದರೆ ಅಂತಹ ಕಾಲವು ನಮ್ಮನ್ನು ಬೇಗನೆ ಸಮೀಪಿಸುವಂತೆ

ಮಾಡಬೇಕೆಂಬ ಆತುರವು ನನ್ನ ಅಂಗಾಂಗಗಳನ್ನೂ ಸ್ಫುರಣಗೊಳಿಸುತ್ತಲಿದೆ. ಶಕ್ತಿದಾತ್ರಿಯಾದ ಭುವನೇಶ್ವರಿಯ ದಯೆಯ ದೃಷ್ಟಿ.. ನನಗೆ – ತಮ್ಮೆಲ್ಲರಿಗೆ ಬೆಂಬಲವಾಗಿ ನಿಲ್ಲಬೇಕು... ಅಷ್ಟೆ!"

"ಈಗ ಒಂದು ವಿಷಯ! ದಂಡನಾಯಕರ ಆಸನವು ಬರಿಯದಾಗಿ ಬಿದ್ದಿದೆ. ಸಿಂಹಾಸನದಲ್ಲಿ ಕುಳಿತಿದ್ದವನು ತನ್ನ ಆಡಳಿತದ ಹೊಲಬಿಗೆ ಅನು-ಗುಣನಾದ ಮಂತ್ರಿಯನ್ನು ಆರಿಸಿ ನಿಯಮಿಸಿಕೊಳ್ಳಲಿಕ್ಕೆ ಬೇಕಾಗುವುದು. ನರಸಿಂಹನಾಯಕರು ತಮ್ಮ ರೀತಿಯಲ್ಲಿ ಸಾಮ್ರಾಜ್ಯಕ್ಕೆ ಸಲ್ಲಿಸಿದ್ದ ಸೇವೆ-ಯನ್ನು, ವಿಜಯನಗರದ ರಾಜ-ಪ್ರಜೆಗಳಿಬ್ಬರೂ ಮರೆತು ನಡೆಯುವಂತಿಲ್ಲ. ಆದರೆ ಕಾಲಕ್ಕೆ ತಕ್ಕ ಸ್ವಭಾವದ ಮಂತ್ರಿಗಳನ್ನು ಆಯ್ದುಕೊಳ್ಳುವುದು ದೊರೆಯಾಗಿದ್ದವನ ಮುಖ್ಯ ಕರ್ತವ್ಯ. ಇಂದಿನ ಈ ವಿಷಮಸಂದರ್ಭದಲ್ಲಿ ನರಸಿಂಹ ನಾಯಕರಂತಹ ಬಿಸಿಯಾರಿದ ನೆತ್ತರಿನವರಿಂದ ಅಷ್ಟೊಂದು ಕೆಲಸ-ವಾಗಲಾರದೆಂದು ನನ್ನ ಭಾವನೆಯಾಗಿದೆ. ಅದಕ್ಕಾಗಿ – ಹೊಸ ದೊರೆಯಾಗಿ ನಾನು ಈ ಸಿಂಹಾಸನದಲ್ಲಿ ಕುಳಿತಿದ್ದಂತೆಯೆ – ಹೊಸ ದಂಡನಾಯಕರೊಬ್ಬ-ರನ್ನು – ಇಂದೆಯೆ – ಪ್ರಧಾನಾಸನದಲ್ಲಿ ಕುಳ್ಳಿರಿಸಿ ಬಿಡಬೇಕೆಂದಿದ್ದೇನೆ. ಈಶ್ವರನಾಯಕರೇ! ಏಳಿ! ಎದ್ದುಬಂದು ಬರಿಯದಾಗಿದ್ದ ದಂಡನಾಯಕರ ಆಸನವನ್ನು ತುಂಬಿದುದನ್ನಾಗಿ ಮಾಡಿ!"

ಈಶ್ವರನಾಯಕನು ಕುಳಿತಲ್ಲಿಂದ ಎದ್ದು, ಮೆಲ್ಲಗೆ ಮುಂಗಡಿಯಿಡಲು ತೊಡಗಿದ. ಸದಸ್ಯರೆಲ್ಲರೂ ವಿಸ್ಮಯಚಿತ್ತರಾಗಿ ಒಬ್ಬರನ್ನೊಬ್ಬರು ನೋಡಲು ತೊಡಗಿದರು. ಆಗ ರಾಜಶೇಖರನು ಥಟ್ಟನೆ ಎದ್ದುನಿಂತು ಕೂಗಿಮಾತನಾಡಿದ.

"ಹಂ! ಅಲ್ಲಿಯೆ ಇರಿ ನಾಯಕರೇ! ಈ ಪ್ರಧಾನಾಸನವು ನರಸಿಂಹ-ನಾಯಕರು ಬರುವವರೆಗೆ ಬರಿಯದಾಗಿಯೆ ಬಿದ್ದಿರಬೇಕೆಂದು ನನಗೆನಿಸುತ್ತದೆ ದೊರೆಗಳೇ! ಸೂರ್ಯನ ಸ್ಥಳವನ್ನು ನಾನು ತುಂಬಿತೋರಿಸುವೆನೆಂದು ಇನ್ನಾವ ಗ್ರಹಗಳು ಮುಂದುವರಿದು ಬಂದರೂ, ಇರುಳನ್ನು ಹಗಲನ್ನಾಗಿ ಮಾಡಲಾರವು! ಹಾಗೆಯೆ ನರಸಿಂಹನಾಯಕರಲ್ಲದೆ ಇನ್ನಾರೂ ಈ ಆಸನದ ಮೇಲೆ ಕುಳಿತುಕೊಳ್ಳುವ ತಕ್ಕುಮೆಯನ್ನು ಪಡೆದಿರಲಾರರು!"

ಸಭೆಯಲ್ಲಿಯ ಬಹುಜನರ ಸಮ್ಮತಿಯ ದೃಷ್ಟಿಗಳು, ಆಶ್ಚರ್ಯ-ದೊಂದಿಗೆ ರಾಜಶೇಖರನ ಕಡೆಗೆ ಹೊರಳಿನಿಂತುವು. ಪೆಚ್ಚುಮೊಗದ ಈಶ್ವರ-

ನಾಯಕನು ಮುಂದೆ ಅಡಿಯಿಡಲಾರದೆ – ದೊರೆಯಕಡೆಗೆ ನೋಡುತ್ತ– ನಿಂತಲ್ಲಿಯೆ ನಿಂತುಬಿಟ್ಟನು. ದೊರೆಯು ಕೆಂಗಣ್ಣಿನವನಾಗಿ ಗುಡುಗಿ ನುಡಿದ.

" ಬನ್ನಿ ಈಶ್ವರನಾಯಕರೇ ! ತಡೆದು ನಿಂತಿರೇಕೆ ? ಸಮ್ರಾಟನು ನಾನು ! ದಂಡನಾಯಕನನ್ನು ನಿಯಮಿಸಿಕೊಳ್ಳಬೇಕಾದ ಅಧಿಕಾರವು ನನ್ನದು ! ಅಣ್ಣಾಜಿಯವರ ಸಂಬಧವೇನೂ ಇದರಲ್ಲಿ ಇಲ್ಲ ! "

ರಾಜಶೇಖರನು ತನ್ನನ್ನು ತಾನೆ ಮರೆತವನಾಗಿ ಮಾತನಾಡಿದ.

" ಪೆದ್ದರಾಯಾ! ಈಗ ಗಳಿಗೆಯ ಹಿಂದೆ ನೀನು ಸಮ್ರಾಟನಾಗಿ ಇರಲಿಲ್ಲ ! ಬರೀ ಪೆದ್ದರಾಯನಾಗಿಯೆ ಇದ್ದೆ ! ಸಾಮ್ರಾಜ್ಯದ ಪ್ರಜೆಗಳೆಲ್ಲರೂ ಒಪ್ಪಿ, ನಿನ್ನನ್ನು ದೊರೆಯನ್ನಾಗಿ ಮಾಡಿದ್ದಾರೆ. ಅವರೆಲ್ಲರ ಅಭಿಪ್ರಾಯ-ಗಳನ್ನು ಕೇಳದೆ ದಂಡನಾಯಕರ ಆಯ್ಕೆಯು ಆಗಲೇ ಕೂಡದು. "

ಪೆದ್ದರಾಯನು ಬಿಂಕ – ಕಿನಿಸು – ತಿರಸ್ಕಾರಗಳೊಡನೆ ಹೇಳಿದನು.

" ದೊರೆಯೆಂದು ಒಪ್ಪಿದವರು ದೊರೆಯು ಮಾಡಿದುದನ್ನು ಒಪ್ಪಿಯೆ ಒಪ್ಪುವರು. ನಡುವೆ ನಿರರ್ಥಕವಾದ ಮಾತುಗಳನ್ನು ಯಾರೂ ಆಡಲಾಗದು. ಬನ್ನಿ ಈಶ್ವರನಾಯಕರೇ ! ನಿಮ್ಮ ಆಸನದಲ್ಲಿ ಕುಳಿತುಕೊಳ್ಳಿರಿ ! "

ಓಲಗದಲ್ಲಿಯ ಎಲ್ಲ ಜನರ ಮನಸ್ಸು-ಹೃದಯಗಳು ರಾಜಶೇಖರನ ಅಭಿಪ್ರಾಯವನ್ನೆ ಎತ್ತಿ ಹಿಡಿದಿದ್ದುವು; ಆದರೆ ಅದನ್ನು ಹೊರಕ್ಕೆ ಆಡಿ ತೋರಿಸುವ ಧೈರ್ಯ ಯಾರಕಡೆಯಿಂದಲೂ ಆಗಲೊಲ್ಲದು. ಕರುಳನ್ನು ಹಿಸುಕಿಕೊಳ್ಳುತ್ತ ಹಾಗೆಯೆ ಕುಳಿತುಬಿಟ್ಟಿದ್ದರು. ರಾಜಶೇಖರನು ಮತ್ತೆ ಹೇಳಿದ.

" ನಾನು ಓಲಗದಲ್ಲಿ ಇದ್ದುಕೊಂಡು, ನೋಡಲಾಗದ ಈ ನೋಟ-ವನ್ನು ನೋಡಲಾರೆ. ! "

" ನೋಡಲಾರದವರು ಎದ್ದು ಹೊರಕ್ಕೆ ಹೋದರಾಯಿತು ! " ದೊರೆಯು ಬಿರುದನಿಯಲ್ಲಿ ನುಡಿದ. " ಸರಿ ! ನಾನೀಗ ಹೊರಟು ಹೋಗು ತ್ತೇನೆ ; ಹೋಗುವುದಕ್ಕೆ ಮೊದಲು ಮತ್ತೊಮ್ಮೆ ಎಚ್ಚರ ಕೊಡುತ್ತೇನೆ. ಒಬ್ಬ ಕುರುಡ ಇನ್ನೊಬ್ಬ ಕುರುಡನಿಗೆ ದಾರಿಯನ್ನೆಂದೂ ತೋರಿಸಲಾರ ! ಇಬ್ಬರೂ ಸೇರಿ ದಾರಿತಪ್ಪಿ ಹಳ್ಳದಲ್ಲಿಯೋ ಕೊಳ್ಳದಲ್ಲಿಯೋ ಬೀಳಬಹುದು ! ಜಾಗ್ರತೆ • • ಪೆದ್ದಣ್ಣಾ • • ಜಾಗ್ರತೆ ! " ರಾಜಶೇಖರನು ಸಾಧ್ಯವಿದ್ದಷ್ಟು

ಬೇಗನೆ ಹಜ್ಜೆಯಿಕ್ಕುತ್ತ ಹೊರಟುಬಿಟ್ಟ. ಸಭೆಯೆಲ್ಲವೂ–ಸಿಂಹಾಸನದಲ್ಲಿ ಕುಳಿತಿದ್ದ ದೊರೆ ಕೂಡ–ಬೆಪ್ಪುಗೊಂಡು ರಾಜಶೇಖರನನ್ನು ನೋಡುತ್ತಿದ್ದಿತು. ಅವನು ಕಣ್ಮರೆಯಾಗುವವರೆಗೂ ಓಲಗಸಾಲೆಯು ಮೌನತೆಯಲ್ಲಿ ಮುಳುಗಿ ಮುಳುಗಿ ಏಳುತ್ತಿದ್ದಿತು.

ರಾಜಶೇಖರನು ಹೊರಟುಹೋದಮೇಲೆ, ದೊರೆಯ ಆದೇಶದಂತೆ ಈಶ್ವರನಾಯಕನು ದಂಡನಾಯಕನ ಆಸನದಲ್ಲಿ ಕುಳಿತ. ಓಲಗದ–ಮುಂದಿನ ಕಾರ್ಯಕಲಾಪಗಳೆಲ್ಲವೂ ನಡೆದಿರುವಾಗ, ಸಭಾಸದರ ಮನಸ್ಸುಗಳನ್ನೆಲ್ಲ ಬೇಸರವು ಮುಚ್ಚಿ ಮುಸುಕಿಬಿಟ್ಟಿದ್ದಿತು. ಸಭೆಯ ಪ್ರಾರಂಭದ ಉತ್ಸಾಹವು ಯಾವಕಡೆಗೆ ಹೋಗಿ ಮೂಲೆಯಲ್ಲಿ ಮರೆಯಾಯಿತೇನೋ! ಹೊಸ ದೊರೆಯ ಹೆಸರಿನ ಜಯಜಯಕಾರದೊಂದಿಗೆ ಅಂದಿನ ಸಭೆಯ ಸಮಾಪ್ತಿಯಾಯಿತು.

---

## ೧೮ನೆಯ ಪರಿಚ್ಛೇದ

ಓಲಗದೊಳಗಿಂದ ಎದ್ದುಬಂದಾಗಿನಿಂದಲೂ ರಾಜಶೇಖರನ ಮನಸ್ಸಿಗೆ ಸಮಾಧಾನವಿರಲಿಲ್ಲ. ನಿರಾಶೆ ಅಸಮಾಧಾನಗಳ ಭರದಲ್ಲಿ ಒಂದೊಂದು ಸಲ ಎಂದುಕೊಳ್ಳುವನು :

“ಬೇಡವೆಂದು ಬಿಟ್ಟಿದ್ದೇನೆ; ಇನ್ನೇತಕ್ಕೆ ಬೇಕು. .ನನಗೆ ಸಿಂಹಾಸನ-ಸಾಮ್ರಾಜ್ಯಗಳ ತೊಡಕು? ಪೆದ್ದರಾಯನಿದ್ದಾನೆ; ಸಾಮ್ರಾಜ್ಯವಿದೆ; ಅವನದನ್ನು ಅವನು ಬಗೆಹರಿಸಿಕೊಳ್ಳಲೊಲ್ಲನೇಕೆ. .ಹೇಗಾದರೂ ನನ್ನಷ್ಟಕ್ಕೆ ನಾನು ಇದ್ದುಬಿಟ್ಟರಾಯಿತು! ಈವೊತ್ತು ನನಗೆ ಅದೇತಕ್ಕಾಗಿ ಅಷ್ಟೊಂದು ಅಭಿಮಾನ-ಅಹಂಕಾರಗಳು ತಲೆದೋರಿದುವೊ! ಏತಕ್ಕಾಗಿ ನಾನು ಹಾಗೆ ಸಭೆಯಲ್ಲಿ ವರ್ತಿಸಿದೆನೋ!”

ಇನ್ನೊಂದು ಸಲ, ಸಾಮ್ರಾಜ್ಯದ ಶುಭಚಿಂತನೆಯ ವಿಷಯಕವಾದ ಕರ್ತವ್ಯಬುದ್ಧಿಯು ಮುಖವೆತ್ತಿನಿಂತಾಗ, ಪೆದ್ದರಾಯನ ದುಡುಕುತನದ ಸ್ವಭಾವವು ಎದುರಿಗೆ ಬರಲು ಯೋಚಿಸುವನು:

“ವಿರೂಪಾಕ್ಷರಾಯನ ಕಾಲದಲ್ಲಿಯೂ ನಾನು ಇದೇ ಕಲ್ಪನೆಯಿಂದ

ಅಲಿಪ್ತಭಾವದಿಂದ ಕೈಮುಚ್ಚಿ ಕುಳಿತುಕೊಂಡಿದ್ದೆ. ಎಂತಲೇ ನಾಡಿನಲ್ಲಿ ಆಗ ಹಬ್ಬಿಹರಡಿದ ಅಶಾಂತಿ-ಅಸಮಾಧಾನಗಳಿಗೆ ನಾನೂ ಒಂದುಬಗೆಯಿಂದ ಕಾರಣನಾದಂತಾದೆ. ಅದರಿಂದ ಬುದ್ಧಿಕಲಿತಿದ್ದ ನಾನು – ಸಿಂಹಾಸನವನ್ನು ನಿರಾಕರಿಸಿದಷ್ಟಕ್ಕೆ ಏನಾದಂತಾಯಿತು ? – 'ನನ್ನಷ್ಟಕ್ಕೆ ನಾನು' ಎಂದು ಸುಮ್ಮಗೆ ಕುಳಿತರೆ ಆಗುವುದೇ ? ದೊರೆಯಾಗಿರುವವನೂ ಒಬ್ಬ ಮನುಷ್ಯನೇ! ಮನುಷ್ಯಬುದ್ಧಿಯ ಸಂಕುಚಿತದೃಷ್ಟಿಯ ಮೂಲಕವಾಗಿಯೋ, ಪ್ರಪಂಚದ ಅನುಭವವು ಸಾಕಷ್ಟು ಇಲ್ಲದುದಕ್ಕಾಗಿಯೋ, ದೊರೆಯಾಗಿದ್ದವನಿಂದಲೂ ತಪ್ಪುತಡೆಗಳಾಗುವುದು ಸಹಜ! ದೊರೆಯು ತಪ್ಪಿನಡೆದರೆ, ಸಂಪ್ರದಾಯಕ್ಕೆ ಕಟ್ಟುಬಿದ್ದ–ದಾಕ್ಷಿಣ್ಯಸ್ವಭಾವದ–ಜನರು, ಆತನಿಗೆ ಪ್ರತಿಯಾಗಿ ಏನನೂ ಹೇಳರು. ಹೀಗಾಗುವುದರಿಂದ ಒಂದು ತಪ್ಪಿನ ಬೆನ್ನುಹಿಡಿದು ನೂರೆಂಟು ತಪ್ಪುಗಳು ನುಗ್ಗಿಬಂದು, ಆಡಳಿತದ ಹದವನ್ನು ಕೆಡಿಸುವುವು. ಆಗ ಯಾರಾರಿಗೂ ತಿಳಿಯದಂತೆಯೆ ಅಶಾಂತಿಯ ಜ್ವಾಲಾಮುಖಿಯು, ಒಳಗೊಳಗೆ ಕುದಿಯಲು ತೊಡಗುವುದು. ಹೀಗಾಗದಂತೆ ದೊರೆಯಾಗಿರುವವನಿಗೆ – ದೃಷ್ಟಿಯುಳ್ಳವರು – ಅನುಭವವುಳ್ಳವರು – ಉಚಿತವಾದ ಸಲಹೆಗಳನ್ನು, ನಿರ್ದಾಕ್ಷಿಣ್ಯವಾಗಿ ಹೇಳುತ್ತಿರಬೇಕು. ಅದಕ್ಕೆ ಅನುಸಾರವಾಗಿಯೇ ನಾನಿಂದು ನಡೆದುಕೊಂಡಿದ್ದೇನೆ. ನಿಜವಾಗಿಯೂ ಸಾಮ್ರಾಜ್ಯದ ಜನತೆಯಲ್ಲಿ, ನರಸಿಂಹನಾಯಕರ ಮೇಲಿರುವಷ್ಟು ಪ್ರೀತಿವಿಶ್ವಾಸಗಳು ಬೇರೆ ಯಾರ ವಿಷಯಕ್ಕಿವೆ ? ಅಂತವರನ್ನು ಬಿಟ್ಟು, ಯಾವನ ಹೆಸರು ವಿಜಯನಗರದಲ್ಲಿ ಕೂಡ ಯಾರಿಗೂ ಗೊತ್ತಿಲ್ಲವೋ ಅಂತಹ ಸಾಮಾನ್ಯ ಸೈನಾಧಿಕಾರಿಯೊಬ್ಬನನ್ನು ದಂಡನಾಯಕನ ಸ್ಥಳದಲ್ಲಿ ಕುಳ್ಳಿರಿಸಿಬಿಟ್ಟರೆ, ಯಾವ ಸಾಮ್ರಾಜ್ಯಾಭಿಮಾನಿಗೆ ಒಪ್ಪಿಗೆಯಾದೀತು ? ಇದರಿಂದ ನರಸಿಂಹನಾಯಕರು ಏನನೂ ಎಂದುಕೊಳ್ಳದಿರಬಹುದಾದರೂ, ಸಾಮ್ರಾಜ್ಯದಲ್ಲಿ ಎದ್ದಿದ್ದ ಅಶಾಂತಿಯ ಹೊಗೆಯು ಹೆಚ್ಚು ಹೆಚ್ಚಾಗದೆ ಇರದು. ಅದಕ್ಕಾಗಿ ನಾನೀಗ ಸುಮ್ಮನಿದ್ದುಬಿಟ್ಟರೆ ನಡೆಯದು. ಬರೀ ನನ್ನ ವೈಯಕ್ತಿಕ ಸಾಧನ-ಸಂಯಮಗಳಲ್ಲಿ ಮನಸ್ಸನ್ನಿರಿಸಿ ಕುಳಿತರೆ, ಕೆಲಸವು ಕೆಟ್ಟು ಹೋಗುವ ಸಂಭವವಿದೆ! ರಾಜಕಾರ್ಯದ ಕಡೆಗೆ ನನ್ನ ಮನಸ್ಸು-ಹೃದಯಗಳನ್ನು ಈಗಲೂ ಹಂಚಿಕೊಡಬೇಕಾಗಿಯೇ ಇದೆ."

ಈಬಗೆಯ ಯೋಚನೆಗಳ ಉಯ್ಯಾಲೆಯಮೇಲೆ ಕುಳಿತುಕೊಂಡೇ ರಾಜಶೇಖರನು ಅಂದಿನ ಹಗಲನ್ನು ಕಳೆದನು. ಸಂಜೆಯ ಸೂರ್ಯನು ವಿಜಯನಗರದ ಹೊಸ ದೊರೆಯ ಮೇಲೆ – ಆತನ ತಪ್ಪು ನಡೆವಳಿಯನ್ನು ಕಂಡುಕಂಡೂ ಬಾಯಿಮುಚ್ಚಿ ಕುಳಿತ ಜನರಮೇಲೆ – ಕೋಪಗೊಂಡು, ಕೆಮ್ಮೊಗವನ್ನು ತಳೆದು, ನಿಮ್ಮ ಸಂಗತಿಯೇ ಬೇಡವೆಂದು ಹೊರಟು ನಡೆದಿರುವಂತೆ, ಪಡುವಣನಿಟ್ಟಿನಲ್ಲಿ ಮರೆಯಾಗುವುದರಲ್ಲಿದ್ದ. ಆಗ ರಾಜಶೇಖರನು ಕುಟೀರವನ್ನು ಬಳಸಿಕೊಂಡಿದ್ದ ಕೈದೋಟದಲ್ಲಿ, ಹಾಗೆಯೇ ಸುತ್ತಾಡುತ್ತಿದ್ದನು. ನಾರಾಯಣಪಂಡಿತರು ಅಲ್ಲಿಗೆ ಬಂದುದನ್ನು ಕಂಡು, ಅವರನ್ನೊಡಗೊಂಡು ಹೋಗಿ, ಬಳಿಯಲ್ಲಿಯೇ ಇದ್ದ ಶಿಲಾಸನದಲ್ಲಿ ಕುಳಿತನು. ಅವನಿಗೆ ಹತ್ತಿರದಲ್ಲಿಯೇ ಪಂಡಿತರು ಕುಳಿತು, ಮೆಲುದನಿಯಲ್ಲಿ ಮಾತಿಗೆ ಆರಂಭಿಸಿದರು.

"ನಾನು ರಾಜಧಾನಿಯಲ್ಲಿ ಹಲವು ಕಡೆಗೆ ಸುತ್ತಾಡಿ ಬಂದೆ; ಬೇರೆಬೇರೆಯವರನ್ನೂ ಅಲ್ಲಲ್ಲಿ ತಿರುಗಾಡಿಕೊಂಡು ಬರುವಂತೆ ಹೇಳಿಕಳುಹಿಸಿದ್ದೆ. ನಗರದಲ್ಲಿ ಎಲ್ಲೆಲ್ಲಿಯೂ ಒಂದೆ ಒಂದು ವಿಷಯದ ಚರ್ಚೆ ನಡೆದಿದೆ. ಎಲ್ಲರೂ ಮಾತನಾಡುವುದು ದಂಡನಾಯಕರ ವಿಚಾರವನ್ನೇ! ಈಶ್ವರನಾಯಕನನ್ನು ಆ ಸ್ಥಳಕ್ಕೆ ನಿಯಮಿಸಿಕೊಂಡುದಕ್ಕಾಗಿ ಯಾರ ಬಾಯಲ್ಲಿಯೂ ಅಸಮ್ಮತಿ-ಅಸಮಾಧಾನಗಳ ಉದ್ಗಾರಗಳೇ! ಹೊರಗಣಿಂದ ಬಂದ ಮಾಂಡಲಿಕ-ಮನ್ನೆಯ–ಸಾಮಂತರುಗಳಂತೂ ಒಳಗೊಳಗೆಯೆ ಉರಿಯಲು ತೊಡಗಿದ್ದಾರಂತೆ. ಇನ್ನೊಂದು ವಿಷಯ! ನಾನು ದೇವಣ್ಣನಾಯಕರನ್ನು ಕೂಡ ಸಂಧಿಸಿ ಬಂದೆ; ಈಶ್ವರನಾಯಕನು ಅವರಿಗೆ ಸಂಬಂಧಿಯಲ್ಲವೇ! ಅಂತಹ ಅವರಿಗೆ ಕೂಡ ಇದು ಸಮ್ಮತವಿಲ್ಲ."

ಜಡವಾದ ಧ್ವನಿಯಲ್ಲಿ ರಾಜಶೇಖರನು ಮಾತನಾಡಿದ.

"ಪಂಡಿತರೇ, ನಡೆದುದೇನೋ ನಡೆದು ಹೋಗಿದೆ; ನರಸಿಂಹನಾಯಕರು ಬರುವವರೆಗೆ ಜನರಲ್ಲಿ ಹೆಚ್ಚಿಗೆ ಗುಲ್ಲು–ಗಲಭೆಗಳು ಏಳದಂತೆ ಮಾಡುವುದು ನಮ್ಮ ಕರ್ತವ್ಯವಾಗಿದೆ. ಅವರು ಬಂದಮೇಲೆ ಮುಂದೆ ಏನು ಮಾಡಬೇಕೆಂಬುದನ್ನು ಮಾತನಾಡಿ ನಿರ್ಣಯಿಸಬಹುದಂತೆ."

"ಅಣ್ಣಾಜೀ! ನಾನು ಈಗಾಗಲೆ ಸ್ವಲ್ಪ ಕೆಲಸವನ್ನು ಮಾಡಿಯೆ

ಬಂದಿದ್ದೇನೆ. ನರಸಿಂಹನಾಯಕರಲ್ಲಿ ಅಭಿಮಾನವಿದ್ದ ಮುಖ್ಯಮುಖ್ಯ ಅಧಿಕಾರಿಗಳನ್ನೆಲ್ಲ ಕಂಡು, ಅವರನ್ನು ಸಮಾಧಾನದಿಂದಿರುವಂತೆ ಹೇಳಿ-ದ್ದೇನೆ. ಕೆಲಕೆಲವು ಕಡೆಗಂತೂ— ಈಶ್ವರನಾಯಕನನ್ನು ನಿಯಮಿಸಿದುದು ನರಸಿಂಹನಾಯಕರ ಅನುಮತಿಯಿಂದಲೇ ಆಗಿದೆ—ಎಂದು ಸುಳ್ಳನ್ನು ಕೂಡ ಹೇಳಬೇಕಾಗಿ ಬಂದಿತು ನನಗೆ. ಇನ್ನೊಂದು ವಿಶೇಷ ಸಂಗತಿ ಯೆಂದರೆ: ಹೊರಗಣಿಂದ ಬಂದಿದ್ದ ಮಾಂಡಲಿಕ–ಸಾಮಂತ–ಪಾಳೆಯಗಾರ ರೆಲ್ಲರೂ ಮರಳಿ ತಮ್ಮ ಸ್ಥಳಗಳಿಗೆ ಹೊರಟುಹೋದಮೇಲೆ, ಏನಾದರೂ ವಿಪರೀತ ಕಾರ್ಯಕ್ಕೆ ತೊಡಗಿಕೊಂಡಾರೆಂದು ಭೀತಿ ನನಗೆ! ''

" ಆ ಭೀತಿ ನನ್ನ ಎದೆಯನ್ನೂ ಆಗಾಗ ಕೆಣಕುತ್ತಲಿದೆ. ಅದಕ್ಕೆ ಏನುಮಾಡಬೇಕೆಂಬುದನ್ನು ನೀವು ಏನನಾದರೂ ಯೋಚಿಸಿದ್ದೀರಾ? "

" ನನಗೇನೋ ಹೀಗೆ ಮಾಡಬೇಕೆಂದು ಎನಿಸುತ್ತಿದೆ. ಅವರೆಲ್ಲರಲ್ಲಿಯೂ ನಿಮ್ಮ ವಿಷಯದಲ್ಲಿ ತುಂಬ ಶ್ರದ್ಧೆಯಿದೆ. ನಾನು ಈಗ ಬಳಸಿರುವ ಸುಳ್ಳನ್ನೇ ಬಳಸಿ, ಅವರೆಲ್ಲರಿಗೆ ಒಂದೊಂದು ಓಲೆಗಳನ್ನು . . ನಿಮ್ಮ ಹೆಸರುಹಾಕಿ ಬರೆದು ಕಳುಹಿಸೋಣ! ' ನರಸಿಂಹನಾಯಕರ ಒಪ್ಪಿಗೆಯಿಂದಲೆ ಆದ ವಿಷಯವು ನನಗೆ ಗೊತ್ತಿರದುದರಿಂದ, ಅಂದು ಸಭೆಯಲ್ಲಿ ಹಾಗೆಲ್ಲ ಮಾತನಾಡಬೇಕಾ ಯಿತ್ತು ಎಂಬ ಇನ್ನೊಂದು ಸುಳ್ಳನ್ನೂ ಆ ಓಲೆಗಳಲ್ಲಿ ಬರೆಯೋಣ! ರಾಜ-ಕಾರ್ಯ ಅಣ್ಣಾಜೀ! ಸುಳ್ಳಾಡದಿದ್ದರೆ ವ್ಯರ್ಥಸಂಕಟಗಳಿಗೆ ಎದೆಯೊಡ್ಡಿ-ನಿಲ್ಲಬೇಕಾಗಿ ಬರಬಹುದು! ''

ವಿಷಾದದ ಮೆಲುನಗೆಯೊಂದಿಗೆ ರಾಜಶೇಖರನು ಹೇಳಿದ.

" ಸರಿ! ವಿಜಯನಗರದ ಸಾಮ್ರಾಜ್ಯಾಭಿಮಾನವು ಚಿಕ್ಕಪ್ಪನ ಕೊಲೆಯ ಪಾತಕವನ್ನೇ ನನ್ನ ಕಡೆಯಿಂದ ಮಾಡಿಸಿಬಿಟ್ಟಿದೆ. ಅದರ ಜೊತೆಗೆ ಇದೊಂದು ಸುಳ್ಳಿನ ಪಾತಕವೂ ಬಂದರೆ ಬರಲಿ! ನಾಡಿನಲ್ಲಿ ಅಶಾಂತಿಯು ತಲೆದೋರದಿದ್ದರೆ ಸಾಕು! "

" ಆಯಿತು! ಹಾಗಾದರೆ ನಾನು ಇಂದಿನ ರಾತ್ರಿಯಲ್ಲಿಯೆ ನರಸಿಂಹ-ನಾಯಕರ ಕಡೆಗೆ, ಇಲ್ಲಿಯ ಸಮಾಚಾರಗಳನ್ನೆಲ್ಲ ಬರೆದ ಓಲೆಯನ್ನು ಕಳುಹಿಸಿಕೊಡುತ್ತೇನೆ. ಬೇಗನೆ ಇಲ್ಲಿಗೆ ಬಂದುಬಿಡುವಂತೆಯೂ ತಿಳುಹಿಸು ತ್ತೇನೆ. "

ನಾರಾಯಣಪಂಡಿತರು ರಾಜಶೇಖರನನ್ನು ಬೀಳ್ಕೊಂಡು ಹೊರಟು ನಡೆದರು. ಅವರು ಹೋದಮೇಲೆಯೂ ರಾಜಶೇಖರನು ಕೆಲವು ಕಾಲದ ವರೆಗೆ ಅಲ್ಲಿಯೆ ಕುಳಿತಿದ್ದು, ಅಮಾವಾಸ್ಯೆಯ ಮರುದಿನದ ಕಗ್ಗತ್ತಲು ಲೋಕಕ್ಕೆಲ್ಲ – ದಟ್ಟವಾದ ಕಾಡಿಗೆಯ – ಬಣ್ಣವನ್ನು ಬೋಳೆಯುತ್ತಿರು-ವಾಗಲೆ ಎದ್ದು, ಕುಟೀರದ ಕಡೆಗೆ ನಡೆದನು.

---

## ೧೯ನೆಯ ಪರಿಚ್ಛೇದ

ಅದೇ ದಿನದ ಕಾರಿರುಳು ಹತ್ತುಗಳಿಗೆ ಕಳೆದು ಹೋಗಿದ್ದಿತು. ನಾರಾಯಣ ಪಂಡಿತರೊಡನೆ ಮಾತನಾಡಿದಾಗಿನಿಂದ, ರಾಜಶೇಖರನ ಭಾರ-ವಾಗಿದ್ದ ಮನಸ್ಸು ಸಸುವೆ ಹಗುರಾದಂತೆ ಆಗಿದ್ದಿತು. ಆದರೂ ಬಗೆಬಗೆಯ ಅಂತರ್ವಿಚಾರಗಳಿಂದ ಆತನಿಗೆ ನಿದ್ರೆಯಿನ್ನೂ ಬಂದಿರಲಿಲ್ಲ; ಎಂತಲೆ ವಿಶ್ರಾಂತಿ ಭವನದ ವ್ಯಾಘ್ರಾಸನದಲ್ಲಿ – ದಿಂಬಿಗೊರಗಿ – ಬಿದ್ದುಕೊಂಡಂತೆಯೆ ಕುಳಿ-ತಿದ್ದು, ಧನಶ್ರೀರಾಗದ – ಕರುಣರಸವನ್ನು ಹೊರಕ್ಕೆ ಹಾಕುವ – ತಾನ ಗಳೊಡನೆ ಗೀತವೊಂದನ್ನು ಗುಣುಗುಣಿಸುತ್ತಿದ್ದಾನೆ:—

**" ಮನದೊಳಿಂದಿನ ಪಯಣದೆಣೆಯರಿತು ದೀವಟಗ !**
**" ಅನುಗೊಳಿಸು ಚೆನ್ನಾಗಿ ಮಿನುಗುವೊಲು ದೀವಿಗೆಯ !**
**" ಇರುಳು ಮೊದಲೇ ಅಮಾಸೆಯದ್ದು, ಕರಿಗತ್ತಲೆಯು**
**" ಹರಡಿ ಹತ್ತೂ ದೆಸೆಗಳನ್ನು ಮರೆಮಾಡಿಹುದು !**
**" ಕಿರುಬೆಳಕನಾದರೂ ಕೊಡುವುವೆನೆ ತಾರೆಗಳು :**
**" ಕರಿಯ ಮೋಡವು ಮುಚ್ಚಿಹುದು ತನ್ನ ಮುಸುಕಿನೊಳು ! "**

ಹಾಡಿನ ಗುಣುಗುಣಾಟವನ್ನು ಭೇದಿಸಿ, ಸಮೀಪದ ಮರದೊಳಗಿನ-ದೊಂದು ಗೂಗೆಯ ಕೂಗಿನ ಅಪಸ್ವರವು – ರಾಜಶೇಖರನ ಕಿವಿಯನ್ನು ಸೇರಿ – ಮನಸ್ಸನ್ನು ಅಸ್ಥಿರಗೊಳಿಸಿತು. ಕುಳಿತಿದ್ದವನು ಥಟಕ್ಕನೆ ಮೇಲ-ಕ್ಕೆದ್ದು, ಗವಾಕ್ಷದ ಬಳಿಗೆ ಹೋಗಿ, ಹೊರಬಯಲನ್ನು ನಿಟ್ಟಿಸಿ ನೋಡಿದ. ಇದುವರೆಗೆ ದೀಪದ ಬೆಳಕಿನಲ್ಲಿಯೆ ಇದ್ದುಕೊಂಡಿದ್ದ ಆತನ ಕಣ್ಣುಗಳಿಗೆ, ಹೊರಗಿನ ಕತ್ತಲೆಯ ಸ್ವಾಭಾವಿಕ ಕರಾಳತೆಯು, ಇನ್ನಿಷ್ಟು ಭೀಕರವಾಗಿ

ಕಂಡಿತು. ಆ ಭೀಕರತೆಗೆ ಮತ್ತೊಂದು ಸಲ ಕೂಗಿದ ಗೂಗೆಯು ಕೂಗು ಮತ್ತಿಷ್ಟು ಭಯಾನಕವಾದ ಬಣ್ಣವನ್ನು ಹಾಕಿತು. ಅದೇ ವೇಳೆಯಲ್ಲಿ ಟೀಂವಕ್ಕಿಯೊಂದು, ಶಾಂತಿಕುಟೀರದ ಮೇಲಿಂದಲೆ 'ಟಿಂವ್ ಟಿಂವ್' ಎಂದು ಧ್ವನಿಮಾಡುತ್ತ, ಸಿಡಿಸಿಡಿದು ಹಾರಿಹೋಯಿತು. ಭುಸ್ಸೆಂದು ಗವಾಕ್ಷವನ್ನು ನುಗ್ಗಿಬರುತ್ತಿದ್ದ ಮೂಡಣದ ಗಾಳಿಯ ಚಳಿಗೆ, ರಾಜ-ಶೇಖರನ ಮೈಯೆಲ್ಲ ನಡುಗಿ ನವಿರೆದ್ದು ನಿಂತಿತು. ಆ ಚಳಿಯ ಕೊರೆತವನ್ನು ಸಹಿಸಲಾರದವನಾಗಿ ರಾಜಶೇಖರನು ಮರಳಿಬಂದು, ಮೊದಲಿನಂತೆಯೆ ಆಸನದಲ್ಲಿ ಕುಳಿತುಕೊಂಡನು. ಒಂದೆರಡು ನಿಮಿಷಗಳನ್ನು ಹಾಗೆಯೆ ಕಳೆದು, ತನ್ನ ಹಾಡನ್ನು ಮತ್ತೆ ಮೆಲುದನಿಯಲ್ಲಿಯೆ ಮುಂದುವರಿಸಿದನು.

" ಇಂದೆಯೇ ಬೀಸುತಿದೆ ಬಲವಾಗಿ ಬಿರುಗಾಳಿ;
" ನಂದಿದರೆ ದೀವಿಗೆಯು ನಡುವೆ ಮಾಡುವುದೇನು ?
" ಸಂಧಿಸಲು ನನ್ನೊಡೆಯ ತೊಂದರೆಯ ಪಡಬಹುದು, –
" ಎಂದು ಬಗೆಯುತ ನನ್ನ ಮೈಮನವು ನಡುಗುವುದು ! "

* * * *

" ಮಿಣುಕುಮಿಣುಕಾಗಿ ಅರೆಬೆಳಕ ಬೀರಿದರೇನು ?
" ದಣದಣನೆ ಉರಿದುರಿದು ಕ್ಷಣದಿ ನಂದಿದರೇನು ?
" ಕೊನೆಗಾಣುವುದೆ ನನ್ನ ಪಯಣವದು ಸುಲಭದಲಿ ?
" ಅಣಿಮಾಡು ಬೆಳಕ ಬಗೆದಿದನೆಲ್ಲ ನನ್ನ ಹುಲಿ ! "

ಶಾಂತಿಕುಟೀರದಲ್ಲಿಯ ಬೇರೆಯವರೆಲ್ಲರೂ ಮೊದಲ ನಿದ್ದೆಯ ಸವಿಯಲ್ಲಿ, ಹೊರಗಿನದೆಲ್ಲವನ್ನೂ ಮರೆತುಬಿಟ್ಟಿದ್ದರು. ಅವರೆಲ್ಲರ ನಿದ್ದೆಯ ಸೊಗಸನ್ನು ತಾನು ಏತಕ್ಕಾಗಿ ಭಂಗಗೊಳಿಸಬೇಕೆಂದೋ ಏನೋ ! ರಾಜಶೇಖರನ ಗೀತವು ಮೆಲ್ಲಗೆ ಸಾಗಿದ್ದಿತು. ಇದ್ದುದಿದ್ದ ಹಾಗೆಯೆ ಕೈಯಲ್ಲಿ ಕರಿಯ ತೆರೆಯೊಂದನ್ನು ಹಿಡಿದುಕೊಂಡು, ರತ್ನಾಂಬಿಕೆಯು ಅಲ್ಲಿಗೆ ಬಂದು, ರಾಜಶೇಖರನೆದುರು ನಿಂತಳು. ನೋಡಿ, ಒಮ್ಮೆಲೆ ಹಾರಿ-ಬಿದ್ದವನಂತಾಗಿ ರಾಜಶೇಖರನು, ಎದ್ದು ಸರಿಯಾಗಿ ಕುಳಿತುಕೊಂಡು ಕೇಳಿದನು.

" ಏನು ಅಮ್ಮಾಜಿ ! ಮತ್ತೆಯೇತಕ್ಕೆ ಬಂದಿರಿ ? "

" ಇಂದಿನ ಓಲಗದಲ್ಲಿಯ ನಿಮ್ಮ ನಡೆವಳಿಕೆಯು ನನ್ನನ್ನು ಇಲ್ಲಿಗೆ ಎಳೆದು ತಂದಿತು; ಎಂತಲೇ ಮತ್ತೆ ಬಂದಿದ್ದೇನೆ. "

ಮುಂದೆ ತಾನು ಮಾತನಾಡಬೇಕೇನೆಂಬುದನ್ನು ತಿಳಿಯದವನಾಗಿ, ರಾಜಶೇಖರನು ಮುಖತಗ್ಗಿಸಿ ಕುಳಿತುಕೊಂಡನು. ರತ್ನಾಂಬಿಕೆಯು ಮತ್ತೆ ತಾನೆ ಮಾತನಾಡಿದಳ .

" ವಿಜಯನಗರದ ಸಿಂಹಾಸನದ ಅದೃಷ್ಟವು ಎಂತಹದಿದೆಯೋ ! ನಿಮ್ಮಂತವರ ಸಹವಾಸಸೌಖ್ಯವನ್ನು ಅದು ಕಳೆದುಕೊಂಡಿದೆ. "

" ವಿಜಯನಗರವನ್ನು ಬಿಟ್ಟು ನಾನೆಲ್ಲಿ ಹೋಗುತ್ತೇನೆ ಅಮ್ಮಾಜೀ ? ಸಿಂಹಾಸನಕ್ಕೆ ನನ್ನಿಂದಾದಷ್ಟು ಸೇವೆಯನ್ನು ಸಲ್ಲಿಸಿಯೆ ಸಲ್ಲಿಸುತ್ತೇನೆ."

ಮರುಕದ ಮೆಲುದನಿಯಲ್ಲಿ ರತ್ನಾಂಬಿಕೆ ನುಡಿದಳು.

" ಸಹವಾಸಕ್ಕೂ ಸೇವೆಗೂ ಅಂತರವಿದೆಯಲ್ಲವೇ ? ನಿಮ್ಮ ಜೊತೆಯಿಂದ ಕನ್ನಡಸಾಮ್ರಾಜ್ಯದ ಆ ಸಿಂಹಾಸನದ ಬೆಲೆಯೂ ಹೆಚ್ಚುತ್ತಿದ್ದಿತು!"

" ಅದನ್ನೇನೂ ನಾನು ಕಾಣೆ! ಕರ್ಣಾಟರಾಜ್ಯದ ನಿರಪೇಕ್ಷ-ಸೇವಕನಾಗಿರಬೇಕೆಂಬುದೊಂದೆ ಒಂದು ಆಶೆಯನ್ನು ನಾನು ಇಟ್ಟುಕೊಂಡಿದ್ದೇನೆ.

ಈಗ ರತ್ನಾಂಬಿಕೆ ಮಾತನಾಡದೆ ಸುಮ್ಮಗಿದ್ದಳು; ರಾಜಶೇಖರನು ಮುಂದೆ ಮಾತನಾಡಿದ.

" ಹಿಂದೆಯೆ ನಿಮಗೆ ನಾನು ಖಂಡಿತವಾಗಿ ಹೇಳಿದ್ದೇನೆ. . ನನ್ನ ಕಡೆಗೆ ಬರುತ್ತಿರಬೇಡಿರೆಂದು ! ಮಹಾರಾಣಿಯಾಗಬೇಕೆಂಬ ನಿಮ್ಮ ಆಕಾಂಕ್ಷೆಗೆ ನನ್ನಿಂದ ಏನಾದರೂ ನೆರವನ್ನು ಹಾರಯಿಸಿ ಬಂದಿದ್ದೀರಾ . . ಈಗ ? "

" ಇಲ್ಲ ! ನಾನು ಆ ಆಶೆ-ಆಕಾಂಕ್ಷೆಗಳಿಗೆಲ್ಲ ನೀರೆರೆದೇ ನಿಮ್ಮ ಬಳಿಗೆ ಬಂದಿದ್ದೇನೆ. "

" ಎಂದರೇನು ? "

" ನನಗೆ ಮಹಾರಾಣಿಯಾಗುವುದು ಬೇಡವಾಗಿದೆ; ನಿಮ್ಮ ಜೊತೆಯಲ್ಲಿ ನಾನೂ ಸೇವಕಿಯಾಗಿರಬೇಕೆಂದು ಬಯಸುತ್ತಿದ್ದೇನೆ. "

" ಸಾಮ್ರಾಜ್ಯದ ಸೇವೆಯು ಕನ್ನಡನಾಡಿನ ಎಲ್ಲ ಸ್ತ್ರೀಪುರುಷರದೂ

ಕರ್ತವ್ಯವಾಗಿದೆ. ಅದನ್ನು ಮಾಡುವುದಕ್ಕೆ ಎಲ್ಲರಿಗೂ ಸ್ವಾತಂತ್ರ್ಯವಿದೆ. ಅದಕ್ಕೆ ನನ್ನ ಜೊತೆಯೇತಕ್ಕೆ ಬೇಕಾಗಿದೆ ? "

" ಬರೀ ಸಾಮ್ರಾಜ್ಯಸೇವೆಯೊಂದರಿಂದಲೆ ನನಗೆ ತೃಪ್ತಿಯಿಲ್ಲ ! "

" ಹಾಗಾದರೆ ಇನ್ನೇನು ? "

ನಸು ತಡೆದು ತಗ್ಗಿದ ಕೊರಳಲ್ಲಿ ಹೇಳಿದಳು ರತ್ನಾಂಬಿಕೆ.

" ಸಾಮ್ರಾಜ್ಯಸೇವೆಯೊಡನೆಯೆ ನಿಮ್ಮ ಸೇವೆ – ಸಹವಾಸಗಳೂ ಸಿಕ್ಕಬೇಕೆಂದು ನನ್ನ ಅಂತರಂಗದ ಆಶೆಯಾಗಿದೆ. "

" ನಿಮಗೆ ನಾನು ಮೊದಲೇ ಹೇಳಿದ್ದೇನೆ ! ಮತ್ತೆ ಮತ್ತೆ ಅದನ್ನೇ ಕೇಳಿ, ನಿಮ್ಮಲ್ಲಿ ನಿರಾಶೆ ಹೆಚ್ಚುವಂತಹ ಉತ್ತರವನ್ನು, ನನ್ನಿಂದ ಏತಕ್ಕಾಗಿ ಅಪೇಕ್ಷಿಸುತ್ತೀರಿ ? "

ಮತ್ತೆ ಕೊಂಚಕಾಲ ಸುಮ್ಮಗೆ ನಿಂತಿದ್ದು, ಬಳಿಕ ವಿಚಿತ್ರವಾದ ಕರುಣಾಧ್ವನಿಯಲ್ಲಿ ರತ್ನಾಂಬಿಕೆಯು ಕರೆದಳು.

" ರಾಜಶೇಖರಾ ! "

ನಿಶ್ಚಲಮನದ ರಾಜಶೇಖರನು ಮೊಗವನ್ನು ನೆಗಹಿ ಕೇಳಿದನು.

" ಏನು ಅಮ್ಮಾಜೀ ? "

" ರಾಜಶೇಖರಾ ! ನಿನ್ನ ಹೃದಯಕ್ಕೆ ಕಣ್ಣುಗಳೇ ಇಲ್ಲವೇ ? "

ಎದೆಯ ಕೊರಗನ್ನು ಸೂಚಿಸುವ ಹುಸಿನಗೆಯಲ್ಲಿ ರಾಜಶೇಖರನು ಹೇಳಿದ.

" ಅಮ್ಮಾಜೀ ! ಕಣ್ಣುಗಳೇನೋ ಇವೆ; ಆದರೆ ಇನ್ನಾವುದನ್ನೂ ನೋಡಲಿಕ್ಕೆ ಅವುಗಳಿಗೆ ಆಶೆಯಿಲ್ಲವಾಗಿದೆ. "

ರತ್ನಾಂಬಿಕೆ ನಸು ಗಡುಸು-ದನಿಯಲ್ಲಿ ಕೇಳಿದಳು.

" ಅಂತಹ ಆಶೆಯನ್ನು ಹಚ್ಚುವ ಶಕ್ತಿ ನನ್ನಲ್ಲಿ ಇದೆಯಲ್ಲವೇ ? "

" ಇರಬಹುದು ನಿಮ್ಮಲ್ಲಿ ಆ ಶಕ್ತಿ ! ನನಗೆ ಆ ಶಕ್ತಿಯನ್ನು ಪರೀಕ್ಷೆ ಮಾಡುವುದಕ್ಕೆ ಮನಸ್ಸಿಲ್ಲ. ನಾನು ಆ ನನ್ನ ಒಳನೋಟಗಳನ್ನು ಯಾವುದೊ ಒಂದು ಆದರ್ಶದಲ್ಲಿ ಯಾವಾಗಲೂ ತೊಡಕಿಸಿ ಬಿಟ್ಟಿರುತ್ತೇನೆ; ಅಲ್ಲಿಂದ ಅವುಗಳನ್ನು ಕಿತ್ತಲಾರದವನಾಗಿದ್ದೇನೆ. "

" ರಾಜಶೇಖರ ! ಆದರ್ಶಜೀವನವು ನಿನಗೆ ಮಾತ್ರ ಬೇಕು ! ನನಗೆ

ಬೇಡವೇ ? "

" ಅಮ್ಮಾಜೀ ! ನಾನು ಕಂಡ ಮಾತನ್ನು ಕಂಡಂತೆ ಹೇಳುತ್ತಿರುವು-ದಕ್ಕಾಗಿ ನೀವು ಏನನೂ ಭಾವಿಸಬೇಡಿ! ಆದರ್ಶ ಜೀವನವನ್ನು ಬಯಸು-ವವರು, ಮಾಂಸದ ಸೊವಡಿಗೆ ಓಡಿ ಓಡಿ ಬರುವ ನಾಯಿಯಂತೆ ಎಂದೂ ವರ್ತಿಸಲಾರರು ! ಮನಃಸಂಯಮವು ಆದರ್ಶಜೀವಿಗಳ ಮುಖ್ಯ ಲಕ್ಷಣವು! 'ಮಹಾರಾಣಿಯಾಗಬೇಕು ! ' 'ಮನಸ್ಸೊಪ್ಪಿದ ಗಂಡನಿಗೆ ಹೆಂಡತಿಯಾಗ-ಬೇಕು !' ಇವೆಲ್ಲ ಆಕಾಂಕ್ಷೆಗಳು ಸ್ವಾರ್ಥಮೂಲವಾದುವುಗಳು ! ಆದರ್ಶ-ವಾದಿಗಳನ್ನು ಇಂತಹ ಕ್ಷುದ್ರಸ್ವಾರ್ಥಗಳು ಎಳೆದಾಡಬಾರದು ! ಎಳೆ-ದಾಡುವುದು ನಿಸರ್ಗಸ್ವಭಾವವಾದರೂ, ಅಂತಹವರು ಅವುಗಳ ಬೆನ್ನುಹತ್ತಿ ಬಾಯಿಬಿಡುತ್ತ ಅಲೆದಾಡಬಾರದು ! "

ರತ್ನಾಂಬಿಕೆಯ ಸ್ವಾಭಿಮಾನಕ್ಕೆ ರಾಜಶೇಖರನ ಮಾತುಗಳೆಲ್ಲವೂ ಅಣಕದ ಬೈಗುಳಂತೆ ತೋರಿದುವು. ಇದ್ದುದನ್ನು ಇದ್ದಂತೆ ಆಡಿದರೆ ಬುದ್ಧಿ ಕೆಟ್ಟುಹೋಗುವಂತಹ ಕೋಪಬರುವುದು, ವ್ಯವಹಾರಜೀವನಕ್ಕೆ ಸಹಜವೆ ಆಗಿದೆ. ಆಕೆ ಕಿಡಿಯನ್ನುಗುಳುತ್ತ ಮಾತನಾಡಿದಳು.

" ರಾಜಶೇಖರಾ ! ನಿನ್ನ ಹೃದಯದಲ್ಲಿ ಇಷ್ಟೊಂದು ಕಠೋರತನದ ಮಾತುಗಳಿವೆಯೆಂದು ನಾನೆಂದೂ ಭಾವಿಸಿರಲಿಲ್ಲ ! "

" ಬೇಡವಾಗಿದ್ದ ಸತ್ಯವು ನಿಷ್ಠುರ; ಕಠೋರ ! ಇಂದ್ರನ ವಜ್ರಕ್ಕಿಂತ ಅದು ಬಿರುಸಾಗಿರುವುದು. "

"ಬೀದಿಯ ಬಸವಿಯೊಬ್ಬಳಿಗೆ ಅನ್ವಯಿಸಬಹುದಾದ ಮಾತುಗಳನ್ನು ನನ್ನ ವಿಷಯದಲ್ಲಿ ಹೇಳಿದೆಯಲ್ಲವೇ ನೀನು . . ರಾಜಶೇಖರಾ ! "

"ಹಾಗೇನೂ ಇಲ್ಲವಲ್ಲ ! ಸ್ವಾರ್ಥವೆಂದರೆ ಎಲ್ಲರಲ್ಲಿಯದೂ ಒಂದೆ ಬಗೆಯದು ! ಬೀದಿಯ ಬಸವಿಯರನ್ನು ಬೀದಿಯ ಬಸವಿಯರೆಂದು ತಿರಸ್ಕಾರದಿಂದಾದರೂ ನೋಡುವುದೇತಕ್ಕೆ ನೀವು ? "

ರಾಜಶೇಖರನು ಈ ಮಾತನ್ನು ಸಹಜವಾಗಿ ಆಡಿದನಾದರೂ, ಪ್ರಕ್ಷುಬ್ಧಳಾಗಿದ್ದ ರತ್ನಾಂಬಿಕೆಗೆ ಅದು ಚುಚ್ಚುಮಾತಾಗಿ ಕಂಡು, ಅವಳ ಕೋಪದ ಉರಿಯನ್ನು ಕೆರಳಿಸಿತು. ಒಮ್ಮೆಲೆ ಗುಡುಗಿದಳು.

" ಎಚ್ಚರಿಕೆ, ರಾಜಶೇಖರಾ ! ನೀನು ಕ್ಷತ್ರಿಯಕುಮಾರಿಯೊಬ್ಬಳ

ಹೃದಯವನ್ನು ಅಳುಕಿಸುತ್ತಿದ್ದೀಯೆ ! ತಿಳಿಯಿತೇನು ?"

"ಯಾರ ಹೃದಯವನ್ನೂ ಅಳುಕಿಸಬೇಕೆಂಬ ಇಚ್ಛೆ ನನಗಿಲ್ಲ ! ಎಂತಲೇ ನನ್ನ ಪಟ್ಟಿಗೆ ನಾನು ಏಕಾಕಿಯಾಗಿಯೆ ಇದ್ದುಬಿಡಬೇಕೆಂದು ನಿರ್ಣಯಿಸಿ ನಿಂತಿದ್ದೇನೆ. ಅಮ್ಮಾಜೀ ! ನನ್ನಿಂದ ನಿಮ್ಮ ಬಯಕೆಯನ್ನು ಪೂರಯಿಸಲಿಕ್ಕೆ ಆಗದು. ದಯೆಯಿಟ್ಟು ಇಲ್ಲಿಂದ ಹೊರಟುಬಿಡಿ."

ಆವೇಶವುಂಟಾದವರಂತೆ ರತ್ನಾಂಬಿಕೆ ರೇಗಿ ನುಡಿದಳು.

"ರಾಜಶೇಖರಾ! ನನ್ನ ಬದುಕಿನ ಗುರಿಯ ಕನ್ನಡಿಯನ್ನು . . ನೀನು ಒಡೆದು ಹಾಳುಮಾಡಿದೆ. ಇನ್ನು ನಿನ್ನ ಗುರಿಯ ಕನ್ನಡಿಯನ್ನು ನೀನು ಕಾಪಾಡಿಕೊಳ್ಳುವೆಯಂತೆ. . ಚೆನ್ನಾಗಿ !"

ರಾಜಶೇಖರನು ನಕ್ಕು ನುಡಿದನು.

"ನಾನೇನೂ ವಿಶ್ವಾಮಿತ್ರನಂತಹ ಮಹಾತಪಸ್ವಿಯಲ್ಲ ! ನೀವು ಮೇನಕೆಯಾಗಿ ಬಂದು ನನ್ನ ತಪಸ್ಸನ್ನು ಕೆಡಿಸಬೇಕಾಗಿಲ್ಲ !"

ಮೊದಲಿನ ಆವೇಶದಲ್ಲಿಯೆ, ಹುಚ್ಚುನಗೆಯನ್ನು ಗಟ್ಟಿಯಾಗಿ ನಗುತ್ತ ರತ್ನಾಂಬಿಕೆ ಹೇಳಿದಳು.

"ಹಾಗಾದರೆ ನೋಡು ರಾಜಶೇಖರಾ ! ನಾನಿನ್ನು ಮಹಾರಾಣಿ ಯಾಗಿಯೇ ಬಿಡುತ್ತೇನೆ."

ರಾಜಶೇಖರನು ಸಹಜವಾಗಿಯೆ ಹೇಳಿದನು.

"ಅದು ನಿಮ್ಮ ಇಷ್ಟ ! ನೀವು ಮಹಾರಾಣಿಯಾಗುವುದು ಖಂಡಿತವೇ ಇದ್ದರೆ. . ಇಷ್ಟೊಂದು ಕಾರ್ಯವನ್ನು ಮಾಡಬೇಕು ! ಅದೇ ನೆಂದರೆ: ಪೆದ್ದರಾಯನಿಗೆ ಯುಕ್ತವಾದ ಸಲಹೆಗಳನ್ನು ಕೊಟ್ಟು, ಸಾಮ್ರಾ-ಜ್ಯಕ್ಕೆ ಹಿತವಾಗುವಂತೆ ಆಡಳಿತ ಕ್ರಮವನ್ನು ಇರಿಸಬೇಕು."

"ಅದನ್ನು ನೀನು ಏತಕ್ಕಾಗಿ ಹೇಳಬೇಕು ?"

"ಸಾಮ್ರಾಜ್ಯದ ಪ್ರೀತಿ–ಅಭಿಮಾನಗಳು ನನ್ನಿಂದ ಹೇಳಿಸುತ್ತಿವೆ ತಾಯಿ ! ಪೆದ್ದರಾಯನ ಸ್ವಭಾವ ಸ್ವಲ್ಪ ದುಡುಕಿನದು ; ಅದನ್ನು ಬಿಗಿದು ಹಿಡಿಯಲಿಕ್ಕೆ ಒಬ್ಬರು ಬೇಕು ! ಆ ಕಾರ್ಯವನ್ನು ನೀವು ಮಾಡಿದರೆ ಸಾಮ್ರಾಜ್ಯದ ಒಂದು ಮಹತ್ತ್ವದ ಸೇವೆಯನ್ನು ಮಾಡಿದಂತಾದೀತು !"

ರತ್ನಾಂಬಿಕೆಯ ಮುಖದ ಚೆಂಬಣ್ಣವು . . ನೆತ್ತರೇರಿ ಇನ್ನಿಷ್ಟು ಕೆಂಪಗೆ

ಆಯಿತು. ಕ್ರೋಧದಿಂದ ಕಂಪಿಸುವ ಸ್ವರದಲ್ಲಿ ಅವಳು ಹೇಳಿದಳು.

"ನನ್ನ ಪ್ರೀತಿ-ಅಭಿಮಾನಗಳನ್ನು ನೀನು ತುಳಿದಿದ್ದೀಯೆ! ನಿನ್ನ ಪ್ರೀತಿ-ಅಭಿಮಾನಗಳನ್ನು ನಾನು ತುಳಿದು ಮೆಟ್ಟುತ್ತೇನೆ. ರಾಜಶೇಖರಾ! ಇಂದಿನಿಂದ ನಾನೂ ನನ್ನ ಹೃದಯದ ಕಣ್ಣುಗಳನ್ನು ಕುರುಡುಗೊಳಿಸಿ ಬಿಡುತ್ತೇನೆ. ನಿನ್ನ ಮನಸ್ಸಿಗೆ ಒಪ್ಪಿಗೆಯಾಗದಂತೆ ಸಾಮ್ರಾಜ್ಯದ ವ್ಯವಸ್ಥೆಯನ್ನು – ದೊರೆಯ ಕಡೆಯಿಂದ – ಇರಿಸುವುದಕ್ಕೆ ಹಚ್ಚುವುದು, ನನ್ನ ಕರ್ತವ್ಯವೆಂದು ನಾನು ತಿಳಿಯುತ್ತೇನೆ. ಅದಕ್ಕಾಗಿಯೇ ನಾನು ಮಹಾರಾಣಿಯಾಗುವವಳು! ರಾಜಶೇಖರಾ! **ನಾ** – ನು ಮಹಾರಾಣಿಯಾಗುವವಳು! ತಿಳಿಯಿತೇನು? ಒಂದುಬಗೆಯಿಂದ ವಿರೂಪಾಕ್ಷರಾಯನು ನನ್ನ ಅಕ್ಕನ ವ್ರತವನ್ನು ಕೆಡಿಸಿದ. ಇನ್ನೊಂದು ಬಗೆಯಿಂದ ನೀನು ನನ್ನ ವ್ರತವನ್ನು ಹಾಳುಮಾಡಿದ್ದೀಯೆ! ನಾನಿನ್ನು ಹೊರಡುತ್ತೇನೆ! ಹೊರಡುವುದಕ್ಕೆ ಮೊದಲು ಒಂದು ಮಾತನ್ನು ಹೇಳುತ್ತೇನೆ! ಕಿವಿಗೊಟ್ಟು ಕೇಳು! ನನ್ನ ಹೆಸರೇನು ಗೊತ್ತೋ..? ರತ್ನಾಂಬಿಕೆ..! ಮೆಚ್ಚಿ ಮುಡಿದವರಿಗೆ ರತ್ನವು ಅಲಂಕಾರವಾಗಿ, ಅವರ ಜೀವನದ ಸೌಂದರ್ಯವನ್ನು ಹೆಚ್ಚಿಸುವುದು! ಅರೆದು ಕುಡಿಯುವೆನೆನ್ನುವವರಿಗೆ ವಿಷವಾಗಿ, ಸಾವನ್ನು ಹತ್ತಿರಕ್ಕೆ ಕರೆದು ತರುವುದು! ಜಾಗ್ರತೆಯಾಗಿರು ಇನ್ನು..!"

ಎಂದು ನುಡಿಯುತ್ತಿರುವಾಗಲೆ ರತ್ನಾಂಬಿಕೆಯು ಸರ್ರೆಂದು ಹೊರಟುಬಿಟ್ಟಳು. ರಾಜಶೇಖರನು ವಿವಿಧಭಾವಗಳು ಹೊರಸೂಸುತ್ತಿರುವ ಬೆರಗುಗಣ್ಣನ್ನು ಅರಳಿಸಿ, ರತ್ನಾಂಬಿಕೆಯು ಹೋದ ಹಾದಿಯ ಕಡೆಗೆ ನೋಡಿಯೇ ನೋಡುತ್ತಿದ್ದನು. ಬಹಳ ಹೊತ್ತಾದಮೇಲೆ ನೋಟಗಳನ್ನು ಮತ್ತೊಂದು ಕಡೆಗೆ ತಿರುಗಿಸಿ, ನಿಟ್ಟುಸಿರಿನೊಂದಿಗೆ – ಕುಗ್ಗಿದ ಧ್ವನಿಯಲ್ಲಿ-ಹೇಳಿದನು: "ಸರ್ವಾರಿಷ್ಟಶಾಂತಿರಸ್ತು!" ಎಂದು.

---

## ೨೦ನೆಯ ಪರಿಚ್ಛೇದ.

ಪಟ್ಟಾಭಿಷೇಕದ ಸಮಾರಂಭವು ಮುಗಿದು ಇಂದಿಗೆ ಐದು ದಿನ-ಗಳಾದುವು. ಹೊರಗಣಿಂದ ಬಂದ ಜನರೆಲ್ಲ ಮರಳಿ ತಮ್ಮ ತಮ್ಮ ಎಡೆಗಳಿಗೆ ಹೊರಟು ಹೋಗಿರುವರು. ರಾಜಧಾನಿಯ ಜನರಲ್ಲಿ ಎಲ್ಲೆಲ್ಲಿಯೂ ಹೊಸ-ದೊರೆ, ಹೊಸ ದಂಡನಾಯಕ, ನರಸಿಂಹನಾಯಕ, ರಾಜಶೇಖರ ಇವರ ವಿಷಯಕವಾದ–ಅನುಕೂಲ ಪ್ರತಿಕೂಲ–ತರ್ಕಚರ್ಚೆಗಳು ಕೇಳುತ್ತಿರು-ವುವು. ಕಲ್ಲಿನಾಥೇಶ್ವರನ ದೇವಾಲಯದಲ್ಲಿ, ಗಂಗಣಯ್ಯನ ಪುರಾಣ-ವಾಚನದ ಮೊದಲಿಗೂ ಕೊನೆಗೂ ನಡೆಯತಕ್ಕ ಮಾತು-ಕತೆಗಳಲ್ಲಿ, ಇದೇ ವಿಷಯುವಲ್ಲದೆ ಇನ್ನೊಂದರ ಸುದ್ದಿಯೇ ಇರುತ್ತಿರಲಿಲ್ಲ. ಮೊನ್ನೆಯ ದಿನ-ವಂತೂ ಮಹಾಲಿಂಗನಿಗೂ ಕಾಶೀಪತಿಗೂ–ಮಾತಿಗೆ ಮಾತು ಹತ್ತಿ–ಜಗಳವೇ ನಡೆದುಹೋಯಿತು. ನರಸಿಂಹನಾಯಕ ರಾಜಶೇಖರರ ಕಡೆಗೆ ಆಗಿ ಮಹಾಲಿಂಗನು ಮಾತನಾಡುವವನು! ಈಶ್ವರನಾಯಕ ಪೆದ್ದರಾಯರ ಪಕ್ಷವನ್ನೆತ್ತಿ ಕಾಶೀಪತಿಯು ಮಾತನಾಡುವವನು! ಬರುಬರುತ್ತ ಅವರ ಬಾಯ ಜಗಳ ಕೈಗೆ ಕೈ ಕೂಡುವ ಸಂದರ್ಭವನ್ನೂ ತಂದಿತು; ಆದರೆ ಗಂಗಣಯ್ಯ ಮಹಾಲಿಂಗನ ಕಡೆಗಾಗಿ, ನರಸಿಂಹನಾಯಕನನ್ನು ಎತ್ತಿ ಹಿಡಿದುದರಿಂದ, ಕಾಶೀಪತಿಯು–ಪ್ರಸಾದವು ತಪ್ಪಿಹೋದೀತೆಂಬ ಭಯ-ದಿಂದಲೋ ಏನೋ!–ದೇವಾಲಯದಲ್ಲಿರುವಾಗಷ್ಟು ಸುಮ್ಮಗೆ ಕುಳಿತಿದ್ದನು; ಆದರೆ ಮಹಾಲಿಂಗನ ವಿಷಯದಲ್ಲಿ ಅವನು ಮನಸ್ಸಿನಲ್ಲಿ ಹಗೆಯನ್ನು ಹಿಡಿದು, ಸಂದರ್ಭಸಿಕ್ಕಾಗ ಆತನಿಗೆ ಕೈತೋರಿಸಬೇಕೆಂದು ನಿರ್ಣಯಿಸಿ ಬಿಟ್ಟಿದ್ದನು; ಅದಕ್ಕಾಗಿಯೆ ಈಗ ಎರಡು ದಿನಗಳಿಂದಲೂ ಕಾಶೀಪತಿಯು, ಬೀದಿಯ ಜನರನ್ನು ತನ್ನ ಪಕ್ಷಕ್ಕೆ ಬರುವಂತೆ ಮನವೊಲಿಸುತ್ತಿದ್ದಾನೆಂಬ ಸುದ್ದಿ ಮಹಾಲಿಂಗನಿಗೆ ತಿಳಿಯಲು, ಅವನೂ ತನ್ನ ಪಕ್ಷವನ್ನು ಬಲಪಡಿಸಿಕೊಳ್ಳುವ ಕಾರ್ಯಕ್ಕೆ ತೊಡಗಿದ್ದಾನೆಂದು . . ಬೀದಿಯ ಜನರು ಕಿವಿಮಾತುಗಳನ್ನಾಡು-ತ್ತಿರುವರು. ಅದಕ್ಕೆ ಅನುಸಾರವಾಗಿಯೆ, ನಿನ್ನೆಯ ಗಂಗಣಯ್ಯನವರ ಪುರಾಣಶ್ರವಣಕ್ಕೆಂದು ಬಂದಿದ್ದ ನೆರವಿಯಲ್ಲಿ ಕಾಶೀಪತಿ–ಮಹಾಲಿಂಗ–ಇಬ್ಬರೂ ಕಾಣುತ್ತಿರಲಿಲ್ಲ.

ಇಂದಿನ ಸೂರ್ಯನು ತನ್ನ ದಿನದ ಪಯಣವನ್ನು ಮುಕ್ಕಾಲು ಪಾಲು-

ಮುಗಿಸಿಬಿಟ್ಟಿದ್ದಾನೆ. ಹೊಸತಾಗಿ ಸಿಂಹಾಸನಾರೋಹಣ ಮಾಡಿದ ಮುಮ್ಮಡಿ ವಿರೂಪಾಕ್ಷರಾಯನು – ಪೆದ್ದರಾಯನು – ಆಲೋಚನಾಗಾರದಲ್ಲಿ ಒಬ್ಬನೆ ಕುಳಿತಿದ್ದು, ಯಾರದೋ ಬರುವಿಕೆಯನ್ನು ಹಾರಯಿಸುತ್ತಲಿದ್ದಾನೆ; ಅಷ್ಟರಲ್ಲಿಯೆ ಬಾಗಿಲಾಳು ಒಳಕ್ಕೆ ಬಂದು ಕೈಮುಗಿದು ನಿಂತ. ಆತುರ ಮನನಾದ ದೊರೆಯು ಒಮ್ಮೆಲೆ ಕೇಳಿದನು.

"ಏನು? ಈಶ್ವರನಾಯಕರು ಬಂದರೇ?"

"ಅವರು ಅಲ್ಲ ಬುದ್ಧೀ! ದಳಪತಿಗಳ ಮನೆಯಲ್ಲಿ ಹೊನ್ನಮ್ಮ.. ಎಂತ ಆಳಿ ಇಲ್ಲವೇ ಬುದ್ಧೀ! ಆಯಮ್ಮ ಬಂದಿದ್ದಾಳೆ! ಬುದ್ಧಿಯವರನ್ನು ಕಾಣಬೇಕಾಗಿದೆಯಂತೆ ಅವಳಿಗೆ!"

ಸ್ವಲ್ಪವೆ ಯೋಚಿಸಿ ಪೆದ್ದರಾಯನು ಹೇಳಿದನು.

"ಸರಿ! ಅವಳಿಗೆ ಇಲ್ಲಿಗೆ ಬರುವಂತೆ ಹೇಳು!"

ಬಾಗಿಲಾಳು ಹೊರಟುಹೋದ ಎರಡುಮೂರು ನಿಮಿಷಗಳಲ್ಲಿಯೆ ಹೊನ್ನಮ್ಮ ಒಳಕ್ಕೆ ಬಂದು, ವಿನಯದಿಂದ ಮಣಿದು ನಿಂತುಕೊಂಡಳು. ದೊರೆಯು ಅವಳನ್ನು ಕೇಳಿದ.

"ಏನು ಹೊನ್ನಮ್ಮಾ!"

"ತಮಗೆ ತಲ್ಪಿಸಿ ಬರುವುದಕ್ಕೆಂದು, ರತ್ನಮ್ಮಾಜಿಯವರು ಓಲೆಯೊಂದನ್ನು ಕೊಟ್ಟಿದ್ದಾರೆ."

ಮಾತಿನೊಡನೆಯೆ ಓಲೆಯನ್ನು ಎದುರಿಗಿರಿಸಿ, ಮತ್ತೊಂದು ಸಲ ತಲೆಬಾಗಿ, ಬೀಳ್ಕೊಂಡು ಹೊನ್ನಮ್ಮ ಹೊರಟುಹೋದಳು. ದೊರೆಯು ಆ ಓಲೆಯನ್ನು ನಿಧಾನವಾಗಿ ಕೈಗೆ ತೆಗೆದುಕೊಂಡು, ಕಟ್ಟನ್ನು ಬಿಚ್ಚಿ, ಓದಲು ತೊಡಗಿದನು. ಅದರಲ್ಲಿ ಹೀಗೆ ಇದ್ದಿತು:—

"**ರಾಯಾಜೀ!**

**ನಿಮ್ಮ ಪ್ರತಿಜ್ಞೆ ಪೂರ್ಣವಾದಂತಾಯಿತು; ಅದಕ್ಕಾಗಿ ನನಗೆ ಒಂದು ಬಗೆಯಿಂದ ಸಮಾಧಾನವಾಗಿದೆ. ನಿನ್ನೆಯ ದಿನವೆಲ್ಲವೂ ಅದೇತಕ್ಕಾಗಿಯೋ ಮತ್ತೆ ಮತ್ತೆ ನಿಮ್ಮ ಜ್ಞಾಪಕವು ಆಗುತ್ತಿದ್ದಿತು.. ನನಗೆ. ನಾವಿಬ್ಬರೂ ಜೊತೆಗೂಡಿ ಆಡಿದ್ದ ಆಟಗಳು, ನೋಡಿದ್ದ ನೋಟಗಳು, ಒಂದೊಂದಾಗಿ ನನ್ನ ಮನಸ್ಸಿನೆದುರು ಬಂದು ನಿಂತು, ಹೃದಯವನ್ನು**

ಕೆಣಕಿ ಕೆಣಕಿ ಹೋಗುತ್ತಿದ್ದುವು. ಅಂದೊಂದು ದಿನ– ಗೊತ್ತಿದೆಯೇ ನಿಮಗೆ? – ನಾವಿಬ್ಬರೂ ಕತ್ತಿಯ ಹುಸಿಗಾಳೆಗವನ್ನು ಆಡುತ್ತಿದ್ದಾಗ, ನಿಮ್ಮ ಕತ್ತಿಯೇಟು – ತಪ್ಪಿ – ನನ್ನ ಬಲದ ಮುಂಗೈಗೆ ಹತ್ತಿಕೊಂಡು ಹೋಯಿತು. ಗಾಬರಿಯಾಗಿ ನೀವು, ನನ್ನ ನೆತ್ತರು ಸುರಿಯುತ್ತಿದ್ದ ಕೈಯನ್ನು ಒಮ್ಮೆಲೆ ಹಿಡಿದು ಬಿಟ್ಟಿರಿ! ಗಾಯವು ಅಷ್ಟೊಂದು ದೊಡ್ಡ ದಾಗಿ ಇಲ್ಲದೆ ಇದ್ದುದನ್ನು ಕಂಡು, ನೀವಂದು. . ನನಗೆ ನಗುನಗುತ್ತ ಹೇಳಿದ ಮಾತು. . ನಿಮ್ಮ ಲಕ್ಷ್ಯದಲ್ಲಿದೆಯೇ?

'ಇದೇನು ರತ್ನಾಂಬಿಕೇ! ನಿನ್ನ ಕೈ ಹಿಡಿಯುವ ಸಂದರ್ಭ ಈಗಲೆ ಬಂದುಬಿಟ್ಟಿತಲ್ಲ! ಮಿಕ್ಕ ಜನರೆಲ್ಲ, ಹಸೆಯ ಅರಿಸಿಣದಿಂದ ಹಳದಿ ಬಣ್ಣದ್ದಾದ ಕೈಯನ್ನು ಹಿಡಿಯುತ್ತಿದ್ದರೆ, ನಾನು. . ಕತ್ತಿಯ ಗಾಯದ ನೆತ್ತರಿನಿಂದ ಚೆಂಬಣ್ಣವನ್ನು ಹೊಂದಿದ ಕೈಯನ್ನು ಹಿಡಿದಿದ್ದೇನೆ ನೋಡು!'

"ಎರಡು ವರ್ಷಗಳ ಹಿಂದೆ ಆಡಿದ್ದ ನಿಮ್ಮ ಈ ಮಾತು, ನಿನ್ನೆಯ ಇಡಿಯ ದಿನವೆಲ್ಲ ನನ್ನ ಕಿವಿಯಲ್ಲಿ ಸುಳಿದು ಸುಳಿದು ಹೋಗುತ್ತಿದ್ದಿತು."

"ವಿರೂಪಾಕ್ಷರಾಯನ ವಿಷಯದಲ್ಲಿ ನಿಮ್ಮಲ್ಲಿ ದ್ವೇಷವು ಹೆಚ್ಚಾಗು ವಂತೆ, ಆಗಾಗ ನಾನು ಆಡಿದ ಮರ್ಮದ ಮಾತು; ನಿಮ್ಮಿಂದ ಪ್ರತಿಜ್ಞಾ-ಪೂರ್ತಿಯಾಗಬೇಕೆಂಬ ಹಂಬಲದಿಂದ, ಹಗಲೆಲ್ಲ ಹೀಗಳೆದು ನುಡಿಯು ತ್ತಿದ್ದ ಕೊಂಕುಮಾತು; ಪ್ರತಿಜ್ಞೆಯು ಪೂರ್ತಿಗೊಂಡಮೇಲೆ, ನಾವು ಇಬ್ಬರೂ ಹೇಗೆ ಹೇಗೆ ಜೊತೆಗೊಂಡು ಇರಬೇಕೆಂಬುದರ ಬಗೆಗೆ ಆಡಿದ ಕನಸಿನ ರಾಜ್ಯದ ಹುಸಿಮಾತು; ಒಂದುವೇಳೆ ದೊರೆತನವು ಸಿಕ್ಕುದಾದರೆ ನಾವಿಬ್ಬರೂ ಜೊತೆಗೂಡಿ, ವಿಜಯಯಾತ್ರೆಗೆ ಹೊರಟು, ವೈದಿಕರಲ್ಲದವ ರನ್ನು ಹಣ್ಣುಮಾಡಿ ಮಣ್ಣುಮುಕ್ಕಿಸಿಬಿಡಬೇಕೆಂದು ಹವಣಿಸಿ, ಆಡಿಕೊಂ ಡಿದ್ದ ಹುರುಪಿನ ಮಾತು – ಎಲ್ಲವೂ ನನ್ನ ನೆನಪಿನ ಬಯಲಲ್ಲಿ ಬಂದು ಮೊಳಗಿ ಮೊಳಗಿ ಹೋದುವು. ಆಗಿನಿಂದಲೂ ನಿಮ್ಮನ್ನು ಕಾಣಬೇಕೆಂಬ ತವಕ ನನ್ನಲ್ಲಿ ಹೆಚ್ಚುತ್ತಿದೆ."

"ಅಂದೊಂದು ದಿನ ಬೆಳಗಿನಲ್ಲಿ ನಾನು ಕರೆಯಿಸಿದ್ದಾಗಲೆ ಬಂದ-ವರು – ಕಮಲಾಂಬಿಕೆಯ ಮಾತು ಬಂದೊಡನೆಯೆ – ಹಾಗೆಯೆ ಹೊರಟು ಬಿಟ್ಟಿರಿ. ಅಂದು ಮೊದಲಾಗಿ ಇಂದಿನವರೆಗೆ ನಿಮ್ಮ ಮುಖವನ್ನು ಕಂಡು-

ದೆಂದರೆ ಮೊನ್ನೆಯ ಸಿಂಹಾಸನಾರೋಹಣದ ಸಮಯದಲ್ಲಿಯೆ! ನೀವು ಆದಿನ ಓಲಗದಲ್ಲಿ ತೋರಿಸಿದ್ದ ಚಲಗಾರಿಕೆಯು ಆದಿನ ನನ್ನ ಮನಸ್ಸಿನಲ್ಲಿ ಅಷ್ಟೊಂದು ಪ್ರವೇಶಿಸಲಿಲ್ಲವಾದರೂ, ನಿನ್ನೆಯ ನಿಮ್ಮ ನೆನಪುಗಳು ಆ ದಿನದ ಚಲಗಾರಿಕೆಯ ಮೇಲೆಯೂ ಚೆಲುವಾದ ಬೆಳಕನ್ನು ಕೆಡಹಿ, ನನ್ನ ಕಣ್ಣಿಗೆ ಅವನ್ನು ತೋರಿಸಿದುವು. ದಯೆಯಿಟ್ಟು ಒಂದೆ ಒಂದು ಸಲವಾದರೂ ಬಂದು ಹೋಗಬೇಕೆಂದು ನನ್ನ ಆಶೆ.

ರತ್ನಾಂಬಿಕೆ"

ಓಲೆಯನ್ನು ಓದಿಮುಗಿಸಿದನನೇ ಧ್ಯಾನಸ್ಥನಾಗಿ ಕುಳಿತ ಪೆದ್ದರಾಯನ ಮನಸ್ಸು, ತಾನು – ರತ್ನಾಂಬಿಕೆ ಜೊತೆಗೂಡಿ ಆಡಿದ್ದ ಕೆಳೆಯಾಟಗಳ ನೆನಹಿನ ಬೆನ್ನುಹತ್ತಿ ಹೊರಟಿತು. ರತ್ನಾಂಬಿಕೆಯು ಜ್ಞಾಪಕಕ್ಕೆ ತಂದುಕೊಟ್ಟಿದ್ದ ಎಲ್ಲ ಸನ್ನಿವೇಶಗಳೂ ಆತನ ಅಂತರಂಗದ ಕಣ್ಣುಗಳೆದುರು ಒಂದೊಂದಾಗಿ ಬಂದುಹೋದುವು. ಕೊನೆಗೆ, ತಾನು ಕಡೆಯ ಸಲ ರತ್ನಾಂಬಿಕೆಯ ಮನೆಗೆ ಹೋದಾಗ ನಡೆದ ದೃಶ್ಯವು ಮೂಡಿ ನಿಂತಿತು. ರತ್ನಾಂಬಿಕೆಯ ಚೆಲುವನ್ನು ಕಂಡಾಗ ಅಂದು ತಾನು ಹೇಳಿದ 'ರತ್ನಾ! ನೀನು ಹೆಣ್ಣು ಕೂಡ ಇದ್ದೀಯೆ ಎಂಬುದನ್ನು, ಈವೊತ್ತು ನೋಡುತ್ತಿದ್ದೇನೆ ನೋಡು!' ಎಂಬ ಮಾತು ಪೆದ್ದರಾಯನಿಗೆ ಜ್ಞಾಪಕವಾಯಿತು. ಅದೇ ದಿವಸ ತಾನು ಆಕೆಯ ಕೊರಳಿಗೆ ಮುತ್ತಿನ ಕಂಠಿಯನ್ನು ಹಾಕಿದ್ದ ಸಂದರ್ಭವೂ ಮುಂದೆಬಂದು ನಿಂತಿತು. ಇದನ್ನೆಲ್ಲ ನೋಡಿದ ರಾಯನ ಹೃದಯವು ಹೀಗೆ ಮಾತನಾಡಲು ತೊಡಗಿತು.

"ನಾನು ಹುಚ್ಚನೇ ಸರಿ! ಸಂಗೀತವೊಂದನ್ನು ಬಿಟ್ಟರೆ ಕಮಲಾಂಬಿಕೆಯ ಬೇರೆ ಯಾವ ಗುಣಗಳ ಪರಿಚಯವು ನನಗಿದೆ? ಆದರೂ ನಾನು ಆಕೆಗಾಗಿ ಹಂಬಲಿಸುತ್ತ, ರತ್ನಾಂಬಿಕೆಯ ಹಲವು ಒಳ್ಳೆಯ ಗುಣಗಳನ್ನು ಕಾಲಕೆಳಕ್ಕೆ ಹಾಕಿಬಿಟ್ಟಿದ್ದೇನಲ್ಲಾ! ಕಮಲಾಂಬಿಕೆಯು ರತ್ನಾಂಬಿಕೆಗಿಂತ ಚೆಲುವೆಯಾಗಿರಬಹುದು! ಆದರೆ ಆ ಚೆಲುವು ಒಂದರಲ್ಲಿಯೇ ರತ್ನಾಂಬಿಕೆಯ ಧೈರ್ಯ-ಸ್ಥೈರ್ಯಗಳನ್ನು ಹುದುಗಿಸಿ ಬಿಟ್ಟಿದ್ದೇನಲ್ಲಾ! ಕಮಲಾಂಬಿಕೆಯು ತನ್ನ ಚೆಲುವಿನಿಂದ, ನನ್ನ ಅಂತಃಪುರದ ಕಳೆಯನ್ನು ಮಾತ್ರ ಬೆಳೆಯಿಸಬಹುದು! ರತ್ನಾಂಬಿಕೆಯು ರಾಜಕಾರ್ಯದಲ್ಲಿ ಸಹಕಾರಿಯಾಗಿ, ನನ್ನ ಸಮ್ರಾಟನ ಪದವಿಗೇ ಒಂದು ಬಗೆಯ ಬೆಳಕನ್ನು ನೀಡಬಲ್ಲಳು;

ಸಿಂಹದ ಜೊತೆಗಾತಿಯಾಗಲಿಕ್ಕೆ ಸಿಂಹಿಣಿಯೇ ತಕ್ಕವಳಲ್ಲವೇ ..! ಸರಿ! ನಾನು ಈ ದಿನವೇ ರತ್ನಾಂಬಿಕೆಯ ಕಡೆಗೆ ಹೋಗಿ ಬರಬೇಕು....''

ಈ ಬಗೆಯ ನಿರ್ಣಯದ ಕೊನೆಯೊಡನೆಯೆ – ಆ ಓಲೆಯನ್ನು ಇನ್ನೊಂದು ಬಾರಿ ಓದಬೇಕೆಂದು–ಅದನ್ನು ಕಣ್ಣೆದುರು ಹಿಡಿದುಕೊಂಡಿದ್ದ. ಅಷ್ಟರಲ್ಲಿಯೆ ಈಶ್ವರನಾಯಕನು ಒಳಕ್ಕೆ ಬಂದು, ಸಂಪ್ರದಾಯದಂತೆ ನಮಸ್ಕಾರವನ್ನು ಮಾಡಿದನು. ದೊರೆಯು – ಬಂದಿದ್ದ ಆತನನ್ನು ಉಚಿತ-ವಾದ ಆಸನದಲ್ಲಿ ಕುಳ್ಳಿರಿಸಿ – ಕೇಳಿದನು.

'' ಮತ್ತೇನು ವರ್ತಮಾನ ಈಶ್ವರನಾಯಕರೇ ! ''

'' ರಾಜಶೇಖರನ ಕಡೆಯಿಂದ ಮೊನ್ನೆಯಿಂದಲೂ – ಸಾಮ್ರಾಜ್ಯದ ಬೇರೆ ಬೇರೆ ಮಾಂಡಲಿಕರುಗಳ ಕಡೆಗೆ – ಏನೇನೋ ಓಲೆಗಳು ಹೋಗಲು ತೊಡಗಿವೆಯಂತೆ ! ಅದರ ಶೋಧಕ್ಕಾಗಿ, ಅಲ್ಲಲ್ಲಿ ಬೇಹಿನವನ್ನು ಇರಿಸಿ ಆಗಿದೆ. ನಿಜವಾದ ಸಂಗತಿಯೇನೆಂಬುದು ಇನ್ನೂ ಗೊತ್ತಾಗಿಲ್ಲ ! ''

'' ಇದರಲ್ಲಿ ಹೆಚ್ಚಿನ ಊಹೆಯ ಆವಶ್ಯಕತೆಯಾದರೂ ಏನಿದೆ? ಎಲ್ಲವೂ ಅಂಗೈಯೊಳಗಿನ ನೆಲ್ಲಿಯಂತೆ ನಿಚ್ಚಳವಾಗಿಯೇ ಇದೆ. ಸಾಮ್ರಾಜ್ಯದ ಅನೇಕ ಜನರಲ್ಲಿ, ರಾಜಶೇಖರ - ನರಸಿಂಹನಾಯಕರ ವಿಷಯದಲ್ಲಿ ಅಂಧ-ವಿಶ್ವಾಸವಿದೆ; ಅದರ ಉಪಯೋಗವನ್ನು ಈಗ ಮಾಡಿಕೊಳ್ಳಬೇಕೆಂದಿದ್ದಾರೆ.. ಇಷ್ಟೇ ! ''

'' ಯಾವ ರೀತಿಯಿಂದ ಮಾಡಿಕೊಳ್ಳಬಹುದು ಉಪಯೋಗ ? ''

'' ತಮಗೆ ಆಗಿದ್ದ ಅಪಮಾನವನ್ನು ಉಪ್ಪುಕಾರ ಹಚ್ಚಿ ಬರೆದು, ಜನರ ಮನಸ್ಸನ್ನು ನಿಮ್ಮ ವಿಚಾರದಲ್ಲಿ ಕೆರಳಿಸಿ, ತಮ್ಮ ಕಾರ್ಯಸಾಧನೆ ಮಾಡಿಕೊಳ್ಳಬೇಕೆಂದು ಇದ್ದಾರೆ..ಆ ಜನ ! ''

ದೊರೆಯು ವಿಚಾರಮುದ್ರೆಯಿಂದ ನಸುವೇಳೆ ಕುಳಿತಿದ್ದು, ಬಳಿಕ ಒಮ್ಮೆಲೆ ಕೇಳಿದನು.

'' ತಾವು ಸಮ್ರಾಟರಾಗಬೇಕೆಂಬ ಆಶೆಯು ಅಣ್ಣಾಜಿಯವರಿಗೆ ಉಂಟಾಗಿದೆಯೆಂದು, ನಿಮಗೆ ಖಂಡಿತವಾಗಿಯೂ ಎನಿಸುತ್ತಿದೆಯೋ ನಾಯಕರೇ ? ''

'' ಎಂತಹ ಸರಳ ಹೃದಯವು ತಮ್ಮದು ದೊರೆಗಳೇ ! ಆ ಆಶೆ ಬರೀ

ಉಂಟಾಗಿದೆ ಇಷ್ಟೇ ಅಲ್ಲ ; ಬಳೆದು ಭೂತವಾಗಿ ನಿಂತಿದೆ. ನಾರಾಯಣ-ಪಂಡಿತರು ಇಲ್ಲವೇ ? ಅವರು ಆ ಭೂತಾಟಿಕೆಗೆ ಬೇರೆ ಬೇರೆ ಮೋಡಿಮಂತ್ರಗಳನ್ನು ಊದುತ್ತಲಿದ್ದಾರೆ. ಇಷ್ಟರಲ್ಲಿಯೇ ಇಲ್ಲಿ ನಡೆದ ವೃತ್ತಾಂತವನ್ನೆಲ್ಲ ಅವರು ನರಸಿಂಹನಾಯಕರಿಗೆ ಬರೆದು ಕಳುಹಿಸಿದ್ದಾರಂತೆ ! ”

ಕೂಡಲೆ ಗಡುಸಾದ ದನಿಯಲ್ಲಿ ಪೆದ್ದರಾಯನು ಅಪ್ಪಣೆಮಾಡಿದನು.

“ ಈಶ್ವರನಾಯಕರೆ ! ಇಂದಿನಿಂದ ಮೊದಲುಮಾಡಿ ಇನ್ನುಮೇಲೆ, ರಾಜಧಾನಿಯ ಎಲ್ಲ ಕಡೆಯ ಕಾವಲುಗಟ್ಟೆಯವರಿಗೆ ಚೆನ್ನಾಗಿ ಆಜ್ಞೆಮಾಡಿ ಬಿಡಬೇಕು: ‘ ರಾಜಧಾನಿಯ ಹೊರಕ್ಕೆ ಹೋಗುವವರನ್ನೆಲ್ಲ ಸೂಕ್ಷ್ಮ ರೀತಿಯಿಂದ ಶೋಧಿಸುತ್ತಿರಬೇಕು . . . ಎಂದು.”

“ ಹೊರಕ್ಕೆ ಹೋಗುವವರನ್ನಷ್ಟೆ ಏಕೆ ? ಒಳಕ್ಕೆ ಬರುವವರನ್ನೂ ಶೋಧಿಸುತ್ತಿರುವಂತೆ ಕಟ್ಟಪ್ಪಣೆ ಬರೆದು ಕಳುಹಿಸುತ್ತೇನೆ. ಇನ್ನೊಂದು ವಿಷಯ ! ರಾಜಧಾನಿಯಲ್ಲಿದ್ದ ಮುಹಮ್ಮದೀಯರೇನಾದರೂ ಅವರ ಕಡೆಗೆ ಫಿತೂರಾಗಿ ಬಿಡಬಹುದೇನೋ. . ಎಂದು ಬಲವಾದ ಸಂದೇಹ ನನಗೆ ! ಅದಕ್ಕಾಗಿ ಏನುಮಾಡಬಹುದು ಉಪಾಯವನ್ನ ?”

ಕೂಡಲೆ ಪೆದ್ದರಾಯನು ಅಧಿಕಾರವಾಣಿಯಲ್ಲಿ ಹೇಳಿದನು.

“ ಇನ್ನೇನು ಮಾಡುವುದು ? ಕನ್ನಡಿಗರ ರಾಜಧಾನಿಯಲ್ಲಿ ಮುಹ-ಮ್ಮದೀಯರು ಇರಬೇಕಾದ ಕೆಲಸವಾದರೂ ಏನು ? ಬಹು ದಿವಸಗಳಿಂ-ದಲೂ ನನ್ನ ಮನಸ್ಸಿನೊಳಗೆ ಮಿಡಿಯುತ್ತಿದ್ದ ವಿಚಾರವನ್ನು, ಆಚರಣೆಯಲ್ಲಿ ತರುವುದಕ್ಕೆ ಇದೇ ಒಂದು ನೆಪವಾದಂತೆ ಆಯಿತು. ಸರಿ ! ನೀವು ಹೀಗೊಂದು ರಾಜಾಜ್ಞೆ ಹೊರಡಿಸಿ ಬಿಡಿ ! ‘ ಇನ್ನೊಂದು ವಾರದೊಳಗಾಗಿ, ರಾಜಧಾನಿಯಲ್ಲಿದ್ದ ಎಲ್ಲ ಮುಹಮ್ಮದೀಯರೂ ಪಟ್ಟಣವನ್ನು ಬಿಟ್ಟು ಬೇರೆ ಕಡೆಗೆ ಹೊರಟು ಹೋಗಬೇಕು ! ಯಾರಾದರೂ ಈ ಅಪ್ಪಣೆಯನ್ನು ತಪ್ಪಿ ನಡೆದರೆ, ಅವರ ಆಸ್ತಿ-ವೃತ್ತಿಗಳನ್ನೆಲ್ಲ ಅರಮನೆಯ ಭಾಂಡಾರಕ್ಕೆ ಸೇರಿಸಿ ಕೊಂಡು, ರಾಜದೂತರ ಮುಖಾಂತರವಾಗಿ ಅವರನ್ನು ಗಡಿದಾಟಿಸಿ ಬಿಡಲಾಗುವುದು . . . . , ಎಂದು. ನಾಳೆಯ ದಿನವೆ ಹೊರಟು ಬಿಡಲಿ. . ಈ ರಾಜಾಜ್ಞೆ ! ”

ಈಶ್ವರನಾಯಕನು ಅತೃಪ್ತಭಾವದಿಂದಲೇ ಹೇಳಿದನು .

" ರಾಜಧಾನಿಯಲ್ಲಿದ್ದ ಏಕ್ಕ ಮಹಮ್ಮದೀಯರಿಗೆಲ್ಲ ಈ ರಾಜಾಜ್ಞೆ ಸರಿಯಾಯಿತು ! ಸೈನ್ಯದಲ್ಲಿ ಬಹುಜನ ಮಹಮ್ಮದೀಯರು ಸೈನಿಕರಾಗಿ ದ್ದಾರಲ್ಲ ! ಅವರನ್ನೇನು ಮಾಡಬೇಕು ? "

" ಅದನ್ನೇನು ಕೇಳಬೇಕು ನಾಯಕರೇ ! ಸೈನ್ಯದಲ್ಲಿದ್ದ ಮಹಮ್ಮದೀಯ ರನ್ನೆಲ್ಲ ಅವರವರ ಕೆಲಸಗಳಿಂದ ತೆಗೆದುಹಾಕಿ ಬಿಡಬೇಕೆಂದು – ಇಂದಿನ ಸಂಜೆಯೊಳಗಾಗಿಯೆ – ನೀವು ದೇವಣ್ಣನಾಯಕರ ಕಡೆಗೆ, ನಮ್ಮ ಅಪ್ಪಣೆ ಯೋಲೆಯೊಂದನ್ನು ಬರೆದು ಕಳುಹಿಸಬೇಕು ! "

" ಒಳ್ಳೆಯ ವಿಚಾರವಿದು, ಹಾಗೆಯೇ ಆಗಲಿ ! "

" ಈನ್ನೊಂದು ವಿಷಯ; ಚಂದ್ರಗಿರಿಯ ಕಡೆಗೆ ಕೆಲವು ಜನ ಜಾಣ-ರಾದ ಬೇಹುಗಾರರನ್ನು ಕಳುಹಿಸಿಕೊಡಿ ! ನರಸಿಂಹ ನಾಯಕರ ದೂ ಸುಮ್ಮಗೆ ಕುಳಿತುಕೊಳ್ಳುವ ಜೀವವಲ್ಲ ! ಚಂದ್ರಗಿರಿಯ ಪ್ರತಿಯೊಂದು ವರ್ತಮಾನವೂ ನಮಗೆ ಕಾಲಕಾಲಕ್ಕೆ ತಿಳಿಯುವಂತೆ ಏರ್ಪಾಡನ್ನು ಇಟ್ಟಿರ ಬೇಕು ! "

" ಈಗ . . ಎಲ್ಲಮಾಂಡಲಿಕರ ಕಡೆಗೆ . . ನಾವೂ ಓಲೆಬರೆದು ಕಳುಹಿಸ ಬೇಕೇನು ? "

" ಏನೆಂದು ಬರೆಯಬೇಕೆನ್ನುತ್ತೀರಿ ? "

" ರಾಜಶೇಖರನೂ ನರಸಿಂಹನಾಯಕನೂ ರಾಜದ್ರೋಹಿಗಳಾದುದ ರಿಂದ, ಅವರ ಮಾತುಗಳಿಗಾಗಲಿ, ಅವರ ಪಕ್ಷದವರ ಮಾತುಗಳಿಗಾಗಲಿ, ಯಾರೂ ಮಹತ್ತ್ವವನ್ನು ಕೊಡದೆ, ಸಾಮ್ರಾಜ್ಯದ ವಿಷಯದಲ್ಲಿ ಎಂದಿ ನಂತೆಯೆ ಅಭಿಮಾನವನ್ನು ಇಟ್ಟುಕೊಂಡಿರಬೇಕು ! . . . . ಎಂದು "

" ಹಾಗೆ ಮಾಡಬೇಕಾಗಿಯೂ ಬರಬಹುದೇನೋ ! ಯೋಚನೆ ಮಾಡಿ ನಾಳೆಯ ದಿನ ನಿರ್ಣಯಿಸೋಣವಂತೆ ಅದನ್ನು ! "

ದೊರೆಯನ್ನು ಬೀಳ್ಕೊಂಡು ಈಶ್ವರನಾಯಕನು ಹೊರಟು ಹೋದನು. ಅವನು ಇಲ್ಲದಂತಾದೊಡನೆಯೆ, ರಾಜಶೇಖರನು ವಿದ್ರೋಹಿಯ ವೇಷದೊಂದಿಗೆ ಬಂದು, ಪೆದ್ದರಾಯನ ಮನದ ಮನೆಯನ್ನು ಹೊಕ್ಕು, ಕರುಳುಗಳ ಮೇಲೆ ಕುಣಿದಾಡಲು ತೊಡಗಿದನು.

---

## ೨೧ನೆಯ ಪರಿಚ್ಛೇದ

ಅಂತಃಪುರದಲ್ಲಿ – ಮೆಲುವಾಸೊಂದರಲ್ಲಿ ಬಿದ್ದುಕೊಂಡು, ರತ್ನಾಂಬಿಕೆಯು ಯೋಚಿಸುತ್ತಲಿದ್ದಾಳೆ. " ಇನ್ನು ರಾಜಶೇಖರನ ದಾರಿಯೇನಿದೆ ನನಗೆ? ಅವನು ಎಲ್ಲಿ ಇದ್ದರೆ ಏನು? ಏನು ಮಾಡಿದರೆ ಏನು? ಇಷ್ಟೊಂದು ಮಾತ್ರ ನನಗೆ ಎನಿಸುತ್ತಲಿದೆ: 'ಆತನ ವಿಷಯಕವಾದ ಯಾವ ಒಳ್ಳೆಯ ಮಾತುಗಳೂ ನನ್ನ ಕಿವಿಯ ವರೆಗೆ ಬರಬಾರದು' ಎಂದು. ಅವುಗಳನ್ನು ನಾನು ಆಗಾಗ ಕೇಳುತ್ತಿದ್ದರೆ.. ನನ್ನ ಹೃದಯವು ಅಸ್ಥಿರಗೊಂಡು, ನನಗೆ ಸಂತಾಪವನ್ನುಂಟುಮಾಡದೆ ಹೋಗದು! ಎಂತಲೇ ರಾಜಶೇಖರನು ರಾಜಧಾನಿಯಲ್ಲಿಯೇ ಇರಬಾರದೆಂದು ಎನಿಸುತ್ತದೆ ನನಗೆ! ಆತನು ಇಲ್ಲಿಯೆ ಇದ್ದರೆ.. ಯಾವಾಗಲಾದರೂ ಅವನನ್ನು ಕಾಣುವಂತಹ ಸಂದರ್ಭಗಳು ಒದಗಬಹುದು; ಆತನ ಕೀರ್ತಿಯ ಜನವಾರ್ತೆಯನ್ನಾದರೂ ಆಗಾಗ ಕೇಳಬೇಕಾಗಿ ಬರಬಹುದು; ನಾನು ಆತನ ಕಣ್ಣಿಗೆ ಬೀಳಲಾಗದೆಂದು ರಾಜಶೇಖರನಿಗೆ ಎನಿಸುತ್ತಿರಬಹುದಷ್ಟೇ! ಆದರೆ..ಆತನ ಸಂಬಂಧದ ಮಾತುಗಳು ಕೂಡ ನನ್ನ ಕಿವಿಗೆ ಬೀಳಬಾರದೆಂದು ನನಗೆ ಎನಿಸುತ್ತಿದೆ. ಆತನು ಈ ಪಟ್ಟಣವನ್ನು ಬಿಟ್ಟು, ಇನ್ನೆಲ್ಲಿಗಾದರೂ ಹೊರಟುಹೋದರೆ ಚೆನ್ನಾಗುವುದು. ಆದರೆ ಸಾಮ್ರಾಜ್ಯಪ್ರೇಮವು ಅವನನ್ನು ಹೊರಕ್ಕೆ ಕಾಲಿಕ್ಕಲಿಕ್ಕೆ ಬಿಡುವುದೇ? ಹಾಗಾದರೆ ನಾನು ಮಾಡಬೇಕೇನೀಗ..! ಹಂ, ಅಹುದು! ರಾಜಶೇಖರನು ಏನಾದರೂ ಆಗಿ ಸತ್ತುಹೋಗಿಬಿಟ್ಟರೆ ನಾನು ಸಮಾಧಾನದಿಂದ ಇರಬಹುದು....! "

ರತ್ನಾಂಬಿಕೆಯ ಯೋಚನೆಯ ಹೊನಲು ಇಲ್ಲಿಗೆ ಬಂದು ತಡೆದು ನಿಂತಿತು. ಇನ್ನಾವುಪಾದರೂ ಅಂತರ್ಯದ ಭಾವಬಂಧನವು ಅದನ್ನು ಅಲ್ಲಿಯೆ ತಡೆದು ಹಿಡಿಯಿತೇನೋ! ತಟ್ಟನೆ ಆ ಪ್ರವಾಹವು ಇನ್ನೊಂದು ದಾರಿಯನ್ನು ಹಿಡಿದು ಹೊರಟಿತು.

" ರಾಜಶೇಖರನು ಸಾಯಬೇಕೇ..? ಅದೇತಕ್ಕಾಗಿ ಸಾಯಬೇಕು..? ನಾನು ಸಮಾಧಾನದಿಂದ ಬದುಕಿರುವುದಕ್ಕಾಗಿ ಆತನ ಸಾವನ್ನು ಬಯಸುತ್ತಿದ್ದೇನಲ್ಲವೇ ನಾನು..! ಹಾಗಾದರೆ ನಾನೆ ಏತಕ್ಕೆ ಸತ್ತುಹೋಗಬಾರದು! ಅಹುದು..! ನಾನೆ ಸತ್ತುಬಿಟ್ಟರೆ..! ಬೇಡ; ಈ ವಿಚಾರವೇ

ಬೇಡ! ನಾನು ಸತ್ತುಹೋದರೆ ರಾಜಶೇಖರನು ಸಮಾಧಾನದಿಂದ ಬದುಕಿ-ಕೊಂಡಿರಬಹುದಲ್ಲ! ಆತನಿಗೆ ಸಮಾಧಾನವುಂಟಾಗುವಂತೆ ಮಾಡಬೇಕೇ ನಾನು! ಅಸಮಾಧಾನ – ಅಶಾಂತಿಗಳ ಕಿಚ್ಚಿನಲ್ಲಿ, ರಾಜಶೇಖರನು ಬೇಯುತ್ತ ಬಿದ್ದುದನ್ನು ನಾನು ಕಣ್ಣಾರೆ ನೋಡಬೇಕಾಗಿದೆ! ಅದಕ್ಕಾಗಿಯೆ ಇಬ್ಬರೂ ಸಾಯಬಾರದು; ಬದುಕಿಕೊಂಡೇ ಇರಬೇಕು. ನಾನು ಬದುಕಿ-ಕೊಂಡು ಇರಬೇಕಾದರೆ, ಮಹಾರಾಣಿಯಾಗಬೇಕು! ಎಂದರೆ ರಾಜಶೇಖರ ನನ್ನು ಚೆನ್ನಾಗಿ ನೋಡಿಕೊಳ್ಳಲಿಕ್ಕೆ ಆಗುವುದು! ಅಹುದು! ನಾನು ಮಹಾರಾಣಿಯಾಗಲೇ ಬೇಕು!''

ಮತ್ತೆ ಆಕೆಯ ಆಲೋಚನಾತರಂಗಿಣಿಯು ಬೇರೆಯೊಂದು ನಿಟ್ಟನ್ನು ಹಿಡಿಯಿತು.

"ಹೋಗಲಿ! ಈ ಮುಯ್ಯಿಗೆ ಮುಯ್ಯನ್ನು ತೀರಿಸುವ ಹಂಬಲು ನನಗೆ ಏತಕ್ಕಾಗಿ ಬೇಕು..? ರಾಯಾಜಿಗೆ ಬರುವಂತೆ ಹೇಳಿ ಕಳುಹಿಸಿದ್ದೇನೆ. ಮೊದಲಿನಿಂದಲೂ ನನ್ನಲ್ಲಿ ವಾಸಿಸುತ್ತಿದ್ದ ರಾಯಾಜಿಯ ವಿಷಯಕವಾದ ಪ್ರೀತಿ-ವಿಶ್ವಾಸಗಳನ್ನು, ರಾಜಶೇಖರನ ಬಗೆಗಿರುವ ನನ್ನ ಕುರುಡು-ಆಶೆಯು ಮೂಲೆಗೆ ಕುಳ್ಳಿರಿಸಿಬಿಟ್ಟಿದ್ದಿತು. ಈಗ ಆ ಆಶೆಯು ನಿರಾಶೆಯಾಗಲು, ರಾಯಾಜಿಯಲ್ಲಿಯ ಮೊದಲಿನ ಪ್ರೀತಿ-ವಿಶ್ವಾಸಗಳು ಮತ್ತೆ ಮತ್ತೆ ಮುಖ ತೋರಿಸುವುದಕ್ಕೆ ತೊಡಗಿವೆ. ನಿನ್ನೆಯ ದಿನದ ನನ್ನ ನೆನಪುಗಳೆಲ್ಲವೂ ಬರಿಯೆ ರಾಯಾಜಿಯನ್ನೇ ಎತ್ತಿಕೊಂಡು ಬರುತ್ತಿದ್ದುವು. ಆತ ನನ್ನ ಮಾತನ್ನು ಒಪ್ಪಿಬಿಟ್ಟರೆ, ಎಲ್ಲವನ್ನೂ ಮರೆತು – ಇದ್ದುದರಲ್ಲಿಯೆ – ಅವನ ಜೊತೆಗೆ ಸಮಾಧಾನದಿಂದ ಬದುಕನ್ನು ಕಳೆಯಬಹುದು! ಸಾಹಸಜೀವನ ದಲ್ಲಿ ನನಗೂ ಆಶೆ; ರಾಯಾಜಿಗೂ ಆಶೆ. ಬರುಬರುತ್ತ ನಮ್ಮಿಬ್ಬರಲ್ಲಿಯೂ ತುಂಬುಹೊಂದಿಕೆಯಾಗದೆ ಹೋಗಲಾರದು! ಆದರೆ ಏನು! ಕಮಲಾಂಬಿಕೆ-ಯೊಬ್ಬಳು ಆತನ ಮನಸ್ಸಿನ ತುಂಬ ಕುಳಿತು, ಅವನ ಬುದ್ಧಿಯನ್ನೇ ಕುರುಡು-ಗೊಳಿಸಿ ಬಿಟ್ಟಿದ್ದಾಳೆ. ಇಂದು ನಾನು ಕಳುಹಿಸಿದ್ದ ಓಲೆಯನ್ನು ನೋಡಿ-ಯಾದರೂ ರಾಯಾಜಿ ಬರುತ್ತಾನೋ ಇಲ್ಲವೋ .. ಯಾರು ಬಲ್ಲರು ....?''

ರಾತ್ರಿಯ ಆರು ಗಳಿಗೆಗಳು ಕಳೆದು ಹೋಗಿರಬಹುದಾಗ; ಒಮ್ಮೆಲೆ ಪೆದ್ದರಾಯನು ರತ್ನಾಂಬಿಕೆಯು ಕುಳಿತಿದ್ದಲ್ಲಿಗೆ ಬಂದುಬಿಟ್ಟ. ಕೂಡಲೆ

ರತ್ನಾಂಬಿಕೆಯು ಥಟ್ಟನೆ ಎದ್ದು, ಉತ್ಸಾಹದ ಧ್ವನಿಯಲ್ಲಿ ನುಡಿದಳು.

"ರಾಯಾಜೀ! ನಿಮಗೆ ನೂರು ವರ್ಷದ ಆಯುಸ್ಸು!"

"ಅದೇನು?"

"ನಿಮ್ಮ ನೆನಹಿನಲ್ಲಿಯೆ ನಾನು ಕುಳಿತಿದ್ದೆ; ಅಷ್ಟರಲ್ಲಿಯೆ ನೀವೂ ಬಂದಿರಿ!"

"ನಿನ್ನ ಓಲೆಯನ್ನು ಓದಿದೊಡನೆಯೆ ಹೊರಟು ಬರಬೇಕೆಂದೆ; ಆದರೆ ರಾಜಕಾರ್ಯದ ತೊಡಕು, ವ್ಯರ್ಥವಾಗಿ ನನ್ನ ಕಾಲವನ್ನು ತಿನ್ನುತ್ತಲಿದೆ. ಅದಕ್ಕಾಗಿಯೆ ತಡೆದು ಬರಬೇಕಾಯಿತು ಸ್ವಲ್ಪ!"

"ಬರಬೇಕೆಂಬ ಮನಸ್ಸಿನಿಂದ ನೀವು ಇನ್ನಿಷ್ಟು ತಡೆಮಾಡಿದರೂ ನಾನು ಸಹಿಸಿಕೊಂಡಿರಬಲ್ಲೆ. ಮತ್ತೇನು ಈಗ.. ರಾಜಕಾರ್ಯದ ಅಂತಹ ತೊಡಕುಗಳು?"

"ನೋಡು ರತ್ನಾ! ಒಂದೆ ಹೊಟ್ಟೆಯಿಂದ ಹುಟ್ಟಿದವರಾದರೂ, ಅಣ್ಣತಮ್ಮಂದಿರಿಗೆ ಪರಸ್ಪರರ ಉತ್ಕರ್ಷದ ಸಹನೆಯಾಗುತ್ತಿರುವುದಿಲ್ಲ. ಅಣ್ಣತಮ್ಮಂದಿರು ಒಬ್ಬರ ದುಃಖಕ್ಕಾಗಿ ಇನ್ನೊಬ್ಬರು ಕೊರಗಿ ಮರುಗ-ಬಹುದಾದರೂ, ಒಬ್ಬರ ಉತ್‌ಕರ್ಷವನ್ನು ನೋಡುತ್ತ ಇನ್ನೊಬ್ಬರು ಸುಮ್ಮಗೆ ಕುಳಿತಿರುವುದಕ್ಕೆ ಮಾತ್ರ ಎಂತೆಂತಹರಿಗೂ ಆಗುವುದಿಲ್ಲ."

"ಹಾಗೆ ಏನಾದರೂ ಆಗಿದೆಯೇ ಈಗ?"

"ಮೊದಲು ಬೇಡವೆಂದಿದ್ದ ಅಣ್ಣಾಜಿಯವರಿಗೆ, ಈಗ ಸಿಂಹಾಸನದ ಅಧಿಕಾರ ಬೇಕೆನಿಸಲು ತೊಡಗಿದೆ."

ರತ್ನಾಂಬಿಕೆಗೆ ಇದನ್ನು ಕೇಳಿ ಜುಗುಪ್ಸೆಯೆನಿಸಿತು. 'ಇದು ತೀರ ಅಸತ್ಯವಾದ ಅಪವಾದ' ಎಂದು ಹೇಳಿಬಿಡಬೇಕೆಂದು ಮನಸ್ಸಾಯಿತು. ಹೀಗಾದುದು ಒಂದೆ ಒಂದು ನಿಮಿಷವೆ ಮಾತ್ರ. ಕೂಡಲೆ, ಇದರಲ್ಲಿ ತಾನು ಏನನೂ ಮಾತನಾಡಬಾರದೆಂಬ ಯೋಚನೆಯು ಹೊಳೆಯಿತು. ಈ ಎನಿಸಿಕೆ–ಯೋಚನೆಗಳ ಎಳೆದಾಟದಲ್ಲಿಯೆ ಆಕೆ ಮೆಲ್ಲಗೆ ಕೇಳಿದಳು.

"ಏನು....? ಹೀಗೆಯೇ....?"

"ಇಷ್ಟೇ ಅಲ್ಲ ರತ್ನಾ! ಈಗಾಗಲೆ ಅವರು ಸಾಮ್ರಾಜ್ಯದಲ್ಲಿಯ ಬೇರೆ ಬೇರೆ ಮಾಂಡಲಿಕರಿಗೆ–ನನ್ನ ವಿಷಯದಲ್ಲಿ ವಿಪರೀತವಾದ ಅಭಿಪ್ರಾಯ-

ಗಳುಂಟಾಗುವಂತೆ– ಓಲೆಗಳನ್ನು ಬರೆದು ಬರೆದು ಕಳುಹಿಸಿದ್ದಾರಂತೆ!"

ರಾಜಶೇಖರನ ಸ್ವಭಾವವನ್ನು ಅರಿಯದೆ ಆಡುವ ಮಾತಿದೆಂದು ರತ್ನಾಂಬಿಕೆಗೆ ತೋರಿತಾದರೂ, ಆಕೆ ಅದರ ಯಾವ ಸುಳಿವನ್ನೂ ತಿಳಿಯಗೊಡದೆ– ಏನನಾದರೂ ಮಾತನಾಡಬೇಕೆಂದು– ಆಡಿದಳು.

"ಸರಿಯೆ! ಒಳ್ಳೆಯ ಸಾಧುಗಳಲ್ಲವೇ ಅವರು..?"

"ಸಂದರ್ಭವೊದಗದೆ ಸಾಧುತ್ವ–ಅಸಾಧುತ್ವಗಳ ಪರೀಕ್ಷೆಯಾಗದು ರತ್ನಾ! ನನಗೆ ಕೂಡ– ಈಶ್ವರನಾಯಕನು ಹೇಳಿದ– ಇವೆಲ್ಲ ಮಾತುಗಳಲ್ಲಿ ನಂಬುಗೆ ಕೂಡಲಿಲ್ಲ! ಈಗ ಅಣ್ಣಾಜಿಯ ವಿಷಯದಲ್ಲಿ ನಾನು ಹೆದರಿಕೊಂಡಿರಬೇಕಾಗಿದೆ; ಯಾವಾಗಲೂ ಎಚ್ಚರದಿಂದ ನಡೆಯುತ್ತಿರಬೇಕಾಗಿದೆ. ಸಾಮ್ರಾಜ್ಯಾಭಿಮಾನವೆಂದು ಅಂದು ಚಿಕ್ಕಪ್ಪನನ್ನು ಕೈಮುಟ್ಟಿ ಕೊಂದ ವನು, ಈಗ, ಸಿಂಹಾಸನದ ದುರಾಶೆಯಿಂದ ತಲೆತಿರುಗಿದವನಾಗಿ, ನನ್ನ ಕೊಲೆಗೆ ಕೈಮಾಡದೆ ಇರಬಹುದೇ ಆತ!"

ಇವೆಲ್ಲವೂ ವಸ್ತುಸ್ಥಿತಿಯ ತಿಳಿವಳಿಕೆಯಿಲ್ಲದೆ ಆಡುವ ಮಾತುಗಳೆಂದು ತಿಳಿದ ರತ್ನಾಂಬಿಕೆಗೆ, ತಿರಸ್ಕಾರದ ಮೂಲಕ ನಗೆ ಬಂದುಬಿಟ್ಟಿತು. ಪ್ರಯತ್ನ ಪೂರ್ವಕವಾಗಿಯೆ ಅದನ್ನವಳು ತಡೆದು ಹಿಡಿದು ಹೇಳಿದಳು.

"ಸರಿ! ಜಾಗ್ರತೆಯಿಂದ ಇರುವುದು ಯಾವಾಗಲೂ ಒಳ್ಳೆಯದೇ ಅಲ್ಲವೇ?"

"ಎದುರೆದುರಾಗಿ ಬಂದು ನನ್ನನ್ನು ಯಾರು ಏನು ಮಾಡುವಂತೆ ಇದ್ದಾರೆ ರತ್ನಾ! ಮೋಸಗಾರರೊಂದು ಯಾವಾಗಲೂ ಇದ್ದೇ ಇರುತ್ತಾರಲ್ಲ! ಅವರಿಗಾಗಿ ಜಾಗ್ರತೆ ಬೇಕು.. ಇಷ್ಟೇ!"

"ಅದೇನೋ ಸರಿಯೇ! ನಿಮ್ಮನ್ನು ಎದುರಿಸಿ ನಿಂತು ಯುದ್ಧಮಾಡುವಂತಹ ಎದೆಗಾರಿಕೆ ಯಾರಲ್ಲಿದ್ದೀತು?"

'ಎದುರಿಸಿ ನಿಂತು ಯುದ್ಧ' ಎಂದೊಡನೆಯೆ ಪೆದ್ದರಾಯನಿಗೆ ರತ್ನಾಂಬಿಕೆಯು ಬರೆದ ಓಲೆಯು ಸ್ಮರಣೆಯಾಯಿತು. ಕೂಡಲೆ ಮೆಲುನಗೆ ನಗುತ್ತ ಅವನು ಹೇಳಿದ.

"ರತ್ನಾ! ನಿನ್ನ ಓಲೆ..ಅಂದಿನ ನಮ್ಮ ಕತ್ತಿಯ ಹುಸಿಗಾಳೆಗವನ್ನು ನೆನಪು ಮಾಡಿಕೊಟ್ಟು, ಮತ್ತೆ ನನ್ನನ್ನು ಬೆಳಕಿನ ರಾಜ್ಯಕ್ಕೆ ಕರೆದುಕೊಂಡು

ಬಂದಿದೆ. ಅಂದು ನಾನು ಹಿಡಿದಿದ್ದ ನಿನ್ನ ಕೈಯನ್ನು, ಕೊನೆಯವರೆಗೆ ನನ್ನ ಕೈಯಲ್ಲಿ ಕೊಡುವುದಕ್ಕೆ ಸಮ್ಮತಿಯಿದೆಯಲ್ಲವೇ ನಿನ್ನದು?"

ರತ್ನಾಂಬಿಕೆ ಒಮ್ಮೆ ನಕ್ಕುಬಿಟ್ಟಳು; ಆ ನಗೆಯಲ್ಲಿ, ಸಮ್ಮತಿಯ ಸೂಚನೆಯು – ಪೆದ್ದರಾಯನಿಗೆ – ಸಿಕ್ಕದೆ ಹೋಗಲಿಲ್ಲ. ರತ್ನಾಂಬಿಕೆಯ ಆಗಿನ ಆ ನಗೆಯಲ್ಲಿ – ನಿರಾಶೆಯ ಕಗ್ಗತ್ತಲೆಯಲ್ಲಿ ಕುಳಿತಿದ್ದವರಿಗೆ, ಆಶೆಯ ಸಣ್ಣ ಕಿರಣದ ಬೆಳಕೊಂದು ಕಂಡಾಗಿನಂತಹ – ಸಮಾಧಾನದ ಆರ್ದ್ರತೆಯೂ ಇದ್ದಿತು. ಆಗ ಪೆದ್ದರಾಯನು ಮಾತನಾಡಿದ.

"ಹೋಗಲಿ ರತ್ನಾ! ಈ ರಾಜಕಾರ್ಯದ ಗೊಂದಲದಿಂದೊಮ್ಮೆ ಪಾರಾಗಿ ಹೊರಕ್ಕೆ ಬೀಳೋಣ! ಆ ಮೇಲೆ ನಾನು-ನೀನು ಕೈಹಿಡಿದು ಕೊಂಡವರು, ಎಂದೆಂದೂ ಅಗಲದೆ ಇರೋಣ!"

"ಈ ಮನಸ್ಸು ಸ್ಥಿರವಾಗಿ ಉಳಿಯುವುದೆಂದು ನಂಬಲೇ ನಾನು?"

"ರತ್ನಾ! ಇಂದಿನ ಈ ನನ್ನ ಮನಃಸ್ಥಿತಿಯನ್ನು ಸ್ಥಿರವಾಗಿ ಇರಿಸಿ ಕೊಳ್ಳುವೆನೆಂದು ಆಣೆಯಿಟ್ಟು ಹೇಳುತ್ತೇನೆ ಬೇಕಿದ್ದರೆ!"

"ಆಣೆ-ಪಾಣೆ ನನಗೊಂದೂ ಬೇಕಿಲ್ಲ; ನಿಮ್ಮ ಮನಸ್ಸನ್ನು ಅಸ್ಥಿರ-ಗೊಳಿಸದಂತೆ ನಾನೇ ಪಂಪಾಪತಿಯನ್ನು ಪ್ರಾರ್ಥಿಸುತ್ತಿರುತ್ತೇನೆ."

ಪೆದ್ದರಾಯನು ಎದ್ದುನಿಂತು ಮಾತನಾಡಿದನು.

"ನಾನಿನ್ನು ಹೊರಡುತ್ತೇನೆ ರತ್ನಾ! ಏನೇನೋ ಕೆಲಸಗಳು ಬಿದ್ದು-ಕೊಂಡಿವೆ. . ಮೈಮೇಲೆ!"

ರತ್ನಾಂಬಿಕೆಯು ಸ್ವಲ್ಪ ಹೊತ್ತು ಮಾತನಾಡದೆ ಕುಳಿತಿದ್ದು, ಬಳಿಕ ಯಾವುದೊ ವಿಚಾರವೊಂದರಿಂದ ಹೊರಬಿದ್ದವಳಾಗಿ ಹೇಳಿದಳು.

"ರಾಯಾಜೀ! ನಿಮ್ಮನ್ನು ಯಾವ ಮೋಸಗಾರರೂ ಏನನೂ ಮಾಡದಿರುವಂತೆ, ನಾನು ನಿಮ್ಮ ನೆರಳಾಗಿ ನೋಡಿಕೊಳ್ಳುತ್ತೇನೆ. ನೀವು ನಿಶ್ಚಿಂತರಾಗಿ ಇರಬಹುದು! ರಾಜಶೇಖರನ ವಿಷಯಕ್ಕೆ ನೀವು ಅಷ್ಟೊಂದು ವಿಪರೀತ. . . ."

ಪೆದ್ದರಾಯನು ಯಾವ ಯೋಚನೆಯಲ್ಲಿದ್ದನೇನೋ! ರತ್ನಾಂಬಿಕೆಯ ಮಾತುಗಳನ್ನು ಪೂರ್ತಿಯಾಗಿ ಕೂಡ ಕೇಳಿಕೊಳ್ಳದೆ ಹೊರಟುಹೋದನು. ರತ್ನಾಂಬಿಕೆಯು ಕೆಲವು ವೇಳೆಯವರೆಗೆ ವಿಚಾರಮೂಢಳಾದವಳಂತೆ

ಕುಳಿತುಕೊಂಡಿದ್ದು, ಕೊನೆಗೆ ನಿಟ್ಟುಸಿರಿನೊಂದಿಗೆ ಉದ್ಗಾರವೊಂದನ್ನು ತೆಗೆದಳು.

" ಲೋಕದ್ದೊಂದು ವಿಚಿತ್ರ ರೀತಿಯೇ! ಹೂವಮಾಲೆಯನ್ನು ಹಾವೆಂದು ತಿಳಿಯುವ ಕಂಗುರುಡರೂ ಇದ್ದಾರಲ್ಲವೇ ಲೋಕದಲ್ಲಿ! "

---

## ೨೨ನೆಯ ಪರಿಚ್ಛೇದ

ನರಸಿಂಹನಾಯಕನು ಚಂದ್ರಗಿರಿಗೆ ಬಂದಮೇಲೆ, ಒಂದೆಬಂದುದಿನದ ವಿಶ್ರಾಂತಿಯನ್ನು ತೆಗೆದುಕೊಂಡ. ಮರುದಿನವೆ ತುಳುವ ನರಸಿಂಹನನ್ನೊಡ-ಗೊಂಡು, ಆವಶ್ಯಕ ಸೇನಾಸಮೂಹದೊಂದಿಗೆ–ದೊಂಬೆಯೆಬ್ಬಿಸಿದ್ದ ತೆಲುಗು ನಾಡಿನ ಪಾಳೆಯಗಾರರನ್ನು ಮಾತನಾಡಿಸಿ ಬರಬೇಕೆಂದು – ಹೊರಟು ನಡೆದ. ದೊಂಬೆಗಾರರಲ್ಲಿ ಮುತ್ತುಪಾಳ್ಯದ ಪಾಳೆಯಗಾರನ ಪುಂಡಾಟವೇ ಹೆಚ್ಚಾಗಿ ಕೇಳಬರುತ್ತಿದ್ದಿತು. ನರಸಿಂಹನಾಯಕ – ತುಳುವ ನರಸಿಂಹರು ಮೊದಲು ಮುತ್ತುಪಾಳ್ಯದ ಕಡೆಗೇ ಹೋಗಬೇಕೆಂದು ನಿರ್ಣಯಿಸಿ ಹೊರ-ಟಿದ್ದರು. ಆದರೆ ಒಂದೊಂದು ಸಲ ವಿಶೇಷಶ್ರಮದ ಕಾರಣವಿಲ್ಲದೆಯೆ ಕಾರ್ಯಾನುಕೂಲಗಳು ಒದಗುವುದುಂಟು. ಮುತ್ತುಪಾಳ್ಯದ ಕಡೆಗೆ ಹೊರಟಿದ್ದವರಿಗೂ ಅಂತಹ ಯೋಗವೊದವಿ ಬಂದಿದ್ದಿತೆನೋ! ಇವರಿಬ್ಬರೂ ಆ ಊರನ್ನು ತಲ್ಪುವುದರಲ್ಲಿಯೆ ಅಲ್ಲಿಯ ಪುಂಡುಪಾಳೆಯಗಾರನು, ಕುದುರೆಯ ಮೇಲಿಂದ ಬಿದ್ದು, ಕೈಕಾಲು ಮುರಿದುಕೊಂಡು, ಹಾಸಿಗೆ ಹಿಡಿದು ಬಿಟ್ಟಿದ್ದ. ಮುಂದಾಳನ್ನೇ ಕಳೆದುಕೊಂಡು ಬಿಟ್ಟ ಆತನ ಅನು ಯಾಯಿ ವರ್ಗವು, ನರಸಿಂಹನಾಯಕನ ಸೈನ್ಯವನ್ನು ಯಾವ ಧೈರ್ಯದಿಂದ ಎದುರಿಸಬೇಕು? ನರಸಿಂಹನಾಯಕನು ಸ್ವತಃ ದಂಡೆತ್ತಿ ಬರುತ್ತಿದ್ದಾ ನೆಂಬುದನ್ನು ಕೇಳಿದಾಗಲೆ, ಅವರ ಅರ್ಧಶಕ್ತಿ ಉಡುಗಿಹೋಗಿದ್ದಿತು. ಅನಿವಾರ್ಯವಾದ ಆಪತ್ತಿನಲ್ಲಿದ್ದ ಪಾಳೆಯಗಾರನು ವಿನೀತನಾಗಿ, ನರಸಿಂಹ ನಾಯಕರಲ್ಲಿ ಕ್ಷಮೆಯನ್ನು ಯಾಚಿಸಿ, ಮೊದಲಿನಂತೆಯೆ ಚಂದ್ರಗಿರಿಯ ಆಧೀನತೆಯನ್ನು ಒಪ್ಪಿ ಬರೆದುಕೊಟ್ಟನು. ತನ್ನ ಕಡೆಗೆ ನಿಂತುಹೋಗಿದ್ದ ಕಷ್ಟವನ್ನೆಲ್ಲ ಸಲ್ಲಿಸಿದನಲ್ಲದೆ, ಅವನು. .ನರಸಿಂಹನಾಯಕರನ್ನು ತನ್ನಲ್ಲಿ ಇರಿಸಿ

ಕೊಂಡು, ವಿಶೇಷವಾದ ಮನ್ನಣೆಯನ್ನು ಮಾಡಿದನು.

ಮುತ್ತುಪಾಳ್ಯದಿಂದ ಮುಂದೆ ಹೊರಡಬೇಕಾಗಿ ಬಂದಾಗ, ನರಸಿಂಹ ನಾಯಕನು ತುಳುವ ನರಸಿಂಹನಿಗೆ ಹೇಳಿದನು.

“ ಮಿಕ್ಕವರನ್ನೆಲ್ಲ ನಾನು ಒಬ್ಬನೆ ಹೋಗಿ ಮಾತನಾಡಿಸಿಕೊಂಡು ಬರುತ್ತೇನೆ. ನೀನು ಅವಶ್ಯವಾಗಿ ಚಂದ್ರಗಿರಿಗೆ ಮರಳಿ ಹೋಗಬೇಕು ! ವಿಜಯನಗರದ ಕಡೆಯ ವರ್ತಮಾನಗಳು ಏನೇನಿವೆಯೋ ! ವಿಶೇಷವಾರ್ತೆ ಯೇನಾದರೂ ಇದ್ದರೆ, ಕೂಡಲೆ ನನಗೆ ತಿಳಿಯುವಂತೆ ಏರ್ಪಾಡು ಮಾಡು ”

ನರಸಿಂಹನಾಯಕನ ಸೂಚನೆಯಂತೆ ತುಳುವ ನರಸಿಂಹನು ಚಂದ್ರ-ಗಿರಿಯ ಕಡೆಗೆ ಮರಳಿದ. ನರಸಿಂಹನಾಯಕನು ಸೈನ್ಯದೊಂದಿಗೆ ಚೆನ್ನಂ-ಕೊಂಡದ ದಾರಿಯನ್ನು ಹಿಡಿದು ತೆರಳಿದ.

* * * *

ರಥಸಪ್ತಮಿಯ ಮರುದಿವಸದ ಮಧ್ಯಾಹ್ನ ಮೀರಿಹೋಗಿದೆ. ಚಂದ್ರಗಿರಿಯ ಅರಮನೆಯ ಅಂತಃಪುರದಲ್ಲಿ ಕಮಲಾಂಬಿಕೆ, ಸಿಂಗಮ್ಮ ಎದುರೆದುರಾಗಿ ಕುಳಿತಿದ್ದಾರೆ. ಕಮಲಾಂಬಿಕೆಯ ಮುಖದಲ್ಲಿ ಆಗ ಕಳವಳದ ಭಾವವು ಹರಿದಾಡುತ್ತಿದೆ. ಸಂತವಿಡುವ ಧ್ವನಿಯಲ್ಲಿ ಸಿಂಗಮ್ಮ ಮಾತ ನಾಡಿದಳು.

“ ಅಮ್ಮಾಜೀ ! ರಾಜಕಾರ್ಯದಲ್ಲಿ ಇರುವವರದೆಲ್ಲ ಇದೇ ಹಣೆಯ ಬರೆಹ; ವರುಷವರುಷದ ವರೆಗೂ ಮನೆಯುವರ ಮುಖಗಳನ್ನು ಕಾಣಲಿಕ್ಕಾಗ-ದಂತಹ ಪ್ರಸಂಗಗಳೂ ಅವರೆದುರು ಬಂದು ನಿಲ್ಲುತ್ತಿರುತ್ತವೆ. ”

“ ಏನು ರಾಜಕಾರ್ಯವೋ, ಏನು ಹಾಳೋ ! ಚಂದ್ರಗಿರಿಗೆ ಹೊರ-ಡುವುದೆಂದಾಗ, ನಾನೇನೋ ತುಂಬ ಹಿಗ್ಗಿ ಕುಣಿದಾಡಿದ್ದೆ. ಆದರೇನು ? ಇಲ್ಲಿಗೆ ಬಂದರೂ ಅದೇ ಹಾಡು ! ಒಂದುದಿನವೂ ಜೊತೆಯಾಗಿ ಇರುವಂತೆ ಆಗಲಿಲ್ಲ. ಮತ್ತೆ ಮತ್ತೆ ಸೈನ್ಯ ! ಮತ್ತೆ ಮತ್ತೆ ಯುದ್ಧ ! ನನಗಂತೂ ಎನಿಸಿ-ಹೋಗಿದೆ:— ದೇವರು ಈ ಯುದ್ಧವೆಂಬುದನ್ನೊಂದು ಮಾಡಿರದಿದ್ದರೆ ಎಷ್ಟೊಂದು ಒಳ್ಳೆಯದಾಗುತ್ತಿದ್ದಿತಲ್ಲಾ – ಎಂದು. ”

“ ನಿಮ್ಮ ಮಾತು ಸುಳ್ಳಲ್ಲ ಅಮ್ಮಾಜೀ ! ಅದರ ಅನುಭವವು ನನಗೆ ಇಲ್ಲದೆ ಇಲ್ಲ. ಒಂದೆ ಒಂದು ಸಲ ಯುದ್ಧನಡೆದುಬಿಟ್ಟರೆ, ಅದೆಷ್ಟು ಜೀವಗಳ

ಹಾನಿಯಾಗುವುದು? ಎಷ್ಟು ಜನ ತಾಯಿತಂದೆಗಳು ಮಕ್ಕಳನ್ನು ಕಳೆದು ಕೊಂಡು ಮರುಗುವರು! ಇನ್ನೆಷ್ಟು ಜನ ಮಕ್ಕಳು ತಂದೆಯರಿಲ್ಲದ ದೇಸಿಗರಾಗಿ, ದೈನ್ಯದಿಂದ ಬಾಳಬೇಕಾಗುವುದು! ಎಷ್ಟೊಂದು ಜನ ಸುಮಂಗಲೆಯರ ಮಾಂಗಲ್ಯವು ಸುಟ್ಟುಹೋಗಿ ಬಿಡುವುದು! ಅದೆಷ್ಟು ಜನ ತರುಣಿಯರು ತಮ್ಮ ಪ್ರೇಮದ ಸ್ಥಾನಕ್ಕೆ ಎರವಾಗ ಬೇಕಾಗುವುದು!. . . ."

ಕಮಲಾಂಬಿಕೆಯು ಗಡಗಡನೆ ನಡುಗಿ, ಎರಡೂ ಕೈಗಳಿಂದ ಕಿವಿ ಗಳನ್ನು ಮುಚ್ಚಿಕೊಂಡು, ಗಾಬರಿಯ ಧ್ವನಿಯಲ್ಲಿ ಹೇಳಿದಳು.

"ಸಿಂಗಮ್ಮಾ ಅದನ್ನೆಲ್ಲಾ ಹೇಳಬೇಡ ನನ್ನೆದುರು! ತುಂಬ ಹೆದರಿಕೆ ಯುಂಟಾಗುತ್ತದೆ ನನಗೆ! ದೇವಾ! ತಿರುಪತಿಯ ಶ್ರೀನಿವಾಸಾ! ತುಳುವ ನರಸಿಂಹ ಸುಖದಿಂದ ಮನೆಗೆ ಬರಲಿ! ನಾಳೆಯ ಹುಣ್ಣಿಮೆಯ ದಿನ ನಿನ್ನ ದರ್ಶನಕ್ಕೆ ಬಂದು, ಐದು ಬ್ರಹ್ಮೋತ್ಸವಗಳನ್ನು ಮಾಡಿಸುತ್ತೇನೆ!"

ಸಿಂಗಮ್ಮ ನಗೆಯಾಟದ ಕೊಂಕುನುಡಿಯನ್ನು ಆಡಿದಳು.

"ಅಮ್ಮಾಜಿಗೆ ನರಸನಾಯಕರು ಮಾತ್ರ ಸುಖದಿಂದ ಬಂದರೆ ಸಾಕು! ಅಪ್ಪಾಜಿಯವರು ಪಾಪ! ಹೇಗಿದ್ದರೆ ಏನು ಅವರು!"

ತಪ್ಪುಮಾಡಿದ್ದವರಂತೆ ಕಮಲಾಂಬಿಕೆಯ ಮುಖವು ಹುಚ್ಚಿಟ್ಟಿತು. ಆಕೆ ದೈನ್ಯದಿಂದ ಹೇಳಿದಳು:

"ಹಾಗಲ್ಲವೇ! ಸಿಂಗಮ್ಮಾ! ಅಪ್ಪಾಜಿಯವರಿಗೆ ಹಲವು ಯುದ್ಧ ಗಳನ್ನು ಮಾಡಿ ಅನುಭವವಿದೆ!"

"ನರಸನಾಯಕರಿಗೂ ಅಂತಹ ಅನುಭವ ಸಿಕ್ಕಬೇಡವೇ? ರಾಜಕಾರ್ಯದಲ್ಲಿ ಇದ್ದವರು ಯುದ್ಧಕ್ಕೆ ಹೆದರಿದರೆ ಹೇಗೆ ನಡೆದೀತು ಅಮ್ಮಾಜೀ!"

"ದಯೆಯಿಟ್ಟು ಇನ್ನು ಯುದ್ಧದ ಮಾತನ್ನು ಎತ್ತಬೇಡ ಸಿಂಗಮ್ಮಾ! ನನಗೆ ಏನೇನೋ ಕೆಟ್ಟಕೆಟ್ಟ ಯೋಚನೆಗಳು ಬಂದುಹೋಗುತ್ತವೆ. ಮತ್ತೆ ಏನಾದರೂ ಮಾತನಾಡು!"

"ಇನ್ನೇನಮ್ಮಾ ಮಾತನಾಡುವುದು?"

"ಹೊತ್ತುಹೋಗುವಂತೆ ಏನಾದರೂ ಕತೆಯನ್ನು ಹೇಳಬಾರದೇ?"

"ಕತೆಯು ಬೇಕಾಯಿತೇ ನಿಮಗೆ? ಯಾವ ಕತೆ ಹೇಳಲಿ? ರಾಜ-

ಕುಮಾರಿಯನ್ನು ರಾಕ್ಷಸನು ಎತ್ತಿಕೊಂಡು ಹೋದುದನ್ನು ಹೇಳಲೆ?"

"ಅದು ಬೇಡವಮ್ಮಾ! ಪಾಪ! ಆ ರಾಜಕುಮಾರಿಯು ಪಟ್ಟ ಕಷ್ಟ-ನಷ್ಟಗಳನ್ನು ಕೇಳುತ್ತಿದ್ದಾಗೆಲ್ಲ ನನಗೆ, ಉಕ್ಕಿ ಉಕ್ಕಿ ಅಳುವು ಬಂದು ಬಿಡುತ್ತದೆ."

"ಹಾಗಾದರೆ. . ! ಪಂಚತಂತ್ರದೊಳಗಿನದೊಂದು ಯಾವುದನ್ನಾದರೂ ಹೇಳಲೇ?"

"ಹೋಗೇ ತಾಯಿ! ನನಗೆ ಅವುಗಳಲ್ಲಿಯದು ಒಂದು ಕೂಡ ಸೇರುವುದಿಲ್ಲ. ಬರೀ ಕಾಗೆ-ಗೂಗೆ, ಕುರಿ-ನರಿ, ಎತ್ತು-ಕತ್ತೆ, ಹುಲಿ-ಇಲಿ, ಸಿಂಗ-ಮಂಗ. . ಇವೇ ಹುಚ್ಚು ಹುಚ್ಚು ಕತೆಗಳು!"

"ಯಾವುದನ್ನು ಹೇಳಬೇಕೋ! ಒಂದೂ ಜ್ಞಾಪಕಕ್ಕೆ ಬರಲೊಲ್ಲದು!"

"ಹಿಂದೆ ಎಂದೋ ಒಮ್ಮೆ ಹೇಳಿದ್ದೆಯಲ್ಲ! ಕೃಷ್ಣಚರಿತ್ರೆಯಲ್ಲಿಯ ಕತೆಯನ್ನ! ಕೃಷ್ಣ ರಾಧೆಯನ್ನು ವಂಚಿಸಿ, ವನದಲ್ಲಿ ಅಡಗಿಕೊಳ್ಳುತ್ತಾನೆ. ರಾಧೆ ಹುಡುಕುತ್ತ ಹುಡುಕುತ್ತ ತಿರುಗಾಡಿ, ಎಲ್ಲೆಲ್ಲಿಯೂ ಕಾಣದೆ ಬೇಸತ್ತು, ಒಂದು ಬಳ್ಳಿಮನೆಯಲ್ಲಿ ಅಳುತ್ತಳುತ್ತ ಕುಳಿತಿರುತ್ತಾಳೆ; ಆಗ ಕೃಷ್ಣ ಹಿಂಬದಿಯಿಂದ ಬಂದು, ಆಕೆಯ ಕಣ್ಣುಗಳನ್ನು ಮುಚ್ಚುತ್ತಾನೆ. . . ಆ ಕತೆಯನ್ನು ಮೊದಲಿನಿಂದಲೂ ಹೇಳುನೋಡೋಣ! ಅದನ್ನು ಇನ್ನೊಂದು ಸಲ ಕೇಳಬೇಕೆಂದು ಆಶೆಯಾಗಿದೆ."

ಸಿಂಗಮ್ಮ ನಗುನಗುತ್ತ ಹೇಳಿದಳು.

"ನನ್ನ ಮನಸ್ಸಿನಲ್ಲಿ ಇದೀಗಲೇ ಹೊಳೆದುಹೋದುದನ್ನೇ ನೀವೂ ಕೇಳಿಬಿಟ್ಟಿರಿ. ಈಗ ನಿಮಗೆ ಆ ಕತೆಯನ್ನು ಕೇಳಬೇಕೆಂದು ಆಶೆಯಾಗುವುದು ಅಸ್ವಾಭಾವಿಕವೇನೂ ಅಲ್ಲ!"

ಕಮಲಾಂಬಿಕೆಯು ನಾಚಿಕೆಯ ಹುಸಿ-ಮುನಿಸಿನಿಂದ ಹೇಳಿದಳು:

"ಸಾಕು! ಸುಮ್ಮನೆ ಹೇಳಬಾರದೇ? ಬರೀ ಹುಡುಗಾಟ ಬೇಕು ನಿನಗೆ!"

ಸಿಂಗಮ್ಮ ಕತೆ ಹೇಳಲು ತೊಡಗಿದಳು; ಕಮಲಾಂಬಿಕೆ 'ಹೂಂ' ಗುಡಲಾರಂಭಿಸಿದಳು. ಮೊದಲಿನ ಎರಡು ಮೂರು ಮಾತುಗಳನ್ನು ಹೇಳಿರ-ಬಹುದು ಸಿಂಗಮ್ಮ; ಅಷ್ಟರಲ್ಲಿಯೆ ತುಳುವ ನರಸಿಂಹ ಅಲ್ಲಿಗೆ ಬಂದುಬಿಟ್ಟ.

ನೋಡಿ ಸಿಂಗಮ್ಮ ವಿನಯದಿಂದ ಎದ್ದು ನಿಂತಳು; ಕಮಲಾಂಬಿಕೆ ನಾಚಿಕೆ-ಬೆರಗು- ಸಂತಸಗಳ ಗೊಂದಣದಲ್ಲಿ, ಬಂದಿರುವವನನ್ನು ಆದರಿಸಿ ಬರಮಾಡಿ ಕೊಳ್ಳುವುದನ್ನು ಮರೆತು, ಸಂಭ್ರಮದ ಸ್ವರದಲ್ಲಿ ಒಮ್ಮೆಲೆ ಕೇಳಿದಳು.

" ಯಾವಾಗ ಬಂದುದು ? "

ಇದೀಗ ಎರಡು ಗಳಿಗೆ ಮಾತ್ರ ಆಯಿತು. "

ಕಮಲಾಂಬಿಕೆಯು ಒಳಗೊಳಗೆಯೆ ತಿರುಪತಿಯ ತಿಮ್ಮಪ್ಪನಿಗೆ ಕೃತಜ್ಞತೆಯ ನಮಸ್ಕಾರಗಳನ್ನು ಸಲ್ಲಿಸುವುದರಲ್ಲಿದ್ದಳೇನೋ ! ಮತ್ತೆ ಏನನ್ನೂ ಮಾತನಾಡಲಿಲ್ಲ. ನರಸಿಂಹನು ಆಸನವೊಂದರಲ್ಲಿ ಕುಳಿತುಕೊಂಡ. ಕಮಲಾಂಬಿಕೆಯು ಆತನ ಕಡೆಗೆ ತನ್ನ ನಲ್ನೋಟಗಳನ್ನು ಹರಿಯಿಸಿ, ಮೆಲುದನಿಯಲ್ಲಿ ಕೇಳಿದಳು. "

" ಅಪ್ಪಾಜಿಯವರು ಬರಲಿಲ್ಲವೇ ? "

" ಅಹುದು ! ಅವರು ಮುತ್ತುಪಾಳ್ಯದಿಂದ ಚೆನ್ನಂಕೊಂಡದ ಕಡೆಗೆ ಹೋದರು. ನನಗೆ – ನೀನು ಮರಳಿ ಹೋಗೆಂದು – ಹೇಳಿದುದರಿಂದ, ಬೇಗನೆ ಹೊರಟು ಬರಬೇಕಾಯಿತು. "

ಸಿಂಗಾಂಬಿಕೆ ನಗುನಗುತ್ತ ನರಸಿಂಹನಿಗೆ ಹೇಳಿದಳು.

" ತಾವು ಇಷ್ಟರಲ್ಲಿಯೆ ಮರಳಿ ಬಂದು ಒಳ್ಳೆಯದೇನನ್ನೂ ಮಾಡಲಿಲ್ಲ. ಪಾಪ ! ತಿರುಪತಿಯ ತಿರುಕ ತಿಮ್ಮರಾಯನಿಗೆ ಇನ್ನೂ ಎಷ್ಟೆಷ್ಟೋ ಮುಡಿಪು ಸಲ್ಲಬೇಕಾಗಿದ್ದಿತು. ತಾವು ಬೇಗನೆ ಮರಳಿ ಬಂದುದರಿಂದ, ಆತನ ಬಾಯಿಗೆ ಬಂದಿತು . . ಚಕ್ರ ! "

ಕಮಲಾಂಬಿಕೆಯಾಗ – ಸಿಂಗಮ್ಮನನ್ನು – ಕೋಪದ ಕಣ್ಣುಗಳಿಂದ ನೋಡಬೇಕೆಂದಳು. ಆದರೆ ಮರೆಯಾಗದ ಅವಳ ಮುಗುಳುನಗೆಯು, ಆಕೆಯ ಮಾತಿನಂತೆ ನಡೆಯಲಿಕ್ಕೆ ಸಿದ್ಧವಾಗಲಿಲ್ಲ; ನರಸಿಂಹನು ಕಮಲಾಂ-ಬಿಕೆಯನ್ನು ನೋಡುತ್ತಿದ್ದ ನಗೆಗಣ್ಣುಗಳನ್ನು, ಸಿಂಗಮ್ಮನ ಕಡೆಗೆ ಹೊರಳಿಸಿ ಕೇಳಿದನು.

" ಈಗೇನಾಯಿತು ಸಿಂಗಮ್ಮಾ ! "

" ಆಗುವುದೇನು ! ನಾಳೆಯ ಹುಣ್ಣಿಮೆಯ ದಿನ ತಿ ರು ಪ ತಿ ಯ ಶ್ರೀನಿವಾಸನಿಗೆ, ಐದು ಬ್ರಹ್ಮೋತ್ಸವದ ಹರಕೆಯನ್ನಷ್ಟೇ ಒಪ್ಪಿಸಬೇಕಾ-

ಯಿತು!"

"ಎಂದರೇನು"

ತಲೆತಗ್ಗಿಸಿ ಕುಳಿತಿದ್ದ ಕಮಲಾಂಬಿಕೆಯನ್ನು ನೋಡುತ್ತ ಸಿಂಗಮ್ಮ ಹೇಳಿದಳು.

"ತಾವು ಸುಖವಾಗಿ ಬೇಗನೆ ಮನೆಗೆ ಬಂದರೆ, ತಿರುಪತಿಗೆ ಬಂದು ಐದು ಬ್ರಹ್ಮೋತ್ಸವ ಮಾಡಿಸುತ್ತೇನೆಂದು, ಅಮ್ಮಾಜಿಯವರು ಇದೀಗಲೆ ಬೇಡಿಕೊಂಡಿದ್ದರು."

"ಅಹುದೇ..ಕಮಲಾ?" ಎಂದು ನುಂಗಿಬಿಡುವಂತೆ–ನಗೆಗಣ್ಣುಗಳನ್ನು ಅರಳಿಸಿ–ನಗುನಗುತ್ತಲೇ ತುಳುವ ನರಸಿಂಹನು ಕೇಳಿದ. ಕಮಲಾಂಬಿಕೆಯ ಮುಖವು ನೆಲವನ್ನು ನಿಟ್ಟಿಸುತ್ತಿದ್ದಿತು. ಬಲಗೈಯ ಬೆರಳುಗಳ ಬಳಗ, ಕಾರಣವಿಲ್ಲದೆ ಅಂಚಲದ ತುದಿಯನ್ನು ಹೊಸಗುತ್ತಿದ್ದಿತು. ಆಗ ಸಿಂಗಮ್ಮ ಏನನೋ ನೆಪತೆಗೆದು ಹೊರಕ್ಕೆ ಹೊರಟು ಹೋದಳು. ಆಕೆ ಹೋದ ನಾಲ್ಕಾರು ನಿಮಿಷಗಳ ವರೆಗೆ, ಇಬ್ಬರೂ ಕದಲದೆ ಒಂದೆ ಭಂಗಿಯಲ್ಲಿ ಕುಳಿತಿದ್ದರು. ಬಳಿಕ ನರಸಿಂಹನು ಆಸನವನ್ನು ಬಿಟ್ಟೆದ್ದು, ಕಮಲಾಂಬಿಕೆಯ ಬಳಿಸಾರಿ ನಿಂತನು; ತನ್ನ ಬಲದ ಕೈಯಿಂದ ಕಮಲಾಂಬಿಕೆಯ ಗದ್ದವನ್ನು ಹಿಡಿದು ಮೇಲಕ್ಕೆತ್ತಿ, ಅವಳ ಚೆಲುವನ್ನು ಕಣ್ಣುತುಂಬುವಂತೆ ನಿಟ್ಟಿಸಿ, ನುಡಿದ.

"ಕಮಲಾ! ಪ್ರೀತಿಯೆ ಗಟ್ಟಿಗೊಂಡು ನೀನು ಆಗಿರುತ್ತೀಯೆ ನೋಡು!"

ಕಮಲಾಂಬಿಕೆಯು ಮಾತನೇನೂ ಆಡಲಿಲ್ಲ. ಕೈಹಿಡಿದಿದ್ದ ನರಸಿಂಹನನ್ನು ಅನುಸರಿಸಿ ಬಂದು, ಆತನ ಬಳಿಯಲ್ಲಿಯೇ–ಹುದುಗಿಕೊಂಡವಳಾಗಿ–ಕುಳಿತಳು ಮಾತ್ರ. ನರಸಿಂಹನು ಹೇಳಿದ.

"ಕಮಲಾ! ಮಾವಾಜಿಯವರ ಒತ್ತಾಯದಂತೆ ನಾನು ಬೇಗನೆ ಇಲ್ಲಿಗೆ ಬಂದು ಬಿಟ್ಟುದು, ಎಲ್ಲಬಗೆಯಿಂದಲೂ ಒಳ್ಳೆಯದೆ ಆದಂತಾಯಿತು."

"ಎಲ್ಲ ಬಗೆಯಿಂದಲೂ..ಎಂದರೆ ಏನು?"

"ಅಹುದು! ನಿನಗಂತೂ ನಾನು ಬೇಗನೆ ಬರುವುದು ಬೇಕಾಗಿದ್ದಿತು.

ಸರಿಯೇ ! ವಿಜಯನಗರದಿಂದ ನಿನ್ನೆಯ ದಿನವೆ ಮಹತ್ತ್ವದ ಓಲೆಯೊಂದು ಬಂದು ಕುಳಿತಿದೆ. "

ಕಮಲಾಂಬಿಕೆಯ ನಾಚಿಕೆ ಹೆದರಿಕೆಗಳು ಸ್ವಲ್ಪ ಹಾರಿಹೋದಂತಾದುವು. ಆಕೆ ಸಂಕೋಚಭಾವವನ್ನು ಬಿಟ್ಟು ಕೇಳಿದಳು.

" ವಿಜಯನಗರದ ಓಲೆಯೆಂದಾಕ್ಷಣವೇ ಜ್ಞಾಪಕಕ್ಕೆ ಬಂದಿತು. ಅಲ್ಲಿಯ ಸಿಂಹಾಸನಾರೋಹಣದ ಸಮಾರಂಭವು ಚೆನ್ನಾಗಿನಡೆದಿರಬಹುದು, ಅಲ್ಲವೇ ? "

"ಹುಂ! ನಡೆದಿದೆ ಚೆನ್ನಾಗಿ! ಆ ಸಮಾರಂಭದ ಸುದ್ದಿಯನ್ನೇ – ಈಗ ಕೂಡಲೆ – ಮಾವಾಜಿಯವರ ಕಡೆಗೆ ಕಳುಹಿಸಬೇಕಾಗಿದೆ." ನರಸಿಂಹನ ಧ್ವನಿಯು ಆಗ ನಸುವೆ ಬಿರುಸುತನಕ್ಕೆ ಏರಿದ್ದಿತು. ಕುತೂಹಲದ ಸ್ವರದಲ್ಲಿ ಕಮಲಾಂಬಿಕೆ ಕೇಳಿದಳು.

" ಮತ್ತೇನಾದರೂ ವಿಶೇಷ ಸಂಗತಿ ನಡೆದಿದೆಯೇ ಅಲ್ಲಿ ? "

" ವಿಶೇಷಸಂಗತಿಯೆ..? ಕನಸುಮನಸಿನಲ್ಲಿಯೂ ಕಾಣದಂತಹ ವಿಶೇಷಸಂಗತಿ ನಡೆದಿದೆ. "

" ಅದೇನು ? ಅಂತಹದೇನು ? "

" ಹೊಸತಾಗಿ ಸಿಂಹಾಸನವೇರಿದ್ದ ಪೆದ್ದರಾಯನು, ಯಾವನೋ ಒಬ್ಬ ಸಾಮಾನ್ಯ ಸೈನ್ಯಾಧಿಕಾರಿಯನ್ನು ದಂಡನಾಯಕನನ್ನಾಗಿ ನಿಯಮಿಸಿ ಕೊಂಡಿದ್ದಾನಂತೆ ! "

" ಅಪ್ಪಾಜಿಯವರನ್ನು ಬಿಟ್ಟು ? "

" ಅಹುದು! ಅಪ್ಪಾಜಿಯವರನ್ನು ಬಿಟ್ಟು; ಅಣ್ಣಾಜಿಯವರ ಮಾತನ್ನು ಮೀರಿ; ಸಾಮ್ರಾಜ್ಯದ ಹೊಣೆಗಾರರಾದ ಅಧಿಕಾರಿಗಳೆಲ್ಲರ ಅಭಿಪ್ರಾಯವನ್ನು ಗಣಿಸದೆ ! "

" ಹೀಗೇತಕ್ಕೆ ಮಾಡಿದನೋ ಆತ ! ಪೆದ್ದರಾಯ ಆಗಾಗ ಅಪ್ಪಾಜಿಯವರ ಬಳಿಯಲ್ಲಿ ಬರುತ್ತಿದ್ದ. ಎಷ್ಟೆಷ್ಟೊ ಒಳ್ಳೆಯ ಮಾತುಗಳನ್ನಾಡುತ್ತಿದ್ದ ! ನನಗೆ ಒಳ್ಳೆಯೊಳ್ಳೆಯ ಅನೇಕ ಒಡವೆಗಳನ್ನು ಉಡುಗರೆಯಾಗಿ ಕಳುಹಿಸಿದ್ದ. ಈಗ ಹೀಗೆ ಮಾಡಿದನೇತಕ್ಕೋ ತಿಳಿಯಲಿಲ್ಲ ! "

ತುಳುವ ನರಸಿಂಹನು ಆಗ ಮಾತನೇನೂ ಆಡದೆ, ಕಮಲಾಂಬಿಕೆಯ

ನಿಷ್ಕಲ್ಮಷಭಾವದ ಮುಖವನ್ನು ಒಂದುಸಲ – ಸ್ಥಿರದೃಷ್ಟಿಯಿಂದ – ನೋಡಿದನು ಮಾತ್ರ. ಕಮಲಾಂಬಿಕೆ ಕೇಳಿದಳು.

“ಯಾರು ಕಳುಹಿಸಿದ್ದಾರೆ. . ವಿಜಯನಗರದಿಂದ ಓಲೆಯನ್ನು ?”

“ನಾರಾಯಣ ಪಂಡಿತರು ! ಮಾವಾಜಿಯವರನ್ನು ಬೇಗನೆ ಬರುವ ಹಾಗೆ ಬಿನ್ನವಿಸಿಕೊಂಡಿದ್ದಾರೆ. ಕಮಲಾ ! ನಾನು ಇದೀಗಲೆ ಚೆನ್ನಂ-ಕೊಂಡಕ್ಕೆ – ಮಾವಾಜಿಯವರ ಕಡೆಗೆ – ಕುದುರೆಯಾಳಿನೊಂದಿಗೆ – ಆ ಓಲೆಯನ್ನು ಕಳುಹಿಸಬೇಕಾಗಿದೆ. ನೀನೇನನಾದರೂ ಎಂದುಕೊಂಡೀಯೆ ಎಂದು, ಎಲ್ಲವನ್ನೂ ಬಿಟ್ಟು, ಇಲ್ಲಿಗೆ ಬಂದುಬಿಟ್ಟಿದ್ದೇನೆ. ನಾನಿನ್ನು ಹೊರಡಲೇ ?”

“ಊಂ. . . . ಆಗಲಿ, ಹೊರಡಿ ! ಹೋಗಲೆ ಬೇಕಾಗಿದೆಯಲ್ಲವೆ ! ಆದರೆ. . ನಿಮಗೆ ಸಂಜೆಯ ಊಟದ ಔತಣ. . !”

“ಆಗಲಿ ! ಅವಶ್ಯವಾಗಿ ಸ್ವೀಕರಿಸುತ್ತೇನೆ. . ನಿನ್ನ ಔತಣವನ್ನು !”

ಇಷ್ಟು ನುಡಿದವನೆ ತುಳುವನರಸಿಂಹನು ಹೊರಟುಬಿಟ್ಟ. ಕಮಲಾಂಬಿ-ಕೆಯು ‘ಸಿಂಗಮ್ಮಾ ! ಸಿಂಗಮ್ಮಾ !’ ಎಂದು ಉತ್ಸಾಹದಿಂದ ಕೂಗುತ್ತ, ಓಲಗಸಾಲೆಯ ಹಿಂಬಾಗಿಲನ್ನು ಬಳಿಸಾರಿ ನಡೆದಳು.

---

## ೨೩ನೆಯ ಪರಿಚ್ಛೇದ

ತುಳುವನರಸಿಂಹನು ಚಂದ್ರಗಿರಿಗೆ ಮರಳಿ ಬಂದ ದಿನವೆ ಇತ್ತ ವಿಜಯನಗರದಲ್ಲಿ, ಹಗಲು ಇಪ್ಪತ್ತು ಗಳಿಗೆಗಳು ಕಳೆದಿರುವಾಗ – ಹೊಸ ದೊರೆಯು – ತನ್ನ ಆಲೋಚನಾಗಾರದಲ್ಲಿ ಏಕಾಕಿಯಾಗಿ ಕುಳಿತುಕೊಂಡಿದ್ದನು. ಅದೇತಕ್ಕೋ ಮುಖದಮೇಲೆ ರೋಷದ ಚಿಹ್ನೆಗಳು ಮೂಡಿಕೊಂಡಿವೆ. ಬಲಗೈಯ ಬೆರಳುಗಳು – ಆಗಾಗ – ಮುಂದಲೆಯ ಕೂದಲುಗಳನ್ನು ತಮಗೆ ಬೇಕಾದಹಾಗೆ ತಿಕ್ಕುತ್ತಲಿವೆ. ಆಗಲೆ. . ದಂಡನಾಯಕನಾಗಿದ್ದ ಈಶ್ವರನು ಅಲ್ಲಿಗೆ ಬಂದು, ಕುತೂಹಲದ ಧ್ವನಿಯಲ್ಲಿ ದೊರೆಯನ್ನು ಕೇಳಿದ.

“ರಾಜಶೇಖರನ ಕರೆಹಕ್ಕೆ ಉತ್ತರವನ್ನು ಏನೆಂದು ಕೊಟ್ಟುಕಳುಹಿ-

ಸಿದ್ದೀರಿ ?''

"ಸದ್ಯ ಅಲ್ಲಿಗೆ ಬರುವುದಕ್ಕೆ ನನಗೆ ಅವಕಾಶವಿಲ್ಲವೆಂದು ಹೇಳಿ ಕಳುಹಿಸಿದ್ದೇನೆ''

"ಒಳ್ಳೆಯದಾಯಿತು. ಇನ್ನುಮೇಲೆ ಅವರನ್ನು ನಂಬಿ ನಡೆಯು ವಂತಿಲ್ಲ. ಯಾವ ವೇಳೆಯಲ್ಲಿ ಏನುಮಾಡಬಹುದೆಂಬುದರ ನಿಯಮವಿಲ್ಲ. ತಾವು ಹಗಲಿರುಳೂ ಜಾಗರೂಕರಾಗಿರುವುದು. ಒಳ್ಳೆಯದು! ದಿನ-ದಿನವೂ ಇಲ್ಲಿಂದ ಚಂದ್ರಗಿರಿಗೆ ವರ್ತಮಾನಗಳು ಹೋಗುತ್ತಲಿವೆಯೆಂದು ಸುದ್ದಿಯಿದೆ. ಎಷ್ಟೋ ಪ್ರಯತ್ನ ನಡೆಯಿಸಿದ್ದೇನೆ; ಇದುವರೆಗೆ ಒಂದು ಓಲೆಯೂ ನನ್ನ ಕಡೆಗೆ ದೊರೆಯಲೊಲ್ಲದಾಗಿದೆ. ಯಾರ ಮುಖಾಂತರ–ಯಾವ ದಾರಿಯಿಂದ ಹೋಗುತ್ತಿರುವುವೋ ಏನೋ! ನರಸಿಂಹನಾಯಕನೂ ಇಲ್ಲಿಗೆ ಬೇಗನೆ ಬರಬಹುದಾಗಿದೆ. ಆತ ಬಂದರೆ ಸುಮ್ಮಗೇನೂ ಕುಳಿತು ಕೊಳ್ಳುವವನಲ್ಲ; ತನ್ನ ಕಾರಣವಿಲ್ಲದಿದ್ದರೂ ರಾಜಕಾರ್ಯದಲ್ಲಿ ಹಾಗೆಯೆ ತಲೆಯಿಕ್ಕುತ್ತ ಬರುವವನವನು! ನರಸಿಂಹನಾಯಕ – ರಾಜಶೇಖರರು ಸೇರಿಬಿಟ್ಟರಂತೂ ಆಗಿಯೇ ಹೋಯಿತು. ಬೆಂಕಿ-ಗಾಳಿ. .ಕೂಡಿದ ಹಾಗೆ! ಅವರಿಬ್ಬರೂ!"

"ಇದು ನೋಡಿ! ನರಸಿಂಹನಾಯಕನು ಇಲ್ಲಿಗೆ ಬಾರದಂತೆ ಮಾಡಿ ಬಿಟ್ಟರೆ ಒಳ್ಳೆಯದಾಗಲಿಕ್ಕಿಲ್ಲವೇ ?''

"ಹಾಗೆ ಮಾಡಿದರೇನೋ ಒಳ್ಳೆಯದೇ ಸರಿ! ಆದರೆ ಆತನಿಲ್ಲದಿದ್ದರೂ ಆತನ ಪಕ್ಷವೊಂದು ಬೆಳೆಯುತ್ತಿದೆಯಲ್ಲ ರಾಜಧಾನಿಯಲ್ಲಿಯೇ! ಅಣ್ಣಾಜಿ-ನಾರಾಯಣಪಂಡಿತರು ಬದುಕಿರುವವರೆಗೂ ಆ ಪಕ್ಷವು ಪೂರ್ಣವಾಗಿ ನಷ್ಟವಾಗುವಂತೆ ಇಲ್ಲ."

ಪೆದ್ದರಾಯನು ಸ್ವಲ್ಪಕಾಲ ಯೋಚಿಸುತ್ತ ಕುಳಿತಿದ್ದು, ಬಳಿಕ ಕಿನಿಸಿನ ಗಡುಸುನುಡಿಯಲ್ಲಿ ಎಂದನು.

"ಅಹುದು, ಈಶ್ವರನಾಯಕರೇ! ಅದರ ಯೋಚನೆಯನ್ನು ನಾವು ಮೊದಲು ಮಾಡಬೇಕಾಗಿದೆ."

ಮಿಕ್ಕವರದೇನೂ ಲಕ್ಷ್ಯವಿಲ್ಲ ನನಗೆ ದೊರೆಗಳೇ!........"

ಈಶ್ವರನಾಯಕನು ಮುಂದೆ ಏನೇನನೋ ಹೇಳುವವನಿದ್ದ; ಅಷ್ಟರಲ್ಲಿಯೆ

ರಾಜಶೇಖರನು ತನ್ನ ಬೆಂಗಾಪಿನ ಚಿಕ್ಕಣ್ಣನೊಂದಿಗೆ ಅಲ್ಲಿಗೆ ಬಂದ ಆತನ ಮುಖವು ಕಣ್ಣಿಗೆ ಕಂಡೊಡನೆಯೆ ಈಶ್ವರನಾಯಕನು ದಡದಡಿಸುತಿಪುವ ಎದೆಯಿಂದ – ಪೆಚ್ಚುಬಿದ್ದ ಮೊಗದಿಂದ – ಒಮ್ಮೆಲೆ ಮೇಲಕ್ಕೆದ್ದು ನಿಂತ. ಪೆದ್ದರಾಯನೂ ಏಳಬೇಕೋ – ಬಾರದೋ – ಎಂಬ ತೂಗಾಟದ ಮನಸ್ಸಿನಲ್ಲಿ – ಮೆಲ್ಲಗೆ ಮೇಲಕ್ಕೆದ್ದ. ಒಳಕ್ಕೆ ಬಂದಿದ್ದ ರಾಜಶೇಖರನು ಎಲ್ಲಿಯೂ ಕುಳಿತುಕೊಳ್ಳದೆ, ನಿಂತಲ್ಲಿಯೆ ನಿಂತು ಮಾತನಾಡಿದನು.

"ಪೆದ್ದಣ್ಣಾ! ವಿಶೇಷವಾದ ರಾಜಕಾರ್ಯವೊಂದನ್ನು ಕುರಿತು ನಿನ್ನೊಡನೆ ಮಾತನಾಡಬೇಕಾಗಿದ್ದಿತು; ಎಂತಲೆ, ನಿನಗೆ ಬಂದುಹೋಗುವುದಕ್ಕೆ ಹೇಳಿಕಳುಹಿಸಿದ್ದೆ. ನಿನಗೆ ಅವಕಾಶವಿಲ್ಲವೆಂಬುದನ್ನು ಕೇಳಿ, ನಾನೇ ಇಲ್ಲಿಗೆ ಬಂದೆ."

ದೊರೆಯು ಮಾತನೇನೂ ಆಡದೆ, ಈಶ್ವರನಾಯಕನನ್ನು ದುಡುಕುನೋಟದಿಂದ ನೋಡಿದನು ಮಾತ್ರ. ರಾಜಶೇಖರನೇ ಮತ್ತೆ ಮಾತಿಗೆ ಆರಂಭಿಸಿದ.

"ಈಗ ನಾನು ಬಂದ ಕಾಲವು ಅನುಕೂಲವಾಗಿದೆಯೆಂದು ನನಗೆ ಎನಿಸಲು ತೊಡಗಿದೆ. ಏತಕ್ಕಾಗಿಯೆಂದರೆ. .ದೊರೆ-ದಂಡನಾಯಕ ಇಬ್ಬರೂ ಇಲ್ಲಿಯೆ ಜೊತೆಗೂಡಿ ಇದ್ದೀರಿ. ಮಾತನಾಡಬೇಕಾಗಿದ್ದುದನ್ನೆಲ್ಲ ಮಾತನಾಡಿ, ವಿಚಾರಮಾಡುವುದಕ್ಕೆ ಹೆಚ್ಚು ಅನುಕೂಲವಾಯಿತು."

ಪೆದ್ದರಾಯನು ಅಭಿಮಾನದ ಬಿಗುಹಿನ ಧ್ವನಿಯಲ್ಲಿ ಕೇಳಿದನು.

"ಈಗ ಮಾತನಾಡಿ, ವಿಚಾರಮಾಡಬೇಕಾಗಿದ್ದಂತಹ ವಿಷಯವಾದರೂ ಅದು ಯಾವುದು?"

ರಾಜಶೇಖರನು ಪಕ್ಕಕ್ಕೆ ತಿರುಗಿ, ತಾನಾಗಿಯೆ ಒಂದು ಆಸನವನ್ನು ಹಿಡಿದು ಕುಳಿತ. ದೊರೆ, ದಂಡನಾಯಕರೂ ತಮ್ಮ ತಮ್ಮ ಪೀಠಗಳಲ್ಲಿ ಕುಳಿತರು. ಬಳಿಕ ರಾಜಶೇಖರನು ಮೆಲುಮಾತುಗಳಲ್ಲಿ ಹೇಳಿದ.

"ನೋಡು ಪೆದ್ದಣ್ಣಾ! ನಿನ್ನೆಯ ಸಾಯಂಕಾಲ, ರಾಜಧಾನಿಯ ಹಲವು ಜನ–ಮುಹಮ್ಮದೀಯ ಪ್ರಮುಖರು – ನನ್ನ ಕಡೆಗೆ ಬಂದಿದ್ದರು."

ದೊರೆಯು ಹೆಮ್ಮೆಯ ಬಿರುದನಿಯಲ್ಲಿಯೆ ಕೇಳಿದ.

"ಸರಿ! ಬಂದಿದ್ದರು, ಆಮೇಲೆ?"

"ಆ ಮೇಲೆ ಏನು? ನೀನು ಹೊರಡಿಸಿದ್ದ ರಾಜಾಜ್ಞೆಯ ವಿಷಯ ವನ್ನು ನನ್ನೆದುರು ಬಿನ್ನವಿಸಿಕೊಂಡರು! ಪಾಪ!......"

ಮುಂದೆಯಿನ್ನೂ ಹೇಳಬೇಕಾಗಿದ್ದ ರಾಜಶೇಖರನ ಮಾತುಗಳನ್ನು ನಡುವೆಯೆ ತಡೆದು, ಪೆದ್ದದೊರೆಯು ಹೇಳಿದನು.

"ನೀವು ಏನು ಹೇಳುತ್ತಿದ್ದೀರಿ—ಎಂಬುದು ಗೊತ್ತಾದಂತಾಯಿತು... ನನಗೆ. ಅಣ್ಣಾಜೀ! ಇನ್ನುಮೇಲೆ ನಿಮ್ಮ ಸೋಗಿನ ಸರಳತನದ ಮಾತು ಗಳಿಗೆ..ಎಂದೂ ನಾನು ಮಂಕುಬೀಳುವವನಲ್ಲ. ಆ ರಾಜಾಜ್ಞೆಯನ್ನು ಯಾರು ಹೇಳಿದರೂ ಹಿಂದಕ್ಕೆ ತೆಗೆದುಕೊಳ್ಳುವಂತೆ ಇಲ್ಲ."

"ವಿಚಾರಮಾಡಿ ನೋಡು ಪೆದ್ದಣ್ಣಾ! ಅವರನ್ನು ಹೊರಕ್ಕೆ ಹಾಕು ವುದರಿಂದ, ವ್ಯರ್ಥವಾಗಿ ಅಷ್ಟು ಜನರನ್ನು ರೇಗಿಸಿದಂತಾಗುವುದು. ಕಾರಣ ವೇನೂ ಇಲ್ಲದೆ, ಅವರ ಸಹಕಾರ-ಸಹಾನುಭೂತಿಗಳನ್ನು ಕಳೆದುಕೊಂಡಂತೆ ಆಗುವುದು. ಸಾಮ್ರಾಜ್ಯದ ನೆಮ್ಮದಿಗೆ ಇದು ಪಥ್ಯಕರವಾಗಲಾರದು!"

"ಆ ಜನರ ಸಹಕಾರ-ಸಹಾನುಭೂತಿಗಳ ಅಪೇಕ್ಷೆ ನಿಮಗೆ ಮಾತ್ರ ಇದೆಯೇನೋ! ಮುಹಮ್ಮದೀಯರು ಈ ಪಟ್ಟಣದಲ್ಲಿ ಇರುವುದೆಂದರೆಯೆ ಸಾಮ್ರಾಜ್ಯದ ನೆಮ್ಮದಿಗೆ ಅಪಥ್ಯವೆಂದು ಎನಿಸುತ್ತಲಿದೆ..ನನಗೆ."

"ಎನಿಸುತ್ತಿರುವುದನ್ನೆಲ್ಲ ಹೀಗೆ ವಿಚಾರ-ವಿಮರ್ಶೆಗಳಿಲ್ಲದೆ ಆಚರಣೆ ಯಲ್ಲಿ ತರಲಾಗದು ಪೆದ್ದಣ್ಣಾ! ನನ್ನ ಮಾತನ್ನು ಸ್ವಲ್ಪ ಕೇಳು! ಮುಹಮ್ಮ-ದೀಯರ ಆವಶ್ಯಕತೆಯು ರಾಜಧಾನಿಗೆ ಇರುವುದೆಂದೇ—ಇಷ್ಟು ದಿನಗಳ ವರೆಗೆ—ಅವರಿಲ್ಲಿ ಮನೆಮಾಡಿಕೊಂಡು ನಿಂತಿದ್ದಾರೆ. ರಾಜಧಾನಿಯಲ್ಲಿಯ ಅನೇಕ ಕಸಬು—ಕೈಗಾರಿಕೆಗಳು, ಕೇವಲ ಮುಹಮ್ಮದಿಯರನ್ನೇ ಅವಲಂಬಿಸಿ ಕೊಂಡು ಇವೆ. ಎಷ್ಟೆಷ್ಟೋ ಲಲಿತಕಲೆಗಳು ಮುಹಮ್ಮದೀಯರವೇ ಆಗಿ-ಇವೆ. ಕನ್ನಡಿಗರಿಗೆ ಆವಶ್ಯಕವಾಗಿದ್ದರೂ, ಕಾರಣಾಂತರಗಳಿಂದ ಮಾಡಲಿಕ್ಕೆ ಅಶಕ್ಯವಾದ ಹಲವು ಉದ್ಯೋಗ-ವ್ಯವಸಾಯಗಳನ್ನು, ಅವರೆ ನೆರವೇರಿಸುತ್ತ ಲಿದ್ದಾರೆ. ಹೀಗಿರುವಾಗ ಅವರೆಲ್ಲ ಹೊರಟುಹೋಗುವುದರಿಂದ ನಮ್ಮಲ್ಲಿ, ಆ ಆ ಕಸಬುದಾರರ—ಕಲಾವಿದರ—ಕೊರತೆಯೆನಿಸದೇ? ನಮ್ಮ ಸೈನ್ಯಕ್ಕೆ ಅರಬ್ಬೀದೇಶದ ಕುದುರೆಗಳನ್ನು ಒದಗಿಸಿಕೊಡುವ ವ್ಯಾಪಾರಿಗಳಲ್ಲಿ ಬಹು ಜನರು ಮುಹಮ್ಮದೀಯರೇ ಆಗಿದ್ದಾರೆ. ಅವರ ಆವಶ್ಯಕತೆಯಿಲ್ಲವೇ ನಮಗೆ?"

"ನಾವು ಯಾವುದಕ್ಕಾಗಿಯೂ ಮಹಮ್ಮದೀಯರನ್ನು ಅವಲಂಬಿಸಿರಲಿಕ್ಕಾಗದೆಂದು ನನ್ನ ಅಭಿಪ್ರಾಯ; ಎಂತಲೇ ನೀವು, ಯಾವಯಾವ ಕೊರತೆ–ಆವಶ್ಯಕತೆಗಳ ನೆಪಗಳನ್ನು ಮುಂದೆ ಒಡ್ಡಿದರೂ, ರಾಜಾಜ್ಞೆ-ಯನ್ನು ಹಿಂದಿರುಗಿಸಲಿಕ್ಕೆ ಆಗದು!"

"ಕೊರತೆ-ಆವಶ್ಯಕತೆಗಳನ್ನು ಬಿಟ್ಟುಬಿಡೋಣ ಬೇಕಾದರೆ ತಮ್ಮಾಜೀ! ಮನುಷ್ಯತ್ವದ ವಿವೇಕದೃಷ್ಟಿಯಿಂದಲಾದರೂ ನಾವು ವಿಚಾರ ಮಾಡಬೇಕಾಗಿಲ್ಲವೇ? ಎಷ್ಟೋ ದಿನಗಳಿಂದ ಇಲ್ಲಿಯೇ ಒಕ್ಕಲಾಗಿದ್ದು, ಎಷ್ಟು ಜನರ ಹಾಗೆಯೆ, ವಿಜಯನಗರವನ್ನೇ ತಮ್ಮ ಹುಟ್ಟಿದೂರನ್ನಾಗಿ ಮಾಡಿಕೊಂಡಿದ್ದಾರೆ.. ಅವರು! ಈಗ ಒಂದುವಾರದೊಳಗಾಗಿಯೆ ಹೊರಟು ಹೋಗಬೇಕೆಂದು, ಒಮ್ಮೆಲೆ ಅಪ್ಪಣೆಕೊಟ್ಟುಬಿಟ್ಟರೆ, ಅವರೆಲ್ಲ ಎಲ್ಲಿಗೆಂದು ಹೋಗಬೇಕು? ಹೋಗುವುದಾದರೂ ಹೇಗೆ? ಎಷ್ಟು ಜನರ ಮನೆಯಲ್ಲಿ ಬಸಿರೆ ಬಾಣಂತಿಯರೋ! ಇನ್ನೆಷ್ಟು ಜನರ ಮನೆಯಲ್ಲಿ ಕೂಸುಕುನ್ನಿಗಳೋ! ಮತ್ತೆಯೆಷ್ಟು ಸಂಸಾರಗಳಲ್ಲಿ ಬೇನೆ ಬಳಲಿಕೆಗಳೋ! ಇನ್ನೂ ಎಷ್ಟೆಷ್ಟೋ ಅಡಚಣೆಗಳಿರಬಹುದು.. ಅವರ ಎದುರಿಗೆ!"

"ಅದನ್ನೆಲ್ಲ ಚಿಂತೆ ಮಾಡಿ, ನಾವು ಏತಕ್ಕಾಗಿ ಸಣ್ಣಾಗಬೇಕು? ಉತ್ತರಭಾರತದಲ್ಲಿ ಮಹಮ್ಮದೀಯ ದೊರೆಗಳು, ವೈದಿಕಧರ್ಮದ ಬಡ-ಬಗ್ಗರಿಂದಲೂ ತೆಗೆದುಕೊಳ್ಳುತ್ತಿದ್ದ ತಲೆದಂಡದಲ್ಲಿ, ದಯೆ-ದಾಕ್ಷಿಣ್ಯಗಳನ್ನೇನಾದರೂ ತೋರಿಸುತ್ತಾರೆಯೇ? ಮಹಮ್ಮದ್ ತಘಲಖನ ಚರಿತ್ರೆಯನ್ನು ಕೇಳಿಲ್ಲವೇ ನೀವು? ಭಾರತೀಯರನ್ನು ಪಶುಗಳಂತೆ ಬೇಟೆಯಾಡುತ್ತಿದ್ದನಂತೆ! ಮುಯ್ಯಿಗೆ ಮುಯ್ಯಿ ತೀರಲೇಬೇಕು! ಮಾಡಿದವರು ಉಣ್ಣಬೇಕು ಮನದಂತಹ ಕಡುಬು!"

"ಅವರೇನೋ ಹಾಗೆ ಮಾಡುತ್ತಿರಬಹುದು .. ಮಾಡಿರಬಹುದು.. ಎನ್ನು. ಅವರ ಪಾತಕದ ಫಲವನ್ನು, ಇಲ್ಲಿಯ–ಈ ನಿರಪರಾಧಿ–ಜನರ ತಲೆಯ ಮೇಲೆ ಹೇರಬೇಕೇ ನಾವು? ವಿವೇಕಬುದ್ಧಿಗೆ ಸರಿಯೆನಿಸುತ್ತಿದೆಯೇ ಇದು?"

"ಅಣ್ಣಾಜೀ ಇದುವರೆಗೆ ಸುಮ್ಮನೆ ಇದ್ದು, ನಿಮ್ಮ ಮಾತುಗಳನ್ನು ಕೇಳಿದೆ. ಇನ್ನು ಮೇಲೆ ಮಾತ್ರ ತಡೆಯಲಾರೆ! ಈ ವಿಚಾರದಲ್ಲಿ ನೀವು

ನನಗೆ ಏನನೂ ಹೇಳಬೇಡಿ! ನಾನು ಕೇಳುವುದಿಲ್ಲ!"

"ಕರ್ಣಾಟರಾಜ್ಯದ ಸಮ್ರಾಟರಿಂದ ಅನ್ಯಾಯ ನಡೆಯಲಾಗದು.. ಪೆದ್ದಣ್ಣಾ!"

ಪೆದ್ದರಾಯನು ಕೆವ್ಮೊಗದಿಂದ ನುಡಿದನು.

"ನ್ಯಾಯಾನ್ಯಾಯಗಳ ವಿಚಾರವನ್ನು, ನಿಮ್ಮ ಕಡೆಯಿಂದಲೇ ನಾನು ಕೇಳಿ ತಿಳಿದುಕೊಳ್ಳಬೇಕಾಗಿಲ್ಲ. ಯಾರು–ಯಾರಲ್ಲಿ ಎಷ್ಟೆಷ್ಟು ನ್ಯಾಯ-ಬುದ್ಧಿಯಿದೆಯೆಂಬುದು ನನಗೂ ಗೊತ್ತು! ಸ್ವಾರ್ಥಕ್ಕೆ ಪರೋಪಕಾರದ ಮುಸುಕನ್ನು ಹಾಕುವ ಮಹಾತ್ಮರು ಲೋಕದಲ್ಲಿ ಬಹಳ ಜನರು! ನೀವಿನ್ನು ಯಾವ ಮಾತನ್ನೂ ಆಡಲಾಗದು! ಇಲ್ಲಿಂದ ಹೊರಟು ಬಿಡಿ!"

ರಾಜಶೇಖರನ – ಸುಪ್ತಭಾವದಲ್ಲಿದ್ದ – ರಜೋವೃತ್ತಿ ಒಮ್ಮೆಲೆ ಜಾಗ್ರುತವಾಯಿತು. ಕೂಡಲೆ ಸಿಡಿಯುವ ಸಿಡಿಲಿನಂತೆ ಹೇಳಿದ.

"ಪೆದ್ದಾ! ಅದೇತಕ್ಕೋ ನಿನ್ನ ಬುದ್ಧಿ ಕೆಡುತ್ತ ನಡೆದಿದೆ. ನಿನಗೆ ಕಾಲವು ಒಳ್ಳೆಯದಿದ್ದಂತೆ ಕಾಣುವುದಿಲ್ಲ!"

"ಅದೇನೋ ಸರಿ! ಒಳ್ಳೆಯ ಕಾಲವನ್ನು ತಂದುಕೊಳ್ಳಬೇಕಾಗಿದೆ. ಎಂತಲೇ ಇವೆಲ್ಲ ಯತ್ನ-ಪ್ರಯತ್ನಗಳನ್ನು ನಡೆಯಿಸಿದ್ದೇನೆ."

"ಈ ಯತ್ನ-ಪ್ರಯತ್ನಗಳು ಒಳ್ಳೆಯ ಕಾಲವನ್ನು ಎಂದೆಂದೂ ತರಲಾರವು!"

"ನಿಮ್ಮ ಕಾಲಜ್ಞಾನವನ್ನು ಕೇಳುವುದಕ್ಕೆ ನನಗೆ ಮನಸ್ಸಿಲ್ಲ!"

"ಹಾಗಿದ್ದರೆ ಇದೋ! ಪ್ರತಿಜ್ಞೆಮಾಡಿ ಹೇಳುತ್ತೇನೆ ಕೇಳು! ನಾನು ಆ ದೀನರಾದ ಮಹಮ್ಮದೀಯರ ಪಕ್ಷಕ್ಕೆ ಸೇರಿಕೊಳ್ಳುತ್ತೇನೆ. ನಿನ್ನ ರಾಜಾಜ್ಞೆ ಅವರನ್ನು ಹೇಗೆ ಹೊರಕ್ಕೆ ಹಾಕುತ್ತದೆಯೋ ನೋಡಿ-ಬಿಡುತ್ತೇನೆ!"

ಪೆದ್ದರಾಯನ ಕೋಪವೂ ಎಲ್ಲೆಯನ್ನು ಮೀರಿತು. ಕಿಡಿಗಳನ್ನು ಕಾರಿದನವನು.

"ನಿನ್ನ ಬೆದರಿಕೆಗೆ ಸೊಪ್ಪುಹಾಕಲಿಕ್ಕೆ ನಾನೇನೂ ಆ ಕುರುಡ ಇಮ್ಮಡಿ ವಿರೂಪಾಕ್ಷನಲ್ಲ!"

"ಇಮ್ಮಡಿ ವಿರೂಪಾಕ್ಷನು ನೀನೇತಕ್ಕಾದಿಯೇ? ಮುಮ್ಮಡಿ-

ವಿರೂಪಾಕ್ಷನಲ್ಲವೇ ನೀನು? ಕೊನೆಯ ಮಾತನ್ನು ಹೇಳುತ್ತೇನೆ ಕೇಳು.. ಪೆದ್ದರಾಯಾ! ನಮ್ಮನಮ್ಮಲ್ಲಿಯೆ ಮಥನವುಂಟಾಗಿ, ಸಾಮ್ರಾಜ್ಯಕ್ಕೆ ಏನಾದರೂ ಅಳಿಗಾಲವನ್ನು ತಂದಿಟ್ಟೀಯೆ! ಯಾವುದನ್ನು ಮಾಡಬೇಕಾಗಿದ್ದರೂ ವಿವೇಕವನ್ನು ಸ್ವಲ್ಪ ವಿಚಾರಿಸುತ್ತಿರು! ಇಲ್ಲದಿದ್ದರೆ, ಅವಿವೇಕಕ್ಕೆ ಕಹಿ ಪರಿಣಾಮದ ತುತ್ತು ಕಟ್ಟಿಯಿಟ್ಟದ್ದಾಗಿದೆ. ಈಶ್ವರನಾಯಕರೇ! ನೀವಾದರೂ ಸ್ವಲ್ಪ ಸರಿಯಾದ ವಿಚಾರದ ಸಲಹೆಗಳನ್ನು ಕೊಡುತ್ತಿರಬೇಕೆಂದು.. ಬಿನ್ನವಿಸಿಕೊಳ್ಳುತ್ತೇನೆ ನಿಮಗೆ!"

ಇಷ್ಟು ನುಡಿದವನೆ ರಾಜಶೇಖರನು ಮಿಂಚಿನಂತೆ ಹೊರಟುಬಿಟ್ಟ. ಚಿಕ್ಕಣ್ಣನೂ ಆತನನ್ನು ಅನುಸರಿಸಿ ನಡೆದ. ಬಳಿಕ ಆರೇಳು ನಿಮಿಷಗಳವರೆಗೆ–ಅಲ್ಲಿ ಕುಳಿತಿದ್ದ ಇಬ್ಬರಲ್ಲಿ–ಯಾರೂ ಮಾತನಾಡಲಿಲ್ಲ. ಕೊನೆಗೆ ಈಶ್ವರನಾಯಕನೆ ಮೆಲ್ಲಗೆ ಕೇಳಿದ.

"ರಾಜಶೇಖರನ ದರ್ಪೋಕ್ತಿಗಳನ್ನು ಕೇಳಿದಿರಾ?"

"ಇಂತಹ ಪೊಳ್ಳು ಬೆದರಿಕೆಗಳಿಗೆಲ್ಲ ಬೆದರಿ ನಿಲ್ಲುತ್ತೇನೆಯೇ ನಾನು?"

"ಆತನು.. ಮಹಮ್ಮದೀಯರ ಪಕ್ಷಕ್ಕೆ ಸೇರಿಕೊಳ್ಳುತ್ತೇನೆಂದು ಆಣೆಯಿಟ್ಟು ಹೇಳಿದನಲ್ಲವೇ?"

"ಸೇರಿದರೆ ತನ್ನ ಕರ್ಮದ ಪಿಂಡವನ್ನು ತಾನು ತಿನ್ನುತ್ತಾನೆ. ರಾಜಕಾರ್ಯದಲ್ಲಿ – ಅಡಿಗಡಿಗೆ – ಹೀಗೆ ಮುಳ್ಳಾಗಿ ಒತ್ತುತ್ತ ಕುಳಿತರೆ ಕೇಳಬೇಕು ಯಾರು? ಮುರಿದು ಚಲ್ಲುವುದೇ ಮುಳ್ಳಿಗೆ ತಕ್ಕ ಶಿಕ್ಷೆ!"

"ತಮ್ಮ ಮಾತು ಸಾವಿರದಲ್ಲಿಯದೊಂದು ಸತ್ಯನೋಡಿ ದೊರೆಗಳೆ!"

ಬಳಿಕ ಇಬ್ಬರೂ ಪಿಸುಮಾತುಗಳಲ್ಲಿ ಕುಳಿತವರು, ಅರ್ಧಪ್ರಹರದವರೆಗೂ ಹಾಗೆಯೆ ಕುಳಿತಿದ್ದರು. ಈಶ್ವರನಾಯಕನು ಮನೆಗೆ ಹೊರಡಲಿಕ್ಕೆಂದು ಎದ್ದು ನಿಂತಿರುವಾಗ, ಪೆದ್ದರಾಯನು ಯಾವುದೋ ನಿರ್ಣಯಕ್ಕೆ ಬಂದಿದ್ದ ಭಾವದಲ್ಲಿ – ಮೆಲ್ಲಗೆ – ಹೇಳಿದನು.

"ಇಲ್ಲಿಯದೆಲ್ಲವನ್ನು ಬಗೆಹರಿಯಿಸಿಯೇ.. ಬಳಿಕ ಚಂದ್ರಗಿರಿಗೆ ಜನರನ್ನು ಕಳುಹಿಸೋಣವಂತೆ! ನನಗೆ ಕೊಡಬಾರದೆನ್ನುವ ಆತನ ಹಟವಾದರೂ ಎಂತಹದಿದೆಯೆಂಬುದನ್ನು ನೋಡಿಬಿಡೋಣ!"

---

## ೨೪ನೆಯ ಪರಿಚ್ಛೇದ

ರಾಜಧಾನಿಯ ನೈಋುತ್ಯದಿಸೆಯ ಕೊನೆಗಿರುವ ಪುಷ್ಕರಿಣಿಯ ದಂಡೆಯ ಮೇಲೆ, ದೊಡ್ಡದಾದ ಮಸೀದೆಯೊಂದು ಇದೆ. ಇದನ್ನು ವಿಜಯನಗರದ ಮಹಮ್ಮದೀಯರೆಲ್ಲರೂ ಪವಿತ್ರಸ್ಥಾನವೆಂದು ಎಣಿಸಿ ನಡೆಯುತ್ತಿರುವರು. ಮತಸಂಬಂಧವಾದ ಒಳಜಗಳಗಳೇನಾದರೂ ಉಂಟಾದಾಗ, ಈ ಮಸೀದೆಯಲ್ಲಿ ವಾಸವಾಗಿದ್ದ ಮೌಲವೀ-ಮುಲ್ಲಾಗಳ ನಿರ್ಣಯದಿಂದಲೆ ಅವು ಬಗೆಹರಿಯಬೇಕು. ಮಹಮ್ಮದೀಯರಲ್ಲದವರಿಂದ, ಯಾವ ಮಹಮ್ಮದೀಯನಿಗಾದರೂ ಧಾರ್ಮಿಕ ವಿಷಯದಲ್ಲಿ ಅಡಚಣೆಗಳು ಒದವಿದರೆ, ಅವನು ಇಲ್ಲಿಯ ಮುಖ್ಯ ಮೌಲವಿಗಳೆದುರು ದೂರುತರುವನು. ಆ ದೂರು ಸರಿಯಾದುದೆಂದು ಕಂಡುಬಂದರೆ, ಮೌಲವಿಗಳು ಆಧಿಪತ್ಯಕ್ಕೆ ಅರಿಕೆಮಾಡಿಕೊಂಡು, ರಾಜ್ಯಾಧಿಕಾರಿಗಳಿಂದ ತಪ್ಪುಗಾರರಿಗೆ ತಕ್ಕ ದಂಡನೆಗಳನ್ನು ಮಾಡಿಸುವರು. ಈ ಮೌಲವಿಗಳ ಅಭಿಪ್ರಾಯಕ್ಕೆ ಇದುವರೆಗಿನ ಆಧಿಪತ್ಯಗಳಲ್ಲಿಯೂ ವಿಶೇಷವಾದ ಮನ್ನಣೆ ದೊರೆಯುತ್ತಿದ್ದಿತು.

ಇಂದು ಅನೇಕ ಜನ ಮಹಮ್ಮದೀಯರು—ಈ ಮಸೀದೆಯ ಮುಂದಣ ಬಯಲಲ್ಲಿ—ಒಟ್ಟುಗೂಡಿದ್ದರು; ಯಾರ ಮುಖವನ್ನು ನೋಡಿದರೂ ಉತ್ಸಾಹವೇ ಕಾಣುತ್ತಿರಲಿಲ್ಲ. ದೊಡ್ಡದೊಂದು ಗಂಡಾಂತರದಲ್ಲಿ ಸಿಕ್ಕಿಬಿದ್ದಾಗಿನಂತಹ ಚಿಂತೆಯ ಜಾಡ್ಯವು, ಎಲ್ಲರ ಅಂಗಾಂಗಗಳನ್ನೂ ಶಕ್ತಿ-ಗುಂದಿಸಿಬಿಟ್ಟಿದೆ. ಯಾವನ ಬಾಯಲ್ಲಿಯೂ ನಿರಾಶೆಯು ತುಂಬಿತುಳುಕುತ್ತಿದ್ದ ಕಳವಳದ ಮಾತುಗಳೇ! ನೆರವಿಯ ಒಂದು ಬದಿಗೆ ಕುಳಿತಿದ್ದ ಹತ್ತಿಪ್ಪತ್ತು ಜನರ ಗುಂಪಿನಲ್ಲಿ, ಹೀಗೆ ಹೀಗೆ ವಿಚಾರ – ಚರ್ಚೆಗಳು ನಡೆದಿದ್ದುವು:

ಸಾರಂಗಿಯ ಸುಲ್ತಾನ್‌ಖಾನನು ಹೇಳಿದನು:

" ಏ ಕ್ಯಾ ಹೈ ಸಾಹೇಬ್ ! ಒಮ್ಮೆದೊಮ್ಮೆಲೆ ಖುದಾನು ನಮ್ಮ ಮೇಲೆ ಏತಕ್ಕಾಗಿ ಸಿಟ್ಟುಗೊಂಡಿದ್ದಾನಾದೀತು ? ನೋಡಿ! ನಮ್ಮ ಬೀಬೀ ನಿನ್ನೆ ತಾನೇ – ಅವಳಿ ಜವಳಿ – ಮಕ್ಕಳನ್ನು ಹೆತ್ತಿದ್ದಾಳೆ. ಈಗ. . ಇನ್ನು ಎರಡು ಮೂರು ದಿನಗಳಲ್ಲಿಯೆ ಊರನ್ನು ಬಿಟ್ಟು ಹೋಗಬೇಕೆಂದರೆ, ಹೋಗುವುದಾದರೂ ಹೇಗೆ. . ? "

ಜರಿಯ ಕೆಲಸ ಮಾಡುತ್ತಿದ್ದ ಜಲಾಲ್ ಉದ್ದೀನನು ತನ್ನ ದುಃಖ

ಹೇಳಲಿಕ್ಕೆ ತೊಡಗಿದ.

"ನಮ್ಮ ಸಂಸಾರದ ಕತೆ ಏನು ಹೇಳಬೇಕು ಸಾಹೇಬ್! ಮನೆಯಲ್ಲಿ ನಮ್ಮ ತಾಯಿ ರೋಗದಿಂದ ನೆಲಹಿಡಿದಿದ್ದಾಳೆ. ತಂದೆಗೆ ಮುಪ್ಪಿನ ಮೂಲಕ ಕಣ್ಣುಗಳು ಹೋಗಿ ಬಿಟ್ಟಿವೆ. ಇಂದು ಇಲ್ಲಿಯ ಉದ್ಯೋಗಬಿಟ್ಟು ಹೊರಟು ನಡೆದರೆ, ನಾಳೆಗೇ ನಮಗೆಲ್ಲ ಹೊಟ್ಟೆಗಿಲ್ಲದೆ ಸಾಯುವ ಸಂದರ್ಭ ಬರುತ್ತದೆ. ಈಗ ಏನು ಮಾಡಬೇಕೆಂಬುದನ್ನೇ ನಾನು ತಿಳಿಯದವನಾಗಿದ್ದೇನೆ."

ಅತ್ತಾರ್ ಅಕ್‌ಬರ್‌ಷಹನು ಹೇಳಿದ.

"ನನ್ನ ಪಾಡನ್ನು ಕೇಳುತ್ತೀರಾ ನೀವು? ಕೈಯಲ್ಲಿದ್ದ ಬಂಡವಾಳವನ್ನೆಲ್ಲ ಇಲ್ಲಿಯ ಹೂದೋಟಗಾರರ ಮೇಲೆ ಹಾಕಿಬಿಟ್ಟಿದ್ದೇನೆ. ಇನ್ನು ನಾಲ್ಕೈದು ದಿನ ಮಾತ್ರ ಬಿಟ್ಟರೆ, ಮುನ್ನೂರು ಹೊನ್ನುಗಳ ಬೆಲೆ ಬರುವಷ್ಟು ಗುಲಾಬಿ, ಸಂಪಿಗೆ, ಮಲ್ಲಿಗೆಗಳ ಅತ್ತರುಗಳು ಸಿದ್ಧವಾಗುವಂತೆ ಭಟ್ಟಿಯನ್ನು ಏರಿಸಿ ಇಟ್ಟಿದ್ದೇನೆ. ಈಗ ಒಮ್ಮೆಲೆ ಹೊರಟು ಬಿಡುವುದೆಂದರೆ ಫಕೀರನಾಗಿಯೇ ಹೊರಡಬೇಕು!"

ಮೊಟ್ಟೆಗಾರ ಮೋಹಿದ್ದೀನ್‌ಖಾನನು ಹೇಳಿದ.

"ಅದನ್ನೇನು ಮಾಡುತ್ತೀರಿ ಸಾಹೇಬ್! ನನ್ನ ಮನೆಯಲ್ಲಿ.. ಹತ್ತು ಸಾವಿರದಷ್ಟು ಸಾಕಿದ್ದೇನೆ.. ಕೋಳಿಗಳನ್ನ! ಅವುಗಳನ್ನೆಲ್ಲ ಹೊತ್ತುಕೊಂಡು ಹೋಗುವುದು ಹೇಗೆ.. ನೀವೇ ನೋಡಿ! ಮೊಟ್ಟೆಗಳನ್ನೇನೋ, ಒಂದು ಬೆಲೆ ಬರುವುದನ್ನು ಅರ್ಧಬೆಲೆಗೆ ಹೇಗಾದರೂ ಕೊಟ್ಟು ಬಿಡಬಹುದು.. ಎನ್ನಿ!"

ಇಂತಹ ಮರುಕದ ಪ್ರಸಂಗದಲ್ಲಿಯೂ ನಗೆಯಾಟವಾಡಬೇಕೆಂಬ ನಿಶ್ಚಿಂತ ಮನದವರು ಇರುವರೇನೋ! ಚಾಂದಖಾನನು ನಗುನಗುತ್ತ ಹೇಳಿದ.

"ಮೋಹುದ್ದೀನಜೀ! ನೀವು ಹೀಗೆ ಮಾಡಿಬಿಡಿ; ಎಂದರೆ ಕೋಳಿಗಳನ್ನು ಹೊತ್ತುಕೊಂಡು ಹೋಗುವ ತೊಂದರೆಯೆ ಇಲ್ಲದಂತಾಗುವುದು.. ನಿಮಗೆ! ಪಟ್ಟಣದಲ್ಲಿಯ ಪ್ರತಿಯೊಬ್ಬ ಮುಹಮ್ಮದೀಯನ ಮನೆಗೂ ಒಂದೊಂದರಂತೆ ಕೋಳಿಗಳನ್ನು ಹಂಚಿಬಿಡಿ! ಹೋಗುವಾಗ ಎಲ್ಲರೂ – ಪಾಪ! – ಹಬ್ಬಮಾಡಿ, ಹೊಟ್ಟೆತುಂಬ ಉಂಡುಹೋಗಲಿ!"

ಕುಳಿತಿದ್ದವರೆಲ್ಲರೂ ಸಕ್ಕುಬಿಟ್ಟರು. ಬಳಿಕ ಗರಡಿಮನೆಯ ಉಸ್ತಾದ್ ರಹಮಾನ್ ಖಾನನು ಮಾತನಾಡಲಿಕ್ಕೆ ಆರಂಭಿಸಿದ.

"ಈಗ ಇಲ್ಲಿ..ನಮ್ಮ ಸುಲ್ತಾನರ ರಾಜ್ಯವಿದ್ದದ್ದಾಗಿದ್ದರೆ..ನಮ್ಮ ತಾಲೀಮಿನಲ್ಲಿಯ ಪೆಹೆಲ್‌ವಾನ್‌ರನ್ನೆಲ್ಲ ಕೂಡಿಕೊಂಡು, ಒಬ್ಬೊಬ್ಬ ಕಾಫರ್‌ನನ್ನೂ ಹಿಡಿದು, ಗಂಟಲನ್ನೊತ್ತಿ, ಪಡಚಾ ಮಾಡಿಬಿಡುತ್ತಿದ್ದೆ. ಆದರೆ ಮಾಡಬೇಕೇನು? ಅವರದೇ ರಾಜ್ಯ; ಅವರದೆ ಕಾರಭಾರ! ನಾವೀಗ ಏನಾದರೂ ದುಡುಕಿದರೆ, ಬಂತು ಪ್ರಾಣಕ್ಕೆ ಸಂಚಕಾರ! ಅಯ್ಯೋ, ಇದು ಮಹಮ್ಮದೀಯರ ಮುಲುಖಾಗಿದ್ದರೆ..!"

ಕೋಳಿಯ ಸಾಹೇಬರಿಗೆ ಸಲಹೆ ಕೊಟ್ಟಿದ್ದ ಚಾಂದ್‌ಸಾಹೇಬನೇ ರಹಮಾನನಿಗೆ ಉತ್ತರಕೊಟ್ಟ.

"ನೀನೇ ಸುಲ್ತಾನನಾಗಿ ಬಿಟ್ಟಿದ್ದರೆ ಹೇಗಿರುತ್ತಿತ್ತು ರಹಮಾನ್! ಅಲ್ಲವಪ್ಪಾ! ಮಾತನಾಡುವುದಾದರೂ ಏನು ನೀನು? ಇದು ಮಹಮ್ಮದೀಯರದೇ ಮುಲುಖಾಗಿದ್ದರೆ.. ನಮಗೆಲ್ಲ ಇಂತಹ ಪ್ರಸಂಗ ಬರುತ್ತಿದ್ದಿತಾದರೂ ಏತಕ್ಕೆ?"

ಚಾಂದಖಾನನ ಮಾತನ್ನು ಲಕ್ಷ್ಯಕ್ಕೆ ತಾರದೆ ರಹಮಾನನು ಹೇಳಿದ.

"ನಾವೆಲ್ಲರೂ ಕಲಬುರ್ಗಿಗೆ ಹೋಗಿ, ಅಲ್ಲಿಯ ಸುಲ್ತಾನರೊಡನೆ ಸೇರಿಕೊಳ್ಳಬೇಕು! ಆ ಮೇಲೆ ಈ ಸೈತಾನರ ರಾಜ್ಯವನ್ನು ಗೊತ್ತಿಗೆ ಹಚ್ಚುವ ಉದ್ಯೋಗಕ್ಕೇ ಸೊಂಟಕಟ್ಟಬೇಕು."

"ಮೊದಲು ಈ ಸೈತಾನರ ರಾಜ್ಯದಿಂದ ಹೊರಟುಹೋದಾಗಲೇ ಅಲ್ಲವೇ.. ಮುಂದಿನ ಮಾತು?"

ಸಮೀಪದಲ್ಲಿಯೆ ಕುಳಿತಿದ್ದ ಬಿಳಿಯ ಗಡ್ಡದ ಮುದುಕನೊಬ್ಬ ಹೇಳಿದ.

"ಸುಮ್ಮಸುಮ್ಮನೆ ಯಾತಕ್ಕಪ್ಪಾ–ಎಲ್ಲರನ್ನೂ ಸೈತಾನರೆಂದು ಬೈಯಬೇಕು? ನಮ್ಮ ಜನರಲ್ಲಿಯೂ ಒಬ್ಬೊಬ್ಬರು ಕೆಟ್ಟವರು ಹುಟ್ಟುವುದಿಲ್ಲವೇ? ನಮ್ಮನ್ನೆಲ್ಲ ಹೆತ್ತು, ಹೊತ್ತು, ಇದುವರೆಗೆ ಸಾಕಿದುದು.. ಇದೇ ಕರ್ಣಾಟಕ ರಾಜ್ಯವೇ ಅಲ್ಲವೇ? ಸ್ವಲ್ಪ ಸುಮ್ಮಗೆ ಇರಿ! ಮೌಲವೀ ಸಾಹೇಬರು ಹೋಗಿದ್ದಾರೆ; ಅಣ್ಣಾಜೀ ಸಾಹೇಬರು ಅವರನ್ನೇನೂ ಹಾಗೆಯೆ ನಿರಾಶರನ್ನಾಗಿ ಮಾಡಿ ಕಳುಹಿಸಲಿಕ್ಕಿಲ್ಲ! ಏನಾದರೂ

ಹಾದಿಯನ್ನು ಹೇಳಿಕೊಟ್ಟಾರು!"

ಮುದುಕ ಇಸ್ಮೂ ಮಾತನಾಡುತಿರುವಾಗಲೆ ಮೌಲವೀಸಾಹೇಬರು ಅಲ್ಲಿಗೆ ಬಂದರು. ಜನರೆಲ್ಲರೂ ಅವರು ತಂದಿದ್ದ ವರ್ತಮಾನವನ್ನು ಕೇಳುವುದಕ್ಕಾಗಿ, ಕುತೂಹಲಿಗಳಾಗಿ ಕುಳಿತುಕೊಂಡರು. ಇದುವರೆಗೆ ಕಲಕಲಿಸುತ್ತಿದ್ದ ನೆರವಿಯಿಾಗ ನಿಶ್ಶಬ್ದವಾಗಿ ಕುಳಿತಿತು. ಮೌಲವಿಗಳು ಮಸೀದೆಯ ಮುಂಜಗುಲಿಯ ಮೇಲೆ- ಎಲ್ಲರಿಗೂ ಕಾಣುವಂತೆ ನಿಂತು - ಕೂಗಿ ಕೂಗಿ - ಮಾತನಾಡಲು ತೊಡಗಿದರು.

"ಬಂಧುಗಳೇ!"

"ಅಣ್ಣಾಜಿಯವರು ನಮ್ಮ ವಿಷಯದಲ್ಲಿ ಎಷ್ಟೆಷ್ಟೋ ಪ್ರಯತ್ನಗಳನ್ನು ಮಾಡಿದರು. ಕೊನೆಗೆ ದೊರೆಗಳ ವರೆಗೂ ಹೋಗಿ ಮಾತನಾಡಿ ಬಂದರು. ಆದರೆ ದೊರೆಗಳು ತಮ್ಮ ಹುಕುಮನ್ನು ಹಿಂದೆಗೆದುಕೊಳ್ಳಲಿಕ್ಕೆ ಒಪ್ಪಲಿಲ್ಲ. ಈಗ ಅಣ್ಣಾಜಿಯವರು ನಮ್ಮೆಲ್ಲರಿಗೂ ಒಂದು ಮಾತನ್ನು ಹೇಳಿಕಳುಹಿಸಿದ್ದಾರೆ: 'ಏನಾದುದನ್ನು ಸುಮ್ಮಗೆ ಸಹಿಸಿಕೊಳ್ಳಿ! ವಿಜಯನಗರವನ್ನು ಬಿಟ್ಟು ಯಾರೂ ಹೊರಕ್ಕೆ ಹೋಗದೆ ಇರಿ!' ಎಂದು. ನಮಗೆ ಹೋಗದೆ ಇದ್ದರೂ ಕಷ್ಟವಿದೆ! ಹೋದರೂ ಕಷ್ಟವಿದೆ! ಹೀಗಿರುವಾಗ, ಇಲ್ಲಿಯೆ ಎಲ್ಲರೂ ಇದ್ದುಕೊಂಡು, ಒದಗುವ ಕಷ್ಟನಷ್ಟಗಳಿಗೆ ನಾವೆಲ್ಲರೂ ಒಮ್ಮೊಗದಿಂದ ಎದುರಾಗಿ ನಿಂತುಬಿಡೋಣ! ಅಣ್ಣಾಜಿಯವರ ಬೆಂಬಲವು ನಮಗೆ ಪೂರ್ಣವಾಗಿ ಇದೆ. ಆದುದರಿಂದ ನಮ್ಮ ಜನರಲ್ಲಿ ಯಾರೂ ರಾಜಧಾನಿಯನ್ನು ಬಿಟ್ಟು ಹೊರಡುವುದು ಬೇಡ! ನಾವೆಲ್ಲರೂ ಸಮಾಧಾನ-ಸಹನೆಗಳಿಂದ ನಡೆದುಕೊಳ್ಳುತ್ತೇವೆಂದು, ಎಲ್ಲರ ಪರವಾಗಿಯೂ ನಾವು ಅಣ್ಣಾಜಿಯವರಿಗೆ ಮಾತುಕೊಟ್ಟು ಬಂದಿದ್ದೇವೆ. ಅವರ ಅಭಿಪ್ರಾಯದಂತೆ ನಾವು ಎಲ್ಲರೂ ಒಗ್ಗಟ್ಟಾಗಿ ನಡೆದರೆ, ನಿಜವಾಗಿಯೂ ನಮಗೆ ಒಳ್ಳೆಯ ಕಾಲವು ಬರುವುದು."

ಮೌಲವಿಯವರ ಮಾತಿಗೆ ನೆರೆದ ನೆರವಿಯೆಲ್ಲವೂ ಸಮ್ಮತಿಯ ತಲೆಯನ್ನು ಕೊಟ್ಟಿತು. ವಿಜಯನಗರವನ್ನು ಬಿಟ್ಟು ಯಾರೂ ಹೋಗಬಾರದೆಂಬ ಮಾತು, ಪ್ರತಿಯೊಬ್ಬನಿಗೂ ಯುಕ್ತಿಯುಕ್ತವೆನಿಸಿತು. ಎಲ್ಲರೂ ಆ ಮಾತನ್ನು ಒಪ್ಪಿಕೊಂಡು, ತಮ್ಮ ತಮ್ಮ ಬೀಡುಗಳ ಕಡೆಗೆ ನಡೆದರು.

---

## ೨೫ನೆಯ ಪರಿಚ್ಛೇದ.

ಇಂದು ಪೆದ್ದರಾಯನು – ತಾನಾಗಿಯೆ – ತನ್ನ ಕಡೆಗೆ ಬಂದುದನ್ನು ಕಂಡಾಗ, ರತ್ನಾಂಬಿಕೆಯ ಹಿಗ್ಗು ಎದೆಯನ್ನು ಹಿಡಿಸದೆ ಹೋಯಿತು. ಬಂದಿದ್ದ ಅವನನ್ನು ಅದೆಷ್ಟೋ ಆದರದೊಂದಿಗೆ ಬರಮಾಡಿಕೊಂಡಳು. ಆತನಿಗೆ ಎಷ್ಟೆಷ್ಟೋ ಪ್ರೀತಿಯ ಉಪಚಾರಗಳನ್ನು ಸಲ್ಲಿಸಿದಳು. ಇಬ್ಬರೂ ಕುಳಿತು, ಹಲವು ಬಗೆಯ ಮಾತುಗಳನ್ನಾಡಿ ನಕ್ಕು ಕೆಲೆದರು. ಆದರೆ ಅಂದಿನ ಅವರ ಮಾತಿನ ಕೊನೆಯ ಭಾಗದಲ್ಲಿ, ರಾಜಶೇಖರನ ವಿಷಯದಲ್ಲಿ ಪೆದ್ದರಾಯನು ಆಡುತ್ತಿದ್ದ ಕಹಿಮಾತುಗಳನ್ನು ಕೇಳುತ್ತಿರುವಾಗ ಮಾತ್ರ, ರತ್ನಾಂಬಿಕೆಯ ಮನಸ್ಸು ಅಸ್ಥಿರವಾದ ಸಾಗರದಂತಾಯಿತು. ತಾನು ಆಗ..ರಾಜಶೇಖರನಿಗೆ ಅನುಕೂಲವಾದ ಮಾತುಗಳನ್ನು ಹೇಳಿ, ಪೆದ್ದರಾಯನ ಮನಸ್ಸನ್ನು ತಿಳಿಯಾಗಿಸಬೇಕೋ..? ಪ್ರತಿಕೂಲವಾದ ಮಾತುಗಳನ್ನು ಹೇಳಿ, ಅದನ್ನು ಇನ್ನಿಷ್ಟು ಕದಡಿಬಿಡಬೇಕೋ..? ಎಂಬುದನ್ನು ತಿಳಿಯದವಳಾದಳು. ಎಂತಲೆ ಪೆದ್ದರಾಯನು ಆಡಿದ ಕಹಿಮಾತುಗಳನ್ನೆಲ್ಲ–ವ್ಯೆಯಿಂದ ಮಾತ್ರ ಸುಮ್ಮಗೆ ಇದ್ದು – ಕೇಳಿಕೊಂಡಳು. ಆದರೆ ಆತನು ಹೊರಡುವುದಕ್ಕೆಂದು ಎದ್ದು ನಿಂತಿರುವಾಗ ಆಡಿದ 'ಅಣ್ಣಾಜಿಯ ಅವತಾರಸಮಾಪ್ತಿಯ ವರ್ತಮಾನವನ್ನು ಇಷ್ಟರಲ್ಲಿಯೆ ಕೇಳುತ್ತೀಯೇ ನೀನು.. ರತ್ನಾ!' ಎಂಬ ಮಾತು – ರತ್ನಾಂಬಿಕೆಯ ಕರುಳನ್ನು – ನೂರಾರು ಮುಳ್ಳಿನ ಮೊನೆಗಳಾಗಿ ಚುಚ್ಚಿತು. ಆಗ ಅವಳು ಏನನೋ ಹೇಳಬೇಕೆಂದು ಮುಖವನ್ನು ಮೇಲಕ್ಕೆತ್ತುವುದರೊಳಗಾಗಿಯೆ ಪೆದ್ದರಾಯನು ಹೊರಟು ಹೋಗಿಬಿಟ್ಟಿದ್ದನು.

ರಾಯನು ಹೊರಟುಹೋದಾಗಿನಿಂದಲೂ ರತ್ನಾಂಬಿಕೆಯ ಮನಸ್ಸುಹೃದಯಗಳಿಗೆ ಹುರುಕು ಹತ್ತಿದಂತಾಗಿದ್ದಿತು. ಅವಳಿಗೆ ಎಲ್ಲಿ ಕುಳಿತರೂ ಸಮಾಧಾನವಿಲ್ಲ; ಎಲ್ಲಿ ನಿಂತರೂ ಸಮಾಧಾನವಿಲ್ಲ. 'ಹೊನ್ನಮ್ಮನನ್ನು ಕಳುಹಿಸಿ, ಮತ್ತೊಮ್ಮೆ ಪೆದ್ದರಾಯನನ್ನು ಕರೆಯಿಸಿಕೊಳ್ಳಲೇ?' ಎಂಬ ಯೋಚನೆ – ನಾಲ್ಕಾರುಸಲ – ಅವಳ ತಲೆಯಲ್ಲಿ ಸುಳಿಸುಳಿದು ಹೋಯಿತು. ರತ್ನಾಂಬಿಕೆಯು ಕದಡಿದ ಭಾವನೆಯುವಳಾಗಿ ಬಿದ್ದುಕೊಂಡಿರುವಾಗ, ಹೊನ್ನಮ್ಮ ನಾಲ್ಕೈದು ಸಲ ಬಂದು ಬಂದು, ಏನೇನನೋ ಕೇಳಿದಳು.

ಆದರೆ ರತ್ನಾಂಬಿಕೆಯಿಂದ ಸರಿಯಾದ ಉತ್ತರಗಳೇ ಸಿಕ್ಕಲಿಲ್ಲ. ತನ್ನ ಒಡತಿಯ ಬದುಕಿನಲ್ಲಿ ಇದೇ ಬಗೆಯ ಅನೇಕ ದಿನಗಳನ್ನು ಕಂಡಿದ್ದ ಹೊನ್ನಮ್ಮನು, ಈ ದಿನವನ್ನೂ ಅವುಗಳ ಜೊತೆಗೆ ಸೇರಿಸಿ, ತನ್ನಷ್ಟಕ್ಕೆ ತಾನು ಸುಮ್ಮಗಿದ್ದು ಬಿಟ್ಟಳು. ರತ್ನಾಂಬಿಕೆಗೆ ಇನ್ನೆಲ್ಲಿಯೂ ಕುಳಿತಿರುವುದಕ್ಕೆ ಮನಸ್ಸಾಗದೆ, ಮಲಗುಮನೆಗೆ ಹೋಗಿ ಮಂಚದ ಮೇಲೆ ಬಿದ್ದುಕೊಂಡಳು. ಆಗ ಆಕೆಯ ಮನಸ್ಸು ಹೀಗೆ ಹೀಗೆ ವಿಚಾರಮಾಡುವುದರಲ್ಲಿದ್ದಿತು.

"ರಾಜಶೇಖರನ ವಿಷಯದಲ್ಲಿ ರಾಯಾಜಿಯ ಮನಸ್ಸು ಇಷ್ಟೊಂದು ಕೆಟ್ಟುಹೋಗುವಂತೆ, ಈಶ್ವರನು ಏನೇನು ಆಟಗಳನ್ನು ಹೂಡಿಬಿಟ್ಟಿದ್ದಾನೋ ಯಾರು ಬಲ್ಲರು ! ಈಗ ನಾನು ಏನನಾದರೂ ಹೇಳಲಿಕ್ಕೆ ಹೋದರೆ, ನನ್ನ ಮಾತುಗಳನ್ನಾದರೂ ನಂಬುವಷ್ಟು ಸಮತೆಯ ಮನಸ್ಸು. . ಇದೆಯೋ ಇಲ್ಲವೋ ರಾಯಾಜಿಗೆ ! ಅಂದು . . ಮೊದಲೊಂದು ದಿನ, ನನ್ನೊಡನೆ ಮಾತನಾಡುತ್ತಿದ್ದಾಗ, ರಾಜಶೇಖರನು ಆತನಿಗೆ ರಾಜರ್ಷಿಯಾಗಿದ್ದ; ಇಂದು ಅದೇ ರಾಜಶೇಖರನು ರಾಕ್ಷಸನಾಗಿ ನಿಂತಿದ್ದಾನೆ. ಯಾವುಯಾವುದೋ ಹಂಬಲುಗಳ ಬೆಂಬತ್ತಿದ್ದ ನನಗೆ, ಈಶ್ವರನ ಮೋಸದ ಆಟಗಳು ಮೊದಲಿಗೆಯೆ ಗೊತ್ತಾಗಲಿಲ್ಲ ; ಗೊತ್ತಾಗಬಹುದಾಗಿದ್ದಿತಾದರೂ, ಅತ್ತಕಡೆಗೆ ನಾನು ಬೇಕಾಗಿಯೆ ಅಲಕ್ಷ್ಯವನ್ನು ತೋರಿಸಿದೆ. ಅಲ್ಪಸ್ವಲ್ಪ ಗೊತ್ತಾದರೂ, ಮುಯ್ಯಿಗೆ ಮುಯ್ಯನ್ನು ತೀರಿಸಬೇಕೆಂದಿದ್ದ ನನ್ನ ಹುಚ್ಚು. . ನನ್ನನ್ನು ಮೂಗುವಡಿಸಿಬಿಟ್ಟಿತು. ಇಷ್ಟು ಬೇಗನೆ - ಪೆದ್ದರಾಯನ ಮನಸ್ಸು - ಈ ಮಟ್ಟಕ್ಕೆ ಏರಬಹುದೆಂದು ನನಗೆ ಎನಿಸಿರಲಿಲ್ಲ. ಅಕ್ಕಮ್ಮ ಜೀವಿಸಿದ್ದಾಗ, ನನಗೆ ಆಗಾಗ ಹೇಳುತ್ತಿದ್ದಳು: 'ರತ್ನಾ ! ನೀನು ಈಶ್ವರನನ್ನು ಮಾತ್ರ ಎಂದೂ ನಂಬದೆ ಇರು ! ಅವನು ಮಹಾಸ್ವಾರ್ಥಿಯಿದ್ದಾನೆ !' ಎಂದು. ಆದರೆ ನಾನು, ಅವಳ ಮಾತನ್ನು ಅಷ್ಟೊಂದು ಮನಸ್ಸಿಗೆ ತಾರದೆ– ನನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿಕೊಳಬೇಕಾದ ಕಾರ್ಯದಲ್ಲಿ– ನಾನಾಗಿ ಅವನನ್ನು ಪೆದ್ದರಾಯನಿಗೆ ಜೊತೆಗಾರನನ್ನಾಗಿ ಮಾಡಿಕೊಟ್ಟೆ. ಅಂತೂ ಈಶ್ವರನು ತಂತ್ರಗಾರನೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ ! ಏನೇನೋ ಮಾಡಿ, ದಂಡನಾಯಕನಾಗಬೇಕೆಂಬ ತನ್ನ ಆಕಾಂಕ್ಷೆಯನ್ನು ಕೊನೆಗೂ ಪೂರಯಿಸಿಕೊಂಡು ಬಿಟ್ಟ. ಇನ್ನುಮುಂದೆಯೂ ಏನೇನು ಮಾಡುವನೋ

ಯಾರು ಬಲ್ಲರು ! ನಾನಿನ್ನು ಉಪಾಯವಾಗಿ ಆ ಈಶ್ವರನಾಯಕನ ಪ್ರತಿಯೊಂದು ಕಾರ್ಯದ ಕಡೆಗೂ ಕಣ್ಣಿಟ್ಟು ನಡೆಯಬೇಕು. ಪೆದ್ದರಾಯನಿಗೆ ಆತನ ತಂತ್ರವೆಲ್ಲ ತಿಳಿಯುವಂತೆ ಮಾಡಿ, ರಾಜಶೇಖರನ ವಿಷಯದಲ್ಲಿ ಪ್ರಕ್ಷುಬ್ಧವಾಗಿದ್ದ ಆತನ ಮನಸ್ಸನ್ನು ಸಮಾಧಾನಗೊಳಿಸುವ ಹವಣಿಕೆಗೆ ನಾನಿನ್ನು ಹತ್ತಿಕೊಳಬೇಕು ! ಏನೋ ! ಬೇರೆಯೊಂದು ವಿಧದಲ್ಲಿ ನನ್ನ ಬದುಕನ್ನು ಹೊಂದಿಸಿಕೊಳ್ಳಬೇಕೆಂಬ ನಿರ್ಣಯದಲ್ಲಿದ್ದೇನೆ. ಹೀಗಿರುವಾಗ ವ್ಯರ್ಥವಾಗಿ – ರಾಜಶೇಖರನಲ್ಲಿ ನಾನು – ನಾಗಿಣಿಯ ದ್ವೇಷವನ್ನು ಹಿಡಿಯುವುದರಲ್ಲಿ ಪ್ರಯೋಜನವಾದರೂ ಏನು ? ಸದ್ಯಕ್ಕೆ ಈಶ್ವರನು ಪೆದ್ದ-ರಾಯನ ಮನಸ್ಸನ್ನು ಕೆಡಿಸಿದ್ದ ವಿಷಯವೆಲ್ಲ ರಾಜಶೇಖರನಿಗೆ ತಿಳಿಯು-ವಂತೆ ಮಾಡಬೇಕು. ಕದಡಿಹೋಗಿದ್ದ ರಾಯನ ಮನಸ್ಸು ಪೂರ್ಣವಾಗಿ ತಿಳಿದುಕೊಳ್ಳುವವರೆಗೆ, ಸ್ವಲ್ಪ ಜಾಗ್ರತೆಯಾಗಿ ಇರುವಂತೆ ಆತನಿಗೆ ಸೂಚನೆ ಕೊಟ್ಟುಬಿಡಬೇಕು. "

* * * *

" ರಾಯಾಜಿಯು ಆಡಿದ ಇಂದಿನ ಮಾತುಗಳನ್ನು ಕೇಳಿದರೆ, ಆತನು ಒಂದುಬಗೆಯ ನಿರ್ಣಯಕ್ಕೆ ಬಂದು ನಿಂತಿದ್ದಾನೆ – ಎಂದು ತೋರುವುದು. ಈ ಮಾತು ನನಗೆ ತಿಳಿದು-ತಿಳಿದೂ ಸುಮ್ಮಗೆ ಕುಳಿತುಕೊಳ್ಳುವುದೆಂದರೆ – ಏನಾದರೂ ಹೆಚ್ಚುಕಡಿಮೆಯಾದಲ್ಲಿ – ಆ ಪಾತಕದ ಹೊರೆಗೆ ನಾನೂ ಗುರಿಯಾಗಿ ನಿಂತಂತಾಗುವುದು. ಪೆದ್ದರಾಯನು ಆಡಿದ್ದ ಮಾತಿನ ವಿಚಾರ-ವನ್ನೆಲ್ಲ – ಇಂದೆಯೆ ಹೋಗಿ – ರಾಜಶೇಖರನಿಗೆ ಹೇಳಿಬರಲೇ ? "

* * * *

" ಎಂದೆಂದೂ ತನ್ನ ಕಡೆಗೆ ಬರಲಾಗದೆಂದು ಹೇಳಿದ್ದಾನಲ್ಲವೇ . . ನನಗೆ ರಾಜಶೇಖರ ! ನಾನೀಗ ಅಲ್ಲಿಗೆ ಹೇಗೆ ಹೋಗಬೇಕು . . ? ಹೋಗಿ ಹೇಳಿದರೂ ಆತನಿಗೆ ನನ್ನ ಮಾತಿನಲ್ಲಿ ಭರವಸೆಯಾದರೂ ಹುಟ್ಟಬಹುದೇ . . ? ರೋಷದ ಆವೇಶದಲ್ಲಿ – ಅಂದು – ಬೇಕುಬೇಕಾದ ಹಾಗೆ ಆತನಿಗೆ ಮಾತನಾಡಿ, ಬೈದು ಬಂದಿದ್ದೇನೆ. ಹಾಗೆಲ್ಲ ಮಾತನಾಡಿದ್ದ ಇದೇ ಮುಖವನ್ನು ರಾಜಶೇಖರ-ನಿಗೆ ಮರಳಿ ತೋರಿಸುವುದಾದರೂ ಹೇಗೆ ? . . . . ಏನೇ ಆಗಲಿ ! ಯಾವ ಮುಖದಿಂದಲಾದರೂ ನಾನಿಂದು–ಈ ವರ್ತಮಾನವನ್ನು–ಆತನಿಗೆ ಕೊಟ್ಟೇ

ತೀರಬೇಕು! ಓಲೆಬರೆದು ಹೊನ್ನಮ್ಮನೊಡನೆ ಕಳುಹಿಸಿಕೊಡಲೇ..? ನಾನು ಹೀಗೆ ಕಳುಹಿಸಿದ ಸುದ್ದಿ ಎಲ್ಲಿಯಾದರೂ ಪೆದ್ದರಾಯನಿಗೆ ತಿಳಿದುಬಿಟ್ಟರೆ..! ಸಂದರ್ಭ..ಇಲ್ಲದ ರಗಳೆಗೆ ಇಟ್ಟೀತು! ಮತ್ತೆ ನನ್ನ ಬದುಕು ಕಾಡುಗೂಡಿ ಹೋದೀತು! ಹೊನ್ನಮ್ಮನನ್ನು ಕಳುಹಿಸುವುದೂ ಬೇಡ; ಇನ್ನಾರನ್ನು ಕಳುಹಿಸುವುದೂ ಬೇಡ! ಇದೊಂದು ಬಾರಿಯೂ ನಾನೇ ಶಾಂತಿಕುಟೀರದ ವರೆಗೆ ಹೋಗಿ ಬರಬೇಕು! ಸರಿ! ಹೋಗಲಿಕ್ಕೆ ಇದೊಂದು ಒಳ್ಳೆಯ ನೆಪ-ವನಗೆ! ಇಂದೆಯೇ ಹೋಗಲೆ..?"

*　　*　　*　　*

ದೀಪಹತ್ತಿಸುವ ವೇಳೆಯಾದುದರಿಂದ ಊಳಿಗದವಳು ಬಂದು, ಮಲಗುಮನೆಯಲ್ಲಿಯೂ ದೀಪವನ್ನು ಅಂಟಿಸಿಟ್ಟು, ಹೊರಟುಹೋದಳು. ಆಗಲೂ ರತ್ನಾಂಬಿಕೆಯು ಹಾಸಲ್ಲಿಯೇ ಹಾಸಿಕೊಂಡಿದ್ದಳು. ಹೊನ್ನಮ್ಮ ಬಂದು ಊಟಕ್ಕೆ ಎಬ್ಬಿಸಿದರೆ 'ನಾನಿಂದು ಊಟವನ್ನು ಒಲ್ಲೆ' ಎಂದು ಹೇಳಿ ಕಳುಹಿಸಿಬಿಟ್ಟಳು.

*　　*　　*　　*

ರಾತ್ರಿಯ ಒಂಬತ್ತುಗಳಿಗೆಗಳು ಕಳೆದುಹೋಗಿರಬಹುದು; ಆಗ ರತ್ನಾಂಬಿಕೆ ಒಮ್ಮೆಲೆ ಮೇಲಕ್ಕೆದ್ದಳು. ರಾತ್ರಿಯಲ್ಲಿ ಹೊರಕ್ಕೆ ಹೋಗ-ಬೇಕಾದಾಗಿನ ತನ್ನ ಉಡುಪು-ತೊಡಪುಗಳನ್ನು ಅಳವಡಿಸಿಕೊಂಡಳು. ಇನ್ನು ಹೊರಟುಬಿಡಬೇಕೆಂದು ಅಡಿಯನ್ನೆತ್ತಿ ಮುಂದೆ ಇಡುತ್ತಿರುವಾಗಲೆ ತಡೆದುನಿಂತು, ಯೋಚನೆಗೆ ಆರಂಭಿಸಿದಳು.

"ರಾಜಶೇಖರನನ್ನು ಕಾಣಬೇಕೆಂದರೆ, ಅದೇತಕ್ಕೋ ನನ್ನೆದೆ..ಎಡೆ-ಬಿಡದೆ ದಡದಡಿಸುತ್ತಲಿದೆ! ಆತನನ್ನು ಕಾಣುವುದು ಬೇಡವೇಬೇಡ ನಾನು! ನಾಳೆಯ ದಿನ ಹೇಗಾದರೂ ಮಾಡಿ, ನಾರಾಯಣಪಂಡಿತರನ್ನು ಇಲ್ಲಿಯ-ವರೆಗೆ ಬರಮಾಡಿಕೊಳ್ಳಬೇಕು! ಅವರೆದುರು ಎಲ್ಲವನ್ನೂ ಹೇಳಿ, ರಾಜ-ಶೇಖರನಿಗೆ ಇದೆಲ್ಲವೂ ತಿಳಿಯುವಂತೆ ಮಾಡಬೇಕು!..ಅಹುದು! ಹೀಗೆ ಮಾಡಬೇಕಾದುದೇ ಸರಿ!"

ಈ ರೀತಿಯಿಂದ ನಿರ್ಣಯಿಸಿದವಳೇ ರತ್ನಾಂಬಿಕೆಯು ಮೈಮೇಲೆ ಹಾಕಿಕೊಂಡಿದ್ದ ಬಟ್ಟೆ-ಬರೆಗಳನ್ನೆಲ್ಲ ಬಿಚ್ಚಿ, ಮೊದಲಿನ ಉಡುಪುತೊಡಪು-ಗಳನ್ನು ತಳೆದಳು; ಮತ್ತೆ ಹೋಗಿ ಮಂಚದಮೇಲೆ ಬಿದ್ದುಕೊಂಡಳು.

---

## ೨೬ನೆಯ ಪರಿಚ್ಛೇದ

ಅದೇ ದಿನ, ರಾಜಶೇಖರನ ಬಳಿಯಿಂದ ನಾರಾಯಣಪಂಡಿತರು ಹೊರಟುಹೋಪಾಗ ಎಂಟುಗಳಿಗೆ ರಾತ್ರಿಯಾಗಿದ್ದಿತು. ವಿಜಯನಗರದ ದುರ್ಗಾಧಿಪತಿಯಾದ ಕುಮಾರನಾಯಕನೊಡನೆ ವಿಚಾರವಿನಿಮಯ ಮಾಡಬೇಕಾಗಿದ್ದುದರಿಂದ, ಪಂಡಿತರು ಶಾಂತಿಕುಟೀರದಿಂದ ಹೊರಟವರು ಒಳಗೋಟೆಯ ದಾರಿಯನ್ನು ಹಿಡಿದು, ನಗರದೊಳಕ್ಕೆ ಸಾಗಿದರು. ಇಂದಿನ ಇರುಳನ್ನು ಕುಮಾರನಾಯಕನಲ್ಲಿಯೆ ಕಳೆಯುವುದಾಗಿ, ರಾಜಶೇಖರ-ನೊಡನೆ ಅವರು ಮಾತನಾಡಿ ಹೋಗಿದ್ದರು.

ರಾಜಶೇಖರನಿಗೆ ಇಂದು ಒಂದೆ ಒಂದು ಯೋಚನೆ. 'ಮಹಮ್ಮ-ದೀಯರ ತೊಡಕನ್ನು ಹೇಗೆ ಬಿಡಿಸಬೇಕು..?' ಎಂದು. ನಾರಾಯಣ ಪಂಡಿತರನ್ನು ಕುಮಾರನಾಯಕನ ಕಡೆಗೆ ಕಳುಹಿಸಿದುದು ಇದೇ ವಿಷಯದ ನಿರ್ಣಯಕ್ಕಾಗಿಯೆ! ಕುಮಾರನಾಯಕನು ಶೂರನು; ಧೀರನು; ಸಾಮ್ರಾಜ್ಯದ ವಿಷಯದಲ್ಲಿ ಅತಿಶಯವಾದ ಅಭಿಮಾನವುಳ್ಳವನು; ಮೊದಲಿ ನಿಂದಲೂ ಆತನು ಸಾಳುವ ನರಸಿಂಹನ ಪಕ್ಷಪಾತಿ; ರಾಜಶೇಖರನನ್ನು ಗುರುವೆಂದು ಭಾವಿಸುವವರಲ್ಲಿ ಕುಮಾರನಾಯಕನೂ ಒಬ್ಬನು. ಸದ್ಯದ ಹೊಸ ದೊರೆ, ಹೊಸ ದಂಡನಾಯಕರ ಆಡಳಿತದ ರೀತಿಯಲ್ಲಿ ಅವನಿಗೆ ತುಂಬ ಅಸಂತುಷ್ಟಿ. ಎಂತಲೆ ಈ ಮಹಮ್ಮದೀಯರ ಪ್ರಶ್ನೆಯನ್ನು ಬಗೆಹರಿಸಬೇಕಾಗಿದ್ದ ಕಾರ್ಯದಲ್ಲಿ, ಆತನು ರಾಜಶೇಖರನಿಗೆ ಸಹಕಾರಿ ಯಾಗಿರುವುದಕ್ಕೆ ಒಪ್ಪಿಕೊಂಡಿದ್ದನು.

* * * *

ರಾತ್ರಿಯ ಹನ್ನೊಂದು ಗಳಿಗೆಗಳು ಕಳೆದುಹೋಗಿರಬಹುದು. ಶುಕ್ಲ-ಪಕ್ಷದ ದಶಮಿಯ ಚಂದ್ರ ಮಧ್ಯಾಕಾಶವನ್ನು ಇಳಿದು, ಪಡುವಣದ ಕಡೆಗೆ ನಡೆದಿದ್ದಾನೆ. ಕತ್ತೆಯ ಬಣ್ಣದ ಬಂಜೆಮೋಡದ ಹಾಳೆಯೊಂದು ಚಂದ್ರನನ್ನು ಮುಸುಕಿಬಿಡಬೇಕೆಂದು – ಮೂಡಣಗಾಳಿಯ ನೆರವಿನಿಂದ– ಆತನನ್ನು ಬೆನ್ನಟ್ಟಿ ನಡೆದಿದೆ. ಅದನ್ನು ಬೆಂಬತ್ತಿ, ಎಡಕ್ಕೆ, ಬಲಕ್ಕೆ – ಹಿಂದು-ಹಿಂದಾಗಿ – ತುಂಡುಮೋಡಗಳು ಮೆಲ್ಲಗೆ ಸಾಗಿವೆ. ನೆರಳಿಲ್ಲದ ಸ್ಥಳದಲ್ಲೆಲ್ಲ ಎಣ್ಣೆಬಣ್ಣದ ಬೆಳುದಿಂಗಳು ತನ್ನ ಇರುವಿಕೆಯನ್ನು ತೋರಿಸುತ್ತಲಿದೆ.

ಶಾಂತಿಕುಟೀರವಿದ್ದ ತೋಟಗಳ ಪ್ರದೇಶವೆಲ್ಲ ನಿಶ್ಶಬ್ದವಾಗಿ ಬಿದ್ದು-ಕೊಂಡಿದೆ. ಬೆಳುದಿಂಗಳಿಗೆ ಹೆದರಿ, ನರಿಗಳು ಬಂದು ಕಬ್ಬಿನ ತೋಟಗಳಿಗೆ ನುಗ್ಗುತ್ತಿರಲಿಲ್ಲವೇನೋ! ತೋಟಿಗರ ಬೆದರಿಕೆಯ ಹುಯಿಲು, ಢೋಲು ತಮ್ಮಟೆಗಳ ಸಪ್ಪಳು .. ಯಾವುವೂ ಕೇಳುತ್ತಿರಲಿಲ್ಲ. ನಡುನಡುವೆ–ಯಾವಾಗಲಾದರೊಮ್ಮೆ–ಮರಗಳಲ್ಲಿ, ತಮ್ಮತಮ್ಮೊಳಗೆ ಕಚ್ಚಿಯಾಡು-ತ್ತಿರುವ ಕಾಗೆಗಳ ಬಳಗದ ಕರ್ಕಶಧ್ವನಿ, ಗೂಗೆಗಳ ಉತ್ಸಾಹದ ಕೂಗಿನ ಬೀಭತ್ಸಧ್ವನಿ ಮಾತ್ರ–ಆ ನಿಶ್ಶಬ್ದಪ್ರಾಂತ್ಯದಲ್ಲಿ ಮರುದನಿಗೊಂಡು–ಎಚ್ಚತ್ತಿದ್ದವರ ಎದೆಗಳನ್ನು ಅಲ್ಲಾಡಿಸುತ್ತಿದ್ದುವು.

ಯಾವ ಹೊಣೆಗಾರಿಕೆಯೂ ಇಲ್ಲದೆ ಇರುವ ಜೀವಿಗಳಿಗೆ, ಹೊಟ್ಟೆಯ ಊಟ–ಕಣ್ಣಿನ ನಿದ್ದೆ–ಇವು ಎಂತಹ ಸಂದರ್ಭದಲ್ಲಿಯೂ ಕಡಿಮೆಯಾಗವು-ಶಾಂತಿಕುಟೀರದಲ್ಲಿ ರಾಜಶೇಖರನ ಹೊರತು ಇನ್ನಾವ ಪ್ರಾಣಿಯೂ ಎಚ್ಚತ್ತಿರಲಿಲ್ಲವೆಂದು ಹೇಳಬಹುದು. ನಿನ್ನೆಯ ದಿನ, ಮಸೀದೆಯಲ್ಲಿ ಗುಂಪುಗೂಡಿದ್ದ ಮಹಮ್ಮದೀಯರು ಗೊತ್ತುಮಾಡಿಕೊಂಡ..ನಿರ್ಣಯದ ವಾರ್ತೆಯು ದೊರೆಗೆ ತಿಳಿಯಲು, ಅವನು ವಿಪರೀತವಾಗಿ ಕೋಪಗೊಂಡಿ-ದ್ದಾನೆಂಬುದು ರಾಜಶೇಖರನಿಗೆ ಗೊತ್ತಾಗಿದ್ದಿತು. 'ದೊರೆಯು ಇದಕ್ಕೆ ಪ್ರತಿಕಾರವನ್ನು ಯಾವರೀತಿಯಿಂದ ಮಾಡಬಹುದು..? ಅದಕ್ಕೆಲ್ಲ ತಾನು ಯಾವಯಾವ ರೀತಿಯಿಂದ ಎದುರಾಗತಕ್ಕುದು..?' ಎಂಬ ಯೋಚನೆಯಲ್ಲಿ ಅವನು, ಓಲಗಸಾಲೆಯ ಆಸನವೊಂದರಲ್ಲಿ ಬಿದ್ದುಕೊಂಡಿದ್ದನು. ಯಾವ-ಯಾವ ರೀತಿಯಿಂದ ವಿಚಾರಮಾಡಿ ನೋಡಿದರೂ, ಮುಂದೆ ಬಂದಿದ್ದ ಈ ತೊಡಕನ್ನು–ಶಾಂತತೆಗೆ ಭಂಗಬಾರದಂತೆ–ಹೇಗೆ ಬಿಡಿಸಬೇಕೆಂಬುದನ್ನು ಕಾಣದೆ, ಆಗಾಗ ನಿಟ್ಟುಸಿರುಗಳನ್ನು ಇಕ್ಕುತ್ತಲಿದ್ದನು. ಆಗ ರಾಜಶೇಖರ-ನಿಗೆ ಮನಸ್ಸಿನ ತುಂಬ..ಇದೊಂದೇ ಒಂದು ಯೋಚನೆ.

ಹೊರಬಾಗಿಲಿನ ಆಳು ನಿದ್ದೆಗಣ್ಣಲ್ಲಿಯೆ ಎದ್ದು ಬಂದು, ಚಿಕ್ಕಣ್ಣನನ್ನು ಎಚ್ಚರಿಸಿ ಹೇಳಿದ.

"ಅಣ್ಣಾಜಿಯವರನ್ನು ಕಾಣಬೇಕಾಗಿದೆಯಂತೆ. ನಾಲ್ಕೈದು ಜನ ಮಹಮ್ಮದೀಯರು ಬಂದು, ಬಾಗಿಲಲ್ಲಿ ನಿಂತು, ಒಂದೆಸವನೆ ನನಗೆ ತೊಂದರೆ ಕೊಡುತ್ತಲಿದ್ದಾರೆ."

"ನಸುವೆ ತಡೆ! ಒಳಕ್ಕೆಹೋಗಿ ಕೇಳಿಕೊಂಡು ಬರುತ್ತೇನೆ." ಎಂದು ಚಿಕ್ಕಣ್ಣನು ಎದ್ದುಹೋಗಿ, ರಾಜಶೇಖರನಿಗೆ ಅರಿಕೆಮಾಡಿಕೊಂಡನು.

"ಯಾರೋ ನಾಲ್ಕು ಜನ ಮುಹಮ್ಮದೀಯರು ಬಂದಿದ್ದಾರಂತೆ; ತಮ್ಮನ್ನು ಈಗಲೆ ಕಾಣಬೇಕಾಗಿದೆಯೆಂದು ಹೇಳುತ್ತಿದ್ದಾರಂತೆ."

ರಾಜಶೇಖರನು ಚಟ್ಟನೆ ಎದ್ದುಕುಳಿತುಕೊಂಡು, ಮರುಕದ ಧ್ವನಿಯಲ್ಲಿ ಹೇಳಿದನು.

"ಮತ್ತೇನಾಗಿದೆಯೋ ಪಾಪ! ಹೋಗು; ಅವರನ್ನು ಬರುವಂತೆ ಹೇಳು ಇಲ್ಲಿಗೆ!"

ಚಿಕ್ಕಣ್ಣ ಬಂದು ಬಾಗಿಲಾಳಿಗೆ ಹೇಳಿದ. ಬಾಗಿಲಾಳು ಹೊರಬಾಗಿಲ ಕಡೆಗೆ ಹೊರಟುಬಿಟ್ಟ. ಅವನು ಹೋದ ಒಂದೆರಡು ನಿಮಿಷಗಳಲ್ಲಿಯೆ, ಐದು ಜನ ಮುಹಮ್ಮದೀಯರು ಚಿಕ್ಕಣ್ಣನ ಬಳಿಗೆ ಬಂದರು. ಚಿಕ್ಕಣ್ಣ ಅವರನ್ನು ಓಲಗಸಾಲೆಯೊಳಕ್ಕೆ – ರಾಜಶೇಖರನೆದುರು – ಕರೆದುಕೊಂಡು ಹೋದ. ಮುಹಮ್ಮದೀಯರೆಲ್ಲರೂ ತಲೆ ಬಗ್ಗಿಸಿ ರಾಜಶೇಖರನಿಗೆ 'ಸಲ್ಲಾಂ' ಮಾಡಿದರು. ಎಲ್ಲರ ಮುಖದ ಮೇಲೆಯೂ ಗಾಬರಿಯ ಚಿಹ್ನೆ ಮೂಡಿ ನಿಂತಿದ್ದಿತು. ಬಂದಿದ್ದವರಲ್ಲಿ, ಎಲ್ಲಕ್ಕೂ ಮುಂದೆ ಇರುವವನು, ಬಿಗಿದು ಬರುತ್ತಿರುವ ಕಂಠದಲ್ಲಿ ಹೇಳಲು ತೊಡಗಿದನು.

"ಅಣ್ಣಾಜೀ ಸಾಹೇಬ್! ಇಸ್ಮಾಯಿಲ್‌ಸೇಟರು ಮಾಂಸದಪೇಟೆಯ ಮುಹಮ್ಮದೀಯರಿಗೆಲ್ಲ ಹಿರಿಯರು. ನಿನ್ನೆಯ ದಿನ, ಮಸೀದೆಯಲ್ಲಿ ಸೇರಿದ ನಮ್ಮವರ ಸಭೆಯು, ಅವರ ಪ್ರೋತ್ಸಾಹದಿಂದಲೆ ನಡೆದಿದೆಯೆಂದು, ಮಹಾರಾಜಾ ಸಾಹೇಬ್ ಅವರಿಗೆ ಯಾರೋ ಹೋಗಿ ಹೇಳಿದ್ದಾರೆ. ಈಗ ಸರಕಾರದ ಸೀಪಾಯಿಗಳು ಬಂದು, ಸೇಟಜಿಯ ಮನೆಗೆ ಮುತ್ತಿಗೆ ಹಾಕಿ ಕುಳಿತಿದ್ದಾರೆ. 'ಇಸ್ಮಾಯಿಲ್ ಸೇಟರನ್ನು ಹಿಡಿದುಕೊಂಡು ಹೋಗುವುದಲ್ಲದೆ, ಮನೆಯಲ್ಲಿದ್ದ ಸಂಪತ್ತನೆಲ್ಲ ಅರಮನೆಗೆ ತೆಗೆದುಕೊಂಡು ಬರುವುದಕ್ಕೆ ನಮಗೆ ರಾಜಾಜ್ಞೆಯಾಗಿದೆ.' ಎಂದು ಆ ಸೀಪಾಯಿಗಳು ಒಂದೇಸವನೆ ಕಿರಿಚಿಕೊಳ್ಳುತ್ತಲಿದ್ದಾರೆ. ನಮ್ಮ ಯಜಮಾನರು ಹೆದರಿಕೆಯಿಂದ ಮೈಮರೆತು ಕುಳಿತಿದ್ದಾರೆ. ಮನೆಯಲ್ಲಿ ಪರದೆಯ ಹೆಣ್ಣುಮಕ್ಕಳಿದ್ದಾರೆ; ಸೇಟಜಿಯವರ ಹೆಂಡತಿ, ಕೂಡಲೆ ತಮ್ಮ ಕಡೆಗೆ ಹೋಗಿ ಬನ್ನಿರೆಂದು ನಮಗೆ

ಹೇಳಿದುದರಿಂದ, ಹಿಂಬದಿಯ ಗೋಡೆಯನ್ನು ಜಿಗಿದು.. ನಾವು ಒಮ್ಮೆಲೆ ಓಡಿಬಂದಿದ್ದೇವೆ. ದಯೆಯಿಟ್ಟು ನಮ್ಮ ಸೇಟಜಿಯವರ ಮಾನ-ಪ್ರಾಣ ಉಳುಹಿಕೊಡಬೇಕು ತಾವು. ನಾವು ಬರುವಾಗ ಮುಂಬಾಗಿಲನ್ನು ಇನ್ನೂ ತೆರೆದಿರಲಿಲ್ಲ. ಇಷ್ಟರಲ್ಲಿಯೆ ಅದನ್ನು ಮುರಿದು ಸೀಪಾಯಿಗಳು ಒಳಕ್ಕೆ ನುಗ್ಗಿಬಿಟ್ಟಿದ್ದರೆ ಎಲ್ಲವೂ ವಿಪರೀತವಾಗುವುದು.. "

ಮಾತಿನ ಕೊನೆಯೊಂದಿಗೆ ಆ ಮಹಮ್ಮದೀಯನು ಗಟ್ಟಿಯಾಗಿ ಅಳಲು ತೊಡಗಿದನು. ಉಳಿದವರೂ ಬಿಕ್ಕುತ್ತ ಕಣ್ಣುಗಳನ್ನು ಒರಸಿಕೊಳ್ಳುತ್ತಿದ್ದರು. ಒಂದೆ – ಒಂದುಕ್ಷಣ ರಾಜಶೇಖರನು ಸುಮ್ಮಗೆ ಕುಳಿತು ಯೋಚಿಸಿದ. ಬಳಿಕ ಒಮ್ಮೆಲೆ ಹೇಳಿದ.

"ಸರಿ! ನಮಗೂ ದುರ್ವಿಧಿ! ನಿಮಗೂ ದುರ್ವಿಧಿ! ರಾಜ್ಯಾಧಿಕಾರದ ಶಕ್ತಿ ರಾಕ್ಷಸಕೃತ್ಯಕ್ಕೆ ಕೈಹಾಕಿದರೆ, ಯಾರಿಗೆ ಸಮಾಧಾನವಿದ್ದೀತು? ಆಗಲಿ! ಹೊರಡೋಣ ನಡೆಯಿರಿ! ಏನೇನಾಗಿದೆಯೋ ನೋಡಿಯಾದರೂ ನೋಡೋಣ! "

ಥಟ್ಟನೆ ಮೇಲಕ್ಕೆದ್ದು ರಾಜಶೇಖರನು, ಹೊರಕ್ಕೆ ಹೋಗುವಾಗಿನ ಉಡುಪು-ತೊಡಪುಗಳನ್ನು ಹಾಕಿಕೊಂಡನು. ಚಿಕ್ಕಣ್ಣನು ಒರೆಗೂಡಿದ ಕತ್ತಿಯೊಂದನ್ನು ಆತನ ಕೈಯೊಳಕ್ಕೆ ಸಲ್ಲಿಸುತ್ತಿರುವಾಗಲೆ.. ವಿನಯದಿಂದ ಕೇಳಿದನು.

"ರಾತ್ರಿಯ ವೇಳೆ! ಜೊತೆಗೆ ನಾನೂ ಬಂದುಬಿಡುತ್ತೇನೆ."

"ಏತಕ್ಕಾಗಿ ಬರಬೇಕು ನೀನು..? ಏನೂ ಬೇಡ!"

ಎಂದವನೇ ರಾಜಶೇಖರನು ಅವಸರದ ನಡಿಗೆಯಲ್ಲಿ ಮುಂದುವರಿದುಬಿಟ್ಟ. ಬಂದಿದ್ದ ಮಹಮ್ಮದೀಯರೆಲ್ಲರೂ ಆತನ ನಡಿಗೆಯಲ್ಲಿಯೆ ಅವನನ್ನು ಅನುಸರಿಸಿದರು.

---

## ೨೭ನೆಯ ಪರಿಚ್ಛೇದ

ಮಾಲ್ಯವಂತದ ಉತ್ತರದ ಪಕ್ಕದಲ್ಲಿರುವ ಕೊಳ್ಳವು. .ಭೂತಗಳ ಕೊಳ್ಳವೆಂದು ಎಲ್ಲೆಲ್ಲಿಯೂ ಪ್ರಸಿದ್ಧಿ. ಹಗಲುಹೊತ್ತಿನಲ್ಲಿ ಕೂಡ ಜನರು ಅಲ್ಲಿಗೆ ಹೋಗಲಿಕ್ಕೆ ಹೆದರುವರು. ತಾಳೆ-ಈಚಲುಗಳ ಮರಗಳು, ಕೊಳ್ಳದ ಎರಡು ಬದಿಗಳಗೊಂಟು ಬೆಳೆದು ಬಸವಾಗಿ, ಸೂರ್ಯನ ಕಿರಣಗಳು ಕೂಡ ಒಳಕ್ಕೆ ಹಣೆಯಿಕ್ಕದಂತೆ ಕಿಕ್ಕಿರಿದು ನಿಂತಿವೆ. ಹಗಲಲ್ಲಿಯೂ ಬೆಳಕಿಲ್ಲದಿದ್ದ ಆ ಕೊಳ್ಳದೆಡೆಯಲ್ಲಿ, ದಶಮಿಯ ಚಂದ್ರನ–ಅದರಲ್ಲಿಯೂ ಪಶ್ಚಿಮದ ಕ್ಷಿತಿಜವನ್ನು ತೀರ ಸಮೀಪಿಸಿ ಹೊರಟಿದ್ದವನ–ಕಿರಣಗಳು ಬಂದು ನಿಲುಕಲಿಕ್ಕೆ ದಾರಿಯೆಲ್ಲಿಯದು! ಅಲ್ಲಿ ಕಾಡುಗತ್ತಲೆಯು ಇಡಿಯಾಗಿ ತುಂಬಿಬಿಟ್ಟಿದ್ದಿತು. ಕೊಳ್ಳದ ಮಧ್ಯದಲ್ಲಿ ಭವ್ಯವಾಗಿ ಬೆಳೆದಿದ್ದ ಆಲದಮರದ ಬುಡದಲ್ಲಿ ಮಾತ್ರ–ಮಂದಪ್ರಕಾಶದ–ಒಂದೆರಡು ಸಣ್ಣ ದೀವಟಿಗೆಗಳು ಉರಿಯುತ್ತಿದ್ದುವು. ದೂರದಿಂದ ನೋಡುವವರಿಗೆ, ಅವುಗಳ ಬೆಳಕು ಕಾಣುವ ಸಂಭವವೇ ಇರಲಿಲ್ಲ; ಅಪ್ಪಿತಪ್ಪಿ ಯಾರಕಣ್ಣಿಗಾದರೂ ಕಂಡರೆ, ಕೊಳ್ಳಿಯದೆವ್ವಗಳೆಂದು ಅವರು ಹೆದರಿ ಓಡಿಹೋಗಬಹುದಾಗಿದ್ದಿತಲ್ಲದೆ, ಇನ್ನೇನನೂ ಮಾಡುವಂತೆ ಇರಲಿಲ್ಲ.

ಆಲದಮರದ ಬುಡದ ಬೆಳಕಿನಲ್ಲಿ, ಹತ್ತುಹನ್ನೆರಡು ಜನರ ಮುಖ-ಗಳು–ಸಮೀಪಕ್ಕೆ ಹೋಗಿನೋಡಿದರೂ–ಮಸುಕು–ಮಸುಕಾಗಿ ಕಾಣುತ್ತಿದ್ದುವು. ಅವರಲ್ಲಿಯವರಿಬ್ಬರು ದೀವಟಿಗೆಯೊಂದರ ತೀರ ಬಳಿಯಲ್ಲಿಯೆ ಕುಳಿತು, ತಮ್ಮತಮ್ಮಲ್ಲಿ ಈ ರೀತಿ ಮಾತನಾಡಿಕೊಳ್ಳುತ್ತಿದ್ದರು. ಮೊದಲನೆಯವನು ಹೇಳಿದ.

"ವಿರೂಪಾಕ್ಷರಾಯನ ಕೊಲೆಯಾದಾಗಿನಿಂದಲೂ, ರಾಜಶೇಖರನಲ್ಲಿ ಜಕ್ಕನಾಯಕನಿಗೆ ದ್ವೇಷ. ತನ್ನ ಯಜಮಾನನನ್ನು ಕೊಂದಿದ್ದವನನ್ನು . . ತಾನು ಕೊಂದೇ ತೀರಬೇಕೆಂದು ಆತನ ಪ್ರತಿಜ್ಞೆಯಿದ್ದಿತು. ತಮ್ಮ ಆಶಯವನ್ನು ಹೇಳಿದೊಡನೆಯೆ ಅವನು, ಸಂತೋಷದಿಂದ ನಮಗೆ ಸಹಾಯ ಮಾಡಲಿಕ್ಕೆ ಸಮ್ಮತಿಸಿದನು."

ಎರಡನೆಯವನು ಮಾತನಾಡಿದ.

"ನೋಡು ದುರಗಪ್ಪಾ! ಜಕ್ಕಣ್ಣನಾಯಕ ಎಷ್ಟು ಚೆನ್ನಾಗಿ

ವೇಷವನ್ನು ಮಾರ್ಪಡಿಸುತ್ತಾನಪ್ಪಾ! ಅವನು ಇಂದು ಮುಹಮ್ಮದೀಯನ ವೇಷಹಾಕಿದಾಗ, ನನಗೆ ಆತನ ಗುರುತೇ ಸಿಕ್ಕಲಿಲ್ಲ!"

"ಅಹುದು ಬುದ್ಧೀ! ವೇಷಹಾಕುವುದರಲ್ಲಿ ಅವನು ಮಹಾ ಚತುರ. ಒಂದುಸಲ ಮಲೆಯಾಳುನಾಡಿನ ಹೆಣ್ಣಿನ ವೇಷವನ್ನು ಹಾಕಿ, ವಿರೂಪಾಕ್ಷ-ಮಹಾರಾಯರನ್ನು ಮಂಕುಗೊಳಿಸಿಬಿಟ್ಟನಂತೆ. ಅದಕ್ಕಾಗಿಯೆ ಅವರು ಜಕ್ಕಣ್ಣನಿಗೆ ಎಷ್ಟೆಷ್ಟೋ ಬಹುಮಾನಗಳನ್ನು ಕೊಟ್ಟು, ತಮ್ಮ ಅಂಗರಕ್ಷಕನನ್ನಾಗಿ ಮಾಡಿಕೊಂಡಿದ್ದರಂತೆ! ಅದು ಹೋಗಲಿ! ಆತನ ಜೊತೆಗೆಹೋದ ಆ ನಾಲ್ಕು ಜನ ಮುಹಮ್ಮದೀಯರಿದ್ದಾರಲ್ಲಾ! ಅವರನ್ನು ಏನು ಮಾಡಬೇಕು? ಮೊದಲು ನಮ್ಮ ಸೈನ್ಯದಲ್ಲಿಯೆ – ಅವರು – ಕುದುರೆಯಾಳು ಗಳಾಗಿ – ಇದ್ದವರು. ಮಿಕ್ಕವರನ್ನು ಹೊರಕ್ಕೆಹಾಕಿದರೂ ನಿಮ್ಮನ್ನು ಹಾಕುವುದಿಲ್ಲವೆಂದು ಹೇಳಿ, ಮನವೊಲಿಸಿ, ಈ ಕೆಲಸಕ್ಕೆ ಕರೆದುಕೊಂಡು ಬಂದಿದ್ದೇನೆ."

"ನೋಡೋಣವೆಂತೆ ಮುಂದೆ! ಕೆಲಸವಂತೂ ಕೊನೆಗೊಳ್ಳಲಿ! ಆ ಮೇಲೆ ಅವರಿಗೆ 'ನೀವು ವಿಜಯನಗರವನ್ನು ಬಿಟ್ಟುಹೋಗಲೇ ಬೇಕು!' ಎಂದು ಹೇಳಿಬಿಟ್ಟರೆ, ಅವರು ಏನು ಮಾಡಬಲ್ಲರು ನಮ್ಮನ್ನು? ಕೆಲಸವಾಗುವ ವರೆಗೆ, ಮತ್ತೆ ನಿಮ್ಮನ್ನು ಸೈನ್ಯದಲ್ಲಿ ತೆಗೆದುಕೊಳ್ಳುತ್ತೇವೆಂದು ಹೇಳಿದ್ದರೂ ಹೇಳಬಹುದಾಗಿದ್ದಿತು."

"ಒಬ್ಬನಂತೂ. . ಆ ಆಶೆಯನ್ನು – ನಾನು – ಹಚ್ಚಿದಾಗಲೆ ಬರಲಿಕ್ಕೆ ಸಿದ್ಧನಾದ. ನಿನ್ನೆಯ ಮುಹಮ್ಮದೀಯರ ಸಭೆಯ – ಪರಿಣಾಮದಿಂದ, ರಾಜಶೇಖರನ ವಿಷಯದಲ್ಲಿ ತುಂಬ ವಿಶ್ವಾಸ ನೆಲಸಿದ್ದಿತು. ಆದರೆ ಸ್ವಾರ್ಥದ ಮುಂದೆ ಎಲ್ಲಿಯ ವಿಶ್ವಾಸ. . ಎಲ್ಲಿಯ ಪ್ರೀತಿ. . ಬುದ್ಧಿ! ನಾನು ಆಶೆ ಹೇಳಿದುದೇ ತಡ; ಬರಲಿಕ್ಕೆ ಒಪ್ಪಿಯೇ ಬಿಟ್ಟ."

ಎರಡನೆಯವನು ಸುಡುಮಾತಿನಲ್ಲಿ ಹೇಳಲು ತೊಡಗಿದ.

"ಆಯಿತು; ಇಂದು ರಾಜಶೇಖರನನ್ನು ಕೊನೆಗಾಣಿಸಿದೆವೆಂದರೆ, ಒಂದು ದೊಡ್ಡ ಪೀಡೆಯು ಕಡಿದುಹೋದಂತಾಯಿತು. ಪ್ರತಿಯೊಂದು ವಿಚಾರದಲ್ಲಿಯೂ ತಡೆ ಆತನದು! ಅಂತೆ; ನಾನು ದಂಡನಾಯಕನಾಗುವು-ದಕ್ಕೆ ಅಯೋಗ್ಯನಂತೆ! ತೋರಿಸಿಬಿಡುತ್ತೇನೆ. . ಇಂದು ಆ ಸಂನ್ಯಾಸಿಗೆ ನನ್ನ

ಯೋಗ್ಯತೆ ಅಯೋಗ್ಯತೆಗಳನ್ನು !”

“ ಅದು ಹೋಗಲಿ ಬುದ್ಧೀ! ತಾನು ಕನ್ನಡಿಗನಾಗಿ, ವಿಜಯನಗರದ ರಾಯರ ಮನೆತನದಲ್ಲಿ ಹುಟ್ಟಿ, ಮಹಮ್ಮದೀಯರ ಪಕ್ಷವನ್ನು ಹಿಡಿಯುವುದೆಂದರೆ ಯಾರಿಗೆ ಸಹನೆಯಾದೀತು ! ಕೊಡಲಿಯ ಕಾವಿನಂತೆ ಆತ ಕುಲಕ್ಕೆ ಮೃತ್ಯುವಾಗಿ ನಿಂತಿದ್ದಾನೆ. ನನಗೇನೋ ಆತನ ನಡತೆ ಸ್ವಲ್ಪವೂ ಸರಿಬರಲಿಲ್ಲ ! ”

ಎರಡನೆಯವನು ಸಂಶಯಸ್ವರದಲ್ಲಿ ಹೇಳಿದನು.

“ ಇಷ್ಟರಲ್ಲಿಯೆ ಬರಬಹುದಾಗಿದ್ದಿತಲ್ಲವೇ ಅವರು ? ”

“ ಅಲ್ಲಿಂದ ಇಲ್ಲಿಯವರೆಗೆ ಬರಲಿಕ್ಕೆ ನಾಲ್ಕುಗಳಿಗೆಗಳಾದರೂ ಬೇಡವೇ ? ”

ದೂರದಲ್ಲಿ ಯಾರದೋ ಮಾತಿನ ಸಪ್ಪಳ ಕೇಳಬಂದುದರಿಂದ, ಇಬ್ಬರೂ ಆತುರಭಾವದವರಾಗಿ, ಆ ಕಡೆಗೆ ಕಣ್ಣುಗಳನ್ನು ಕೊಟ್ಟು ಕುಳಿತರು. ಈ ಇಬ್ಬರಲ್ಲಿಯವನೊಬ್ಬನು . . ಹೊಸತಾಗಿ ದಂಡನಾಯಕನಾಗಿದ್ದ ಈಶ್ವರನಾಯಕನೆಂಬುದನ್ನು ಬೇರೆಯಾಗಿ ಹೇಳಲಿಕ್ಕೆ ಬೇಡ. ಇನ್ನೊಬ್ಬನು, ಮೊದಲು ಈಶ್ವರನಾಯಕನಿದ್ದ ಕುದುರೆಯಾಳುಗಳ ಮೇಲಾಳಿನ ಸ್ಥಳಕ್ಕೆ ಬಂದವನು; ಮೊದಲಿನಿಂದಲೂ ಈಶ್ವರನಾಯಕನ ಕೈಕೆಳಗಿದ್ದು ಕೆಲಸಮಾಡಿ, ಆತನ ಮೆಚ್ಚಿಕೆಯನ್ನು ಸಂಪಾದಿಸಿದವನು. ಆ ಮೆಚ್ಚಿಕೆಯಿಂದಲೆ ಈಗ ಈ ಮೇಲಾಳಿನ ಪದಕ್ಕೆ ಏರಿದವನು.

ಮಾತಿನ ಸಪ್ಪಳು ತೀರ ಸಮೀಪಕ್ಕೆ ಕೇಳಿಸಲು ತೊಡಗಿತು. ಅಲ್ಲಿ ಕುಳಿತಿದ್ದ ಎಲ್ಲ ಜನರ ನೋಟಗಳೂ, ಆ ಮಾತುಗಳು ಬರುತ್ತಿದ್ದ ನಿಟ್ಟಿಗೆ ನೋಡಲು ತೊಡಗಿದುವು. ಸ್ವಲ್ಪ ವೇಳೆಯಲ್ಲಿಯೆ ತಲೆಯಮೇಲೆ – ಹೆಡಮುಡಿ ಬಿಗಿದಿದ್ದ – ಮನುಷ್ಯನೊಬ್ಬನನ್ನು ಹೊತ್ತುಕೊಂಡು, ಕತ್ತಲೆಯಲ್ಲಿ ಮೆಲ್ಲಮೆಲ್ಲಗೆ ನಡೆಯುತ್ತ, ನಾಲ್ಕುಜನ ಮಹಮ್ಮದೀಯರು ಅಲ್ಲಿಗೆ ಬಂದರು. ಒಬ್ಬನು ಮಾತ್ರ ಹಿಂದಿನಿಂದ ಹಾಗೆಯೇ – ಎಳೆದೆಳೆದು ಹಜ್ಜೆಯಿಕ್ಕುತ್ತ – ನಡೆದುಕೊಂಡು ಬರುತ್ತಿದ್ದ. ಹೆಡಮುಡಿ ಬಿಗಿದಿದ್ದ ಆ ಮನುಷ್ಯನು ಕೂಗಿಕೊಳ್ಳುವುದಕ್ಕೆ ಕೂಡ ಮಾರ್ಗವಿಲ್ಲದಂತೆ, ಆತನ ಬಾಯನ್ನೂ ಬಿಗಿದು ಕಟ್ಟಿದ್ದರು. ಅವರು ಆಲದಮರದ ಅಡಿಯನ್ನು

ಸಾರುತ್ತಲೆ, ಈಶ್ವರನಾಯಕನು ಕೃತಕೃತ್ಯತೆಯ ಧ್ವನಿಯಲ್ಲಿ ನುಡಿದ.

"ಆಯಿತೇ? ಕೆಲಸವನ್ನು ಮಾಡಿಕೊಂಡೇ ಬಂದುಬಿಟ್ಟಿರಾ? ಭಲೆ! ಭಲೆ!"

ಬಂದವರು ಹೊತ್ತುತಂದಿದ್ದವನನ್ನು ಕೆಳಕ್ಕೆ ಇಳಿಸಿದರು. ಈಶ್ವರನಾಯಕನು ಮುಂದುವರಿದು ಹೋಗಿ, ಕೂಗಿ ಕೇಳಿದನು.

"ಏನು ರಾಜಶೇಖರ ರಾಯರೇ! ಎಲ್ಲವೂ ಸೌಖ್ಯವೇ! ಈಗೇನು ಹೇಳುತ್ತೀರಿ ನೀವು? ನಾನು ದಂಡನಾಯಕನಾಗುವುದು ಬೇಡವಾಗಿದ್ದಿತಲ್ಲವೇ ನಿಮಗೆ?"

ಬಿದ್ದುಕೊಂಡಿದ್ದ ರಾಜಶೇಖರನ ಮುಖದ ಸ್ಥೈರ್ಯ – ಗಾಂಭೀರ್ಯಗಳು ಅಚ್ಚಳಿಯದೆ ಇದ್ದುವು. ತಿರಸ್ಕಾರದಿಂದ ನೋಡುವುದರ ಹೊರತು, ಆತನಿಗೆ ಇನ್ನೇನನೂ ಮಾಡಲಿಕ್ಕೆ ಬರುವಂತೆ ಇರಲಿಲ್ಲ. ಈಶ್ವರನಾಯಕನು ತನ್ನ ಜನರಿಗೆ ಹೇಳಿದ.

"ಈತನನ್ನು ಈ ಆಲದಮರದ ಬೀಳಲಿಗೆ ಹೊಂದಿ ನಿಲ್ಲಿಸಿ, ಬಿಗಿದು ಕಟ್ಟಿಹಾಕಿ, ಬಾಯೊಳಗಿನ ಚೆಂಡನ್ನು ತೆಗೆದುಬಿಡಿ!"

ಹೊತ್ತುಕೊಂಡು ಬಂದಿದ್ದವರು, ಬಳಲಿಹೋಗಿ.. ಉಸ್ಸೆಂದು ಬಿದ್ದುಕೊಂಡುದರಿಂದ, ಅಲ್ಲಿ ಕುಳಿತಿದ್ದವರಲ್ಲಿ ನಾಲ್ಕೈದು ಜನರು ಎದ್ದು ಹೋಗಿ, ಈಶ್ವರನಾಯಕನು ಹೇಳಿರುವಂತೆ ಎಲ್ಲವನ್ನೂ ಮಾಡಿ ಮುಗಿಸಿದರು. ನಾಯಕನು ಒರೆಗಳಚಿದ ಕತ್ತಿಯೊಂದನ್ನು ಹಿಡಿದುಕೊಂಡು ಮುಂದೆ ನಿಂತು, ಹೇಳಿದನು.

"ಇಲ್ಲಿ ನೋಡು! ನಿನ್ನನ್ನು ತೀರಿಸಿಬಿಡಬೇಕೆಂದು ದೊರೆಗಳ ಆಜ್ಞೆಯಾಗಿದೆ!"

ರಾಜಶೇಖರನು ತುಟಿಗಳನ್ನು ಮಿಟುಕಿಸದೆ, ಜುಗುಪ್ಸಾಭಾವದಿಂದ ನೋಡುತ್ತಿದ್ದನು ಮಾತ್ರ. ಈಶ್ವರನೆ ಮುಂದೆ ಮಾತನಾಡಿದ.

"ನನ್ನ ಮಾತುಗಳನ್ನು ಕೇಳಿಕೊಂಡು ಸುಮ್ಮಗೆ ಇದ್ದುಬಿಟ್ಟರೆ, ನಿನಗೆ ನಾನೇ ಜೀವದಾನ ಕೊಡುತ್ತೇನೆ. ನೋಡು! ಏನೆನ್ನುತ್ತೀಯೆ?"

ಎಂದೂ ಕಾಣದ ರೋಷದಲ್ಲಿ ರಾಜಶೇಖರನು ಹೇಳಿದನು.

"ನಿನಗೆ ಬೇಕಾಗಿದ್ದರೆ ನೂರುಸಲ ನನ್ನನ್ನು ಕೊಲ್ಲು! ನೀನು

ಹುಚ್ಚುನಾಯಿ! ನಿನ್ನೊಡನೆ ಮಾತಾಡಲಿಕ್ಕೂ ನನಗೆ ಹೇಸಿಕೆ!''

"ಅಹುದು! ನೀನೊಬ್ಬ ದೊಡ್ಡ ಮನಷ್ಯ! ನಿನ್ನ ಆ ನರಸಿಂಹನಾಯಕನೊಬ್ಬ ದೊಡ್ಡಮನುಷ್ಯ! ಮಿಕ್ಕವರೆಲ್ಲರೂ ನಾಯಿಗಳು! ರಾಜಶೇಖರಾ! ಈಗ ನೋಡು! ನಿನ್ನ ಸಾಮರ್ಥ್ಯವನ್ನಂತೂ ನಿಲ್ಲಿಸಿಬಿಟ್ಟಿದ್ದೇನೆ. ಇನ್ನು ನೋಡೋಣ.. ನಿನ್ನ ನರಸಿಂಹನಾಯಕನ ಸಾಮರ್ಥ್ಯವನ್ನು! ಆತನ ಮಗಳನ್ನು ಎಳೆದು ತರಿಸಿ, ದೊರೆಗಳ ಬಂಗಾರದವಳನ್ನಾಗಿ ಮಾಡದಿದ್ದರೆ..ನಾನು ಈಶ್ವರನಾಯಕನಲ್ಲ! ತಿಳಿಯಿತೇನು?"

"ಅಯ್ಯೋ! ಕನ್ನಡ ರಾಜ್ಯಲಕ್ಷ್ಮಿ! ಎಂತೆಂತಹ ದುರುಳರ ಕೈಗೆ ಸಿಕ್ಕು ನೀನು ವಿಡಂಬನೆಗೊಳ್ಳುತ್ತಿದ್ದೀಯಲ್ಲಾ!"

"ಅಳು! ರಾಜಶೇಖರಾ, ಮುಖಕ್ಕೆ ಸೆರಗು ಹಾಕಿಕೊಂಡು ಅಳು! ಹೇಡಿ! ಅಂದಿನ ಓಲಗದಲ್ಲಿಯ ನಿನ್ನ ಕೆಚ್ಚೆದೆ ಎಲ್ಲಿ ಹೋಗಿದೆಯೀಗ?"

"ನೀಚಾ! ಈಶ್ವರಾ! ನಿನ್ನ ಮೋಸಕ್ಕೆ ಸಿಕ್ಕಿಬಿದ್ದು ನಾನೀಗ ಅಸಹಾಯನಾಗಿ ನಿಂತುಕೊಂಡಿದ್ದೇನೆ; ಎಂತಲೇ ನೀನು ಇಷ್ಟೊಂದು ವೀರನಾಗಿ ಮಾತನಾಡುತ್ತಿದ್ದೀಯೆ! ಈಗ ಬಿಟ್ಟುನೋಡು! ನಿನ್ನ–ನಿನ್ನವರೆಲ್ಲರ–ಪ್ರಾಣಗಳನ್ನು, ಒಂದೆ ಒಂದು ಕ್ಷಣದಲ್ಲಿ–ವಿಜಯನಗರವನ್ನು ಕಾಡುತ್ತಿದ್ದ–ದುರ್ವಿಧಿಗೆ ಆಹುತಿಯನ್ನಾಗಿ ಅರ್ಪಿಸುತ್ತೇನೆ."

ಈಶ್ವರನಾಯಕನು ಗಟ್ಟಿಯಾಗಿ ನಗುತ್ತ ಮಾತನಾಡಿದನು.

"ನೀನಿನ್ನು ಒಂದೆ ಕ್ಷಣದ ಆಯುಷ್ಯದವನು! ಇನ್ನೇತಕ್ಕೆ ನಿನಗೆ ವಿಜಯನಗರದ ಹಂಬಲು?''

"ವಿಜಯನಗರದ ಹಂಬಲು ಇನ್ನೇತಕ್ಕೆಂದು ಕೇಳುತ್ತಿದ್ದೀಯಾ? ಈಶ್ವರಾ! ಹೇಳುತ್ತೇನೆ ಕೇಳು! ಈಗ ನಿನ್ನಿಂದ ನಾನು ಸತ್ತುಹೋದರೆ, ನನ್ನ ವಿಜಯನಗರದ ಹಂಬಲು ಒಂದಕ್ಕೆ ನೂರಾಗಿ ಹೆಚ್ಚುವುದು. ನನ್ನ ಈ ದೇಹದಿಂದ ಹೊರಹೊರಟ ಜೀವವು ಅನಂತಮುಖವಾಗಿ ಸಾಗಿ, ಕನ್ನಡನಾಡಿನ ಪ್ರತಿಯೊಂದು ಮನುಷ್ಯಪ್ರಾಣಿಯ ಉಸಿರಿನಲ್ಲಿ, ಸಾಮ್ರಾಜ್ಯಪ್ರೀತಿಯ ಗಾಳಿಯನ್ನು ಊದುವುದು! ನಿನ್ನಂತಹ–ನಿನ್ನ ಮಾತನ್ನು ಕೇಳಿ ನಡೆಯುತ್ತಿದ್ದ ಪೆದ್ದನಂತಹ ಅಯೋಗ್ಯರನ್ನು ರಸಾತಳಕ್ಕೆ ಉರುಳಿಸಿ, ಸಾಮ್ರಾಜ್ಯಸೂರ್ಯನನ್ನು ನುಂಗಿ ನೀರುಕುಡಿಯಲು ನಿಂತಿದ್ದ ರಾಹುವನ್ನು

ಅದು ಮಣ್ಣುಗೂಡಿಸಿಬಿಡುವುದು!

ಈಶ್ವರನಾಯಕನು ತಿರಸ್ಕಾರದ ನಗೆಯೊಂದಿಗೆ ಹೇಳಿದನು.

"ನಾನು ಎಂದಿನಿಂದಲೂ ಬಲ್ಲೆ! ರಾಜಶೇಖರಾ! ನಿನ್ನ ಬಾಯು-ಬಢಾಯಿ ಒಹಳ!"

ಕೆರಳಿದ ಸಿಂಹದಂತೆ ರೇಗಿ ರಾಜಶೇಖರನು ನುಡಿದನು.

"ಬಿಚ್ಚಿಬಿಡು! ಬಾಯು ಬಢಾಯಿ ಯಾರದೆಂಬುದನ್ನು ತೋರಿಸಿ ಕೊಡುತ್ತೇನೆ. ಮೋಸಗಾರನಾದ ಹೇಡಿಯು ನೀನು! ಕನ್ನಡ ಕ್ಷತ್ರಿಯ ವಂಶದಲ್ಲಿ ನೀನು ಹುಟ್ಟಬಾರದಾಗಿದ್ದಿತು! ಮೈಮರೆತು ಕುಳಿತಿದ್ದವರನ್ನು ಮೋಸದಿಂದ ಹೊತ್ತುತರಿಸಿ, ಮರಕ್ಕೆ ಕಟ್ಟಿಹಾಕಿ, ಕೊಲ್ಲಲಿಕ್ಕೆ ನಿಂತಿದ್ದ ನೀನು ಗಂಡುಸೇ? ಕ್ಷತ್ರಿಯನೇ? ಕನ್ನಡಿಗನೇ? ಚಾಂಡಾಲರಿಗಿಂತ ಚಾಂಡಾಲ! ನೀನೊಂದು ಕತ್ತಿಯನ್ನು ತೆಗೆದುಕೊಳ್ಳು! ನಾನೊಂದನ್ನು ತೆಗೆದುಕೊಳ್ಳುತ್ತೇನೆ! ದ್ವಂದ್ವಯುದ್ಧಕ್ಕೆ ನಿಲ್ಲು; ಎನ್ನುತ್ತೇನೆ ಬೇಕಾದರೆ ಕನ್ನಡ ಬೀಜದಿಂದ ಹುಟ್ಟಿದವನೆಂದು!"

"ಕಾರಣವಿಲ್ಲದೆ ಹಟ, ಬಂಗಾರದಂತಹ ಬದುಕನ್ನು ವ್ಯರ್ಥ ಮಾಡಿ-ಕೊಳ್ಳಬೇಡ! ನೋಡು, ನಾನು ಹೇಳಿದಂತೆ ಕೇಳಲಿಕ್ಕೆ ಒಪ್ಪಿ ಪ್ರಾಣ-ವುಳಿಸಿಕೊಳ್ಳು!"

"ಇದೊಂದು ಬದುಕು ಹೀಗೆಯೆ ಹೋಗಬೇಕಾಗಿದ್ದರೆ ಹೋಗಲಿ! ನನ್ನ ವಿಜಯನಗರಕ್ಕಾಗಿ ಇನ್ನೂ ನೂರು ನೂರು ಸಲ ಕನ್ನಡಿಗನಾಗಿ, ಇಲ್ಲಿಯೆ ಹುಟ್ಟಿ ಬರುತ್ತೇನೆ. ನಿಮ್ಮಂತಹ ಮನೆಯ ಕಳ್ಳರ ಸುಲಿಗೆಯಿಂದ ಕರ್ಣಾಟಕ ರಾಜಲಕ್ಷ್ಮಿಯನ್ನು ಮುಕ್ತಳನ್ನಾಗಿ ಮಾಡುತ್ತೇನೆ!"

"ಈಗ ಬಿಚ್ಚಿಬಿಟ್ಟರೆ ನೀನು ಏನುಮಾಡುವಂತಿದ್ದೀಯೆ?"

"ಎಲ್ಲಕ್ಕೂ ಮೊದಲು ನಿನ್ನ ಕುತ್ತಿಗೆಯನ್ನು ಹಿಸುಕಿ, ನಿನ್ನ ಪ್ರಾಣ-ವನ್ನು ತೆಗೆದುಬಿಡುತ್ತೇನೆ. ಆ ಮೇಲೆ ನಾನು ನಿಶ್ಚಿಂತ. ನಿನ್ನವರೆಲ್ಲರೂ ಸೇರಿ.. ಆ ಮೇಲೆ ನನ್ನನ್ನು ಕೊಂದುಹಾಕಿದರೂ ಸರಿಯೆ!"

"ನೀನು ನನ್ನ ಪಾಲಿನ ಶನಿ! ಹಾಗೆಯೆ ಬದುಕಗೊಡುತ್ತೇನೆಯೇ ನಿನ್ನನ್ನು?" ಎನ್ನುತ್ತಲೆ ಈಶ್ವರನಾಯಕನು ಕೈಯಲ್ಲಿಯ ಕಿರುಗತ್ತಿಯನ್ನು ಕಸುವಿನಿಂದ ಹಿಂದಕ್ಕೆ ಎತ್ತಿದನು. 'ಜಯಕರ್ಣಾಟಕ ರಾಜ್ಯಲಕ್ಷ್ಮಿ!'

ಎಂದು ರಾಜಶೇಖರನು ಕೂಗುತ್ತಿರುವಾಗಲೆ, ಕಿರುಗತ್ತಿಯನ್ನು ಆತನ ಸಟ್ಟೆದೆಯಲ್ಲಿ ಖಸ್ಸೆಂದು ಚುಚ್ಚಿದನು. ಕೆನ್ನೀರು ಕಾರಂಜಿಯಂತೆ ಪುಟಿದು, ಈಶ್ವರನಾಯಕನ ದೇಹವನ್ನೆಲ್ಲ ನನೆಯಿಸಿಬಿಟ್ಟಿತು. ಚುಚ್ಚಿದ್ದ ಕತ್ತಿಯನ್ನು ಜಗ್ಗಿ ಹಿರಿದು, – ಈಶ್ವರನಾಯಕನು ಆವೇಶಗೊಂಡವನಂತಾಗಿ – ಒಂದರ ಹಿಂದೆ ಒಂಗರಂತೆ, ಐದಾರು ಏಟುಗಳನ್ನು ಅಲ್ಲಿಯೆ ಮತ್ತೆ ಮತ್ತೆ ಹಾಕಿದನು. ಕಂಬದಂತಿದ್ದ ಆಲದ ಬೀಳಲನ್ನು ಹೊಂದಿಕೊಂಡು ನಿಂತಿದ್ದ ರಾಜಶೇಖರನ ಮುಖವು, ಪ್ರಾಣಹೋದುದರಿಂದ ಬಲಕ್ಕೆ ಒಲೆಯಿತು; ಆದರೆ. . ಅದರ ಗಾಂಭೀರ್ಯ ಇದ್ದಂತೆಯೆ ಇದ್ದಿತು. ರಾಜಶೇಖರನನ್ನು ಹೊತ್ತುಕೊಂಡು ಬಂದಿದ್ದ ನಾಲ್ಕು ಜನರಿಗೆ. . ಹಿಂದೆ ಹಿಂದೆ ನಡೆದುಕೊಂಡು ಬಂದ ಆ ಮಹಮ್ಮದೀಯನೊಬ್ಬನು ಮಾತ್ರ, ಪೆಚ್ಚುಪೆಚ್ಚಾದ ಮೊಗ-ದಿಂದ ಇದನ್ನೆಲ್ಲ ನೋಡುತ್ತಲಿದ್ದನು. ಈಶ್ವರನಾಯಕನಿಂದ ಕೊಲೆಯ ಅತ್ಯಾಚಾರವು ನಡೆದಾಗಲಂತೂ, ಅವನು ಅದನ್ನು ನೋಡಲಾರದವನಾಗಿ, ಮೈಮರೆತು ಬಿದ್ದುಕೊಂಡನು. ಇದ್ದುದಿದ್ದ ಹಾಗೆಯೆ ಕಸುವಿನ ಚಳಿ-ಗಾಳಿಯೊಂದು ಬೀಸಿ, ಆಲದ ಮರದ ಕೊಂಬೆಗಳು ಅಲ್ಲಾಡಲು . . ಮೊದಲೇ ಮಿಣುಕುಮಿಣುಕೆನ್ನುತ್ತಿದ್ದ ದೀವಟಿಗೆಗಳೆರಡೂ ನಂದಿಹೋದುವು. ಎಲ್ಲೆ-ಲ್ಲಿಯೂ ಭೀಷಣವಾದ ಅಂಧಕಾರವು ಹಬ್ಬಿ ಹರಿದಾಡಿತು. ಆಗ ಈಶ್ವರ-ನಾಯಕನಿಗೆ, ರಾಜಶೇಖರನ ಹೆಣದ ಬಳಿಯಲ್ಲಿ ಕುಳಿತಿರುವುದಕ್ಕೂ ಭೀತಿಯೆನಿಸಲು ತೊಡಗಿತು. ಎಲ್ಲ ಜನರೂ ಎದ್ದು, ಕಣ್ಣುಗಳನ್ನು ಸ್ವಲ್ಪ ಮುಚ್ಚಿ ತೆಗೆದು ನಿಚ್ಚಳ ಮಾಡಿಕೊಂಡು, ಕೊಳ್ಳವನ್ನು ಸೇರಿದ್ದ ಕಳ್ಳದಾರಿಯನ್ನು ಹಿಡಿದು, ನಿದಾನವಾಗಿ ತುಂಗಭದ್ರೆಯ ಕಡೆಗೆ ಸಾಗಿದರು. ಮೈಮರೆತು ಬಿದ್ದುಕೊಂಡಿದ್ದ ಮಹಮ್ಮದೀಯನು, ತಮ್ಮೊಡನೆ ಬಂದನೋ ಇಲ್ಲವೋ – ಎಂಬುದರ ಕಡೆಗೆ ಯಾರ ಲಕ್ಷ್ಯವೂ ಇರಲಿಲ್ಲ.

---

## ೨೮ನೆಯ ಪರಿಚ್ಛೇದ

ರಾಜಶೇಖರನು ಹೊರಟುಹೋಗಿ ಎರಡು – ಎರಡುವರೆ – ತಾಸು-ಗಳಾಗಿರಬಹುದು; ಚಿಕ್ಕಣ್ಣನ ಮನಸ್ಸು ಅದೇತಕ್ಕೋ ತಳಮಳಗೊಳ್ಳಲು ತೊಡಗಿತು; ತಾನೂ ಜೊತೆಗೆ ಹೋಗಿಬಿಟ್ಟಿದ್ದರೆ ಒಳ್ಳೆಯದಾಗುತ್ತಿದ್ದಿತೆಂದು, ನಿಮಿಷನಿಮಿಷಕ್ಕೂ ಎನಿಸಲಾರಂಭಿಸಿತು. ಕುಟೀರದಲ್ಲಿಯ ಇನ್ನೊಬ್ಬ ಕೆಲಸಗಾರನನ್ನು ಎಬ್ಬಿಸಿ, 'ನಾನೀಗ ನಗರದತ್ತ ಹೋಗಿ ಬರುತ್ತೇನೆ; ಅದು-ವರೆಗೆ ನೀನು ಎಚ್ಚರದಿಂದ ಕುಳಿತಿರು.' ಎಂದು ಹೇಳಿ, ಗಾಳಿಯ ವೇಗದಿಂದ ಆತನು ಪೇಟೆಯ ಕಡೆಗೆ ಸಾಗಿದನು.

ಇಸ್ಮಾಯಿಲ್ ಸೇಟರ ಮನೆ ಚಿಕ್ಕಣ್ಣನಿಗೆ ಗೊತ್ತು; ನೇರವಾಗಿ ಅಲ್ಲಿಗೇ ಹೊರಟುಬಂದನು. ಬಂದು ನೋಡಿದರೆ, ಅಲ್ಲಿ ಯಾವ ಗೊಂದಲವೂ ಇರಲಿಲ್ಲ; ಗೊಂದಲ ನಡೆದುಹೋಗಿದ್ದ ಲಕ್ಷಣಗಳೂ ಇರಲಿಲ್ಲ. ಚಿಕ್ಕಣ್ಣನ ಎದೆ ಗಡಗುಟ್ಟಿ ನಡುಗಿತು. ಸೇಟರ ಮನೆಯ ಆಳುಗಳು ಕೆಲವರು ಹೊರಕ್ಕೆಯೆ ಮಲಗಿಕೊಂಡಿದ್ದರು. ಅವರನ್ನು ಎಚ್ಚರಿಸಿ ಕೇಳಿದರೆ :— 'ಎಲ್ಲಿಯ ಸಿಪಾಯಿ ಗಳು ! ಏನು ಕತೆ ! ಇಸ್ಮಾಯಿಲ್ ಸೇಟರು ಮೌಲವಿಗಳ ಕಡೆಗೆ ಹೋಗಿದ್ದ-ವರು ಇನ್ನೂ ಬಂದಿಲ್ಲಕೂಡ ! ಅಣ್ಣಾಜಿಯವರನ್ನು ಕರೆಯಲಿಕ್ಕೆ ನಮ್ಮವ-ರಲ್ಲಿ ಯಾರೂ ಬಂದಿಲ್ಲ ! ' ಎಂದು ಹೇಳಿದರು. ಚಿಕ್ಕಣ್ಣನ ಕಣ್ಣಿಗೆ ಒಮ್ಮೆಲೆ ಕಾವಳ ಮುಸುಕಿದಂತೆ ಆಯಿತು. ತನ್ನನ್ನು ತಾನು ಮರೆತವನಾಗಿ ತಟ್ಟನೆ ಕೂಗಿಕೊಂಡನು.

"ಅಯ್ಯೋ ! ಅಣ್ಣಾಜಿಯವರು ಯಾರೋ ಮೋಸಗಾರರ ಕೈಗೆ ಸಿಕ್ಕಿದ್ದಾರೆ. "

ಸೇಟಜಿಯವರ ಆಳುಗಳಿಗೆ ಅದನ್ನೆಲ್ಲ ತೆಗೆದುಕೊಂಡು ಏನು ಮಾಡು-ವುದಿದೆ? ಮತ್ತೆ ಮುಸುಕುಹಾಕಿಕೊಂಡು, – ಮುಖವನ್ನು ಹೊರಕ್ಕೆ ತೆಗೆದಾಗ ಮುಸುಕಿನಲ್ಲಿ ನುಗ್ಗಿದ್ದ ಚಳಿಗಾಗಿ – 'ಹುಹುಹೂ' ಎಂದು ನಡುಗುತ್ತ, ಮಲಗಿಕೊಂಡುಬಿಟ್ಟರು. ಚಿಕ್ಕಣ್ಣನು ಹಾಗೆಯೆ ಹೊರಟು, ಒಳಗೋಟೆಯ ಕಡೆಗೆ ನಡೆದು, ದುರ್ಗಾಧಿಪತಿ – ಕುಮಾರನಾಯಕನ ಮನೆಯನ್ನು ಸಂಧಿಸಿದನು. ಬಾಗಿಲಾಳನ್ನು ಕೇಳಿದಾಗ, ಕುಮಾರ-ನಾಯಕನು ಇನ್ನೂ ಎಚ್ಚತ್ತಿದ್ದು, ನಾರಾಯಣಪಂಡಿತರೊಡನೆ ಮಾತನ್ನು

ಆಡುತ್ತ ಕುಳಿತಿದ್ದಾನೆಂಬ ವಿಷಯ ಚಿಕ್ಕಣ್ಣನಿಗೆ ಗೊತ್ತಾಯಿತು. ಕೂಡಲೆ ಅಪ್ಪಣೆಯನ್ನು ಸಹ ಕೇಳಿಕೊಳ್ಳದೆ, ಅವರಿಬ್ಬರೂ ಕುಳಿತಿದ್ದಲ್ಲಿಗೆ ಅವನು ಒಮ್ಮೆಲೆ ನುಗ್ಗಿಬಿಟ್ಟನು. ನಾರಾಯಣ ಪಂಡಿತರು ಬೆಚ್ಚಿಬಿದ್ದವರಾಗಿ ಕೇಳಿದರು.

" ಏನು ಚಿಕ್ಕಣ್ಣಾ ! ಈಗ ಒಮ್ಮೆಲೆ ಬಂದುಬಿಟ್ಟಿದ್ದೀಯೆ ? "

ಚಿಕ್ಕಣ್ಣನ ಬಾಯಿಂದ ಮಾತುಗಳೆ ಹೊರಡಲೊಲ್ಲವು.

" ಇದೇನು ? ಹೀಗೇತಕ್ಕೆ ಹೌಹಾರಿದವನಂತಿದ್ದೀಯೇ ? ಏನಾದರೂ ವಿಶೇಷವೇ ? "

ಬಿಗಿದು ಬರುತ್ತಿರುವ ಕಂಠದಲ್ಲಿ ಚಿಕ್ಕಣ್ಣನು, ನಡೆದಿದ್ದ ವಿಷಯ-ವನ್ನೆಲ್ಲ ಹೇಳಿದನು. ತಾನು ಇಸ್ಮಾಯಿಲ್ ಸೇಟರ ಮನೆಗೆ ಹೋಗಿಬಂದು-ದನ್ನೂ ಅರಿಕೆಮಾಡಿಕೊಂಡನು. ಕೇಳಿ ಇಬ್ಬರೂ ಸಿಡಿಲುಬಡಿದವರಂತಾಗಿ ಹೋದರು. ಬೆರಗು–ಬೆದರಿಕೆಗಳ ಧ್ವನಿಯಲ್ಲಿ ಇಬ್ಬರೂ ಒಮ್ಮೆಲೆ ನುಡಿದರು:

" ಇದೇನಿದು ? ಯಾರದಾದರೂ ಮೋಸವಿರಬಹುದೇ ? "

ಚಿಕ್ಕಣ್ಣನು ಕಂಬನಿಗರೆಯುತ್ತಲೆ ಹೇಳಿದ.

" ಬಂದಿದ್ದವರು ನಿಜವಾದ ಮುಹಮ್ಮದೀಯರೋ . . ? ಏನು . . ಮುಹಮ್ಮದೀಯರ ವೇಷಹಾಕಿಕೊಂಡು ಇದ್ದರೊ . . ? ಯಾರು ಬಲ್ಲರು ಪಂಡಿತರೇ ! ಈಗ ತಡೆಮಾಡಿ ಉಪಯೋಗವಿಲ್ಲ. ಅಣ್ಣಾಜಿಯವರನ್ನು ಹುಡುಕಲಿಕ್ಕೆ–ಕೂಡಲೆ–ಬೇರೆಬೇರೆಯವರನ್ನು ಅತ್ತಿತ್ತ ಕಳುಹಿಸಬೇಕು. "

ಕುಮಾರನಾಯಕನು ಒಂದೂ ಮಾತನ್ನಾಡದೆ, ಎದ್ದು ಉಡುಪು-ತೊಡವುಗಳನ್ನು ಹಾಕಿಕೊಂಡನು; ಚಿಂತಾತುರಸ್ವರದಲ್ಲಿ ಹೇಳಿದನು.

" ಪಂಡಿತರೇ ! ನೀವು ಚಿಕ್ಕಣ್ಣ ಸೇರಿ ಮುಂದೆ ನಡಿಯಿರಿ ! ಕೋಟೆ-ಗಾವಲಿನ ದಂಡಾಳುಗಳನ್ನು – ಕೆಲವು ಜನರನ್ನು–ಕರೆದುಕೊಂಡು, ನಾನೂ ಇದೀಗಲೆ ಬಂದುಬಿಡುತ್ತೇನೆ. "

ಪಂಡಿತರು – ಚಿಕ್ಕಣ್ಣ ಶಾಂತಿಕುಟೀರದ ಕಡೆಗೆ ಹೊರಟರು. ಕುಮಾರನಾಯಕನು ದಂಡಿನ ಬೀಡಿನ ದಾರಿಯನ್ನು ಹಿಡಿದು ನಡೆದನು.

* * * *

ಪಂಡಿತರು – ಚಿಕ್ಕಣ್ಣ ಶಾಂತಿಕುಟೀರಕ್ಕೆ ಮರಳಿ ಬಂದಾಗ, ರಾತ್ರಿ

ಮೂರುವರೆ ಪ್ರಹರಗಳನ್ನು ಮಿಕ್ಕಿಹೋಗಿದ್ದಿತು. ಅವರಿಬ್ಬರೂ ಕುಮಾರ-ನಾಯಕನ ದಾರಿಯನ್ನು ಕಾಯುತ್ತ – ಔದಾಸೀನ್ಯದ ಮೌನತೆಯಿಂದ ಮೊಗಸಾಲೆಯಲ್ಲಿಯೆ ಕುಳಿತುಕೊಂಡರು. ಕುಟೀರದ ಕೆಲಸಗಾರರೆಲ್ಲರೂ ಎಚ್ಚತ್ತು, ಅಣ್ಣಾಜಿಯವರ ನಿರ್ಗಮನದ ಬಗೆಗೆ ಕಾತರರಾಗಿ, ಅತ್ತಿತ್ತ ಸುಳಿದಾಡಲು ತೊಡಗಿದರು. ಅಷ್ಟರಲ್ಲಿಯೆ ಹೊರಬಾಗಿಲಿನ ಆಳು – ಒಬ್ಬ ಮಹಮ್ಮದಿಯನ ಕೈಯನ್ನು ಹಿಡಿದುಕೊಂಡು – ಪಂಡಿತರು ಕುಳಿತಲ್ಲಿಗೆ ಬಂದ. ಮಹಮ್ಮದಿಯನ ಸರ್ವಾಂಗವು ಗಾಬರಿಯಿಂದ ಥರಥರನೆ ಕಂಪಿಸುತ್ತಿದ್ದಿತು. ಕಣ್ಣಿಂದ ನೀರು ಧಾರೆಗೊಂಡಿದ್ದಿತು. ಅವನು ಪಂಡಿತರನ್ನು ಕಂಡೊಡನೆಯೆ, ಅವರ ಅಡಿಗಳಲ್ಲಿ ಬಿದ್ದು.. ಗಟ್ಟಿಯಾಗಿ ಅಳಲುತೊಡಗಿದನು. ಏನೆಂದು ಕೇಳಿದರೆ ಆತನಿಗೆ ಹೇಳುವುದಕ್ಕೆ ಆಗಲೊಲ್ಲದು. ಚಿಕ್ಕಣ್ಣನು ಒಂದೆರಡು ನಿಮಿಷಗಳವರೆಗೆ, ಅವನನ್ನು ನಿಟ್ಟಿಸಿ ನೋಡಿಯೆ ನೋಡಿದ. ಬಳಿಕ ಹೇಳಿದ:

" ಪಂಡಿತರೆ, ರಾತ್ರಿಯಲ್ಲಿ ಬಂದಿದ್ದ ಐವರಲ್ಲಿ ಈತನೂ ಇದ್ದನೆಂದು ಕಾಣುತ್ತದೆ. "

ನಾರಾಯಣ ಪಂಡಿತರು ಹಾರಿಬಿದ್ದು, ಹಿಂದಕ್ಕೆ ಸರಿದು ಕೇಳಿದರು.

" ಇವನೂ ಇದ್ದನೇ ? "

ಮಹಮ್ಮದೀಯನು ನಸುವೆ ಅಳುವನ್ನು ತಡೆದು ಹೇಳಿದನು.

" ನಾನೂ ಇದ್ದೆ ಬುದ್ಧೀ ! ದುರಗಪ್ಪನಾಯಕ. . ನಮಗೆಲ್ಲ ಇಲ್ಲದ ಆಶೆ ಹಚ್ಚಿ. . ನಮ್ಮ ಕಡೆಯಿಂದ ಮೋಸದ ಕೆಲಸ ಮಾಡಿಸಿದ ! . . . . "

ನಾರಾಯಣಪಂಡಿತರು ಕುತೂಹಲ-ಕರುಣೆಗಳೊಂದಿಗೆ ಕೇಳಿದರು.

" ದುರಗಪ್ಪನಾಯಕ, ಯಾರವನು ? ನಿಮ್ಮ ಕಡೆಯಿಂದ ಮೋಸವನ್ನೇನು ಮಾಡಿಸಿದ ? "

" ದಂಡಿನಲ್ಲಿ, ಹೊಸತಾಗಿ . . ಕುದುರೆಸವಾರರಿಗೆ ಮೇಲಾಳಾಗಿ ಬಂದಿದ್ದಾನಲ್ಲ ! ಆತನೇ ದುರಗಪ್ಪನಾಯಕ ಬುದ್ಧೀ ! ಸೈನ್ಯದಿಂದ ನಮ್ಮನ್ನು ತೆಗೆದುಹಾಕಿದ್ದರು; ದೊರೆಗಳಿಗೆ ಹೇಳಿ, ಮತ್ತೆ ನಿಮ್ಮನ್ನು ಸೈನ್ಯಕ್ಕೆ ಸೇರಿಸಿಕೊಳ್ಳುತ್ತೇವೆಂದು ಆಶೆ ತೋರಿಸಿದರು. ಮಿಕ್ಕವರನ್ನು ರಾಜಧಾನಿ-ಯಿಂದ ಹೊರಕ್ಕೆ ಅಟ್ಟಿದರೂ, ನಿಮ್ಮನ್ನು ಹಾಗೆ ಮಾಡುವುದಿಲ್ಲವೆಂದು

ಹೇಳಿದರು. ಮೊದಲು ಮೊದಲು ನಾನು ಅವರ ಮಾತಿಗೆ ಬಲಿ ಬಿದ್ದಿರಲಿಲ್ಲ ಬುದ್ಧೀ! ಬದುಕಬೇಕೆಂಬ ಆಶೆ ಕೆಟ್ಟ ಬುದ್ಧೀ! ಎಂತಲೆ ಅವರು ಹೇಳಿದಂತೆ ಮಾಡಲಿಕ್ಕೆ ಸಿದ್ಧನಾದೆ, ಬುದ್ಧೀ!"

"ಏನೆಂದು ಹೇಳಿದ ಆತ?"

"ದೊರೆಗಳವರದೊಂದು ಕೆಲಸಮಾಡಿಕೊಡಬೇಕು..ಎಂದು ಹೇಳಿದ ಬುದ್ಧೀ!"

"ಅದೇನು? ಯಾವ ಕೆಲಸ?"

"ನಾವು ನಾಲ್ಕುಜನ ಮುಹಮ್ಮದೀಯರು ಸೇರಿ, ಮೋಸಮಾಡಿ, ಅಣ್ಣಾಜಿಯವರನ್ನು – ದೆವ್ವನಕೊಳ್ಳಕ್ಕೆ – ಹೊತ್ತುತಂದು ಕೊಡಬೇಕೆಂದು ಹೇಳಿದರು ಬುದ್ಧೀ!"

"ಏನು..?"

"ಹೌದು ಬುದ್ಧೀ! ನನಗೆ ಮೊದಲಿಗೆ ಯಾವ ಮಾತೂ ಗೊತ್ತಿರಲಿಲ್ಲ ಬುದ್ಧೀ! ಹೀಗೆಲ್ಲ ಆಗುತ್ತದೆ.. ಅಂತ ಮೊದಲೇ ಗೊತ್ತಾಗಿದ್ದರೆ, ನಾನು ಈ ಕೆಲಸಕ್ಕೆ ಒಪ್ಪಿಕೊಳ್ಳುತ್ತಲೆ ಇರಲಿಲ್ಲ ಬುದ್ಧೀ!"

ಪಂಡಿತರು ಚಿಕ್ಕಣ್ಣ.. ಇಬ್ಬರೂ ಒಮ್ಮೆಲೆ ಕೇಳಿದರು.

"ಏನು? ಏನಾಯಿತೀಗ?"

ಮುಹಮ್ಮದೀಯನು ಅಳುತಳುತಲೆ ಹೇಳಿದನು.

"ಹೊಸ ದಂಡನಾಯಕರು ಇಲ್ಲವೇ ಬುದ್ಧೀ! ಅವರಿಗೆ ದೊರೆಗಳು ಅಪ್ಪಣೆಕೊಟ್ಟಿದ್ದರಂತೆ ಬುದ್ಧಿ! ದೆವ್ವದ ಕೊಳ್ಳದಲ್ಲಿ ಅವರು, ಅಣ್ಣಾಜಿಯವರನ್ನು ಕತ್ತಿಯಿಂದ ಇರಿದಿರಿದು..ಕೊಂದುಹಾಕಿದರು ಬುದ್ಧೀ!"

ಪಂಡಿತರು – ಚಿಕ್ಕಣ್ಣ – ಇಬ್ಬರೂ ಮಕ್ಕಳಂತೆ ಕೂಗಿ ಕೂಗಿ ಅಳಲು ತೊಡಗಿದರು.

"ಅಣ್ಣಾಜೀ! – – ಅಯ್ಯೋ – – ಅಣ್ಣಾಜೀ!"

ಶಾಂತಿಕುಟೀರದ ಜನರೆಲ್ಲರೂ ಒಂದೆ ಕಡೆಯಲ್ಲಿ ಸೇರಿದರು. ಎಲ್ಲರೂ ಕೂಗಿ ಕೂಗಿ ಅಳುವವರೇ! ಅಷ್ಟರಲ್ಲಿಯೆ ಕುಮಾರನಾಯಕನು – ನಲವತ್ತು ಐವತ್ತು ಜನ – ದಂಡಾಳುಗಳನ್ನು ಜೊತೆಗೆ ಕರೆದುಕೊಂಡು ಅಲ್ಲಿಗೆ ಬಂದನು. ಶಾಂತಿಕುಟೀರವಾಗ ಅಶಾಂತಿಕುಟೀರವಾಗಿ ಹೋಗಿದ್ದಿತು.

ಎಲ್ಲೆಲ್ಲಿಯೂ ಅಳುವು; ಎಲ್ಲೆಲ್ಲಿಯೂ ಕಂಬನಿ. ಕುಮಾರನಾಯಕನನ್ನು ಕಂಡೊಡನೆಯೆ ಪಂಡಿತರ ದುಃಖವು ಉಕ್ಕಿ ಬಂದಿತು. 'ನಾಯಕರೇ, ಅಣ್ಣಾಜಿಯವರು ನಮ್ಮನ್ನು ಕೈಬಿಟ್ಟು ನಡೆದರು..!' ಎಂದು ಅಳುವಿನ ಆವೇಶದಲ್ಲಿಯೆ ಕೂಗಿಕೊಂಡರು. ಕುಮಾರನಾಯಕನು ಎಲ್ಲರನ್ನೂ ಸಂತ-ವಿರಿಸಿ, ಏನಾಗಿದೆಯೆಂಬುದನ್ನೆಲ್ಲ – ಸುಮ್ಮಗೆ ಕುಳಿತು – ಪಂಡಿತರಿಂದ ಕೇಳಿಕೊಂಡನು. ಬಳಿಕ ಒಮ್ಮೆಲೆ ಬಲದ ಮುಷ್ಟಿಯಿಂದ ಎದೆಯನ್ನು ಗುದ್ದಿಕೊಂಡು ನುಡಿದನು.

"ಅಯ್ಯೋ! ನರಸಿಂಹನಾಯಕರು ಬಂದು ಕೇಳಿದರೆ, ಇನ್ನು ಎಲ್ಲಿಯ ಅಣ್ಣಾಜಿಯನ್ನು ತೋರಿಸಲಿ?" ಕುಮಾರನಾಯಕನ ಕಣ್ಣುಗಳಲ್ಲಿ, ಕಂಬನಿಯಾಗ ಧಾರಾಕಾರವಾಗಿ ಸುರಿಯುತ್ತಿದ್ದಿತು. ಸುದ್ದಿಯನ್ನು ತಂದಿದ್ದ ಮಹಮ್ಮದೀಯನನ್ನೊಡಗೊಂಡು, ಕುಮಾರನಾಯಕ, ನಾರಾಯಣ-ಪಂಡಿತರು, ಚಿಕ್ಕಣ್ಣ, ಬೇರೆ ಐದಾರುಜನ.. ಶಾಂತಿಕುಟೀರದ ಕೆಲಸಗಾರರು.. ಎಲ್ಲರೂ ಸೇರಿ, ದೆವ್ವದ ಕೊಳ್ಳದ ದಾರಿಯನ್ನು ಹಿಡಿದರು. ಬಂದಿದ್ದ ದಂಡಾಳುಗಳು ಮರಳಿ ತಮ್ಮ ಬೀಡಿಗೆ ನಡೆದರು. ಆಗ ಕೋಳಿಗಳು ಎದ್ದು ಕೂಗಲು ತೊಡಗಿದ್ದುವು.

---

## ೨೯ನೆಯ ಪರಿಚ್ಛೇದ

ಬೆಳಗಾಗಿ ಎರಡು ಮೂರು ಗಳಿಗೆ ಹೊತ್ತೇರುವುದರಲ್ಲಿದೆ. ನಗರದ ಜನರ ಬಾಯಲ್ಲೆಲ್ಲ ರಾಜಶೇಖರನ ಮರಣದ ವಿಷಯವನ್ನು ಒಳಗೊಂಡ ಮಾತುಗಳೇ! ಬೀದಿಬೀದಿಗಳಲ್ಲಿಯೂ ಮನೆಮನೆಗಳಲ್ಲಿಯೂ – ಹೆಂಗಸರು ಮಕ್ಕಳಲ್ಲಿ ಕೂಡ – ಇದರ ಮೂಲಕವಾದ ಅಸಮಾಧಾನದ ಉದ್ಗಾರಗಳೇ! ಕಲ್ಲಿನಾಥೇಶ್ವರನ ದೇವಾಲಯದ ಮುಂಜಗುಲಿಯ ಮೇಲೆ, ಕಾಶೀಪತಿ-ಮಹಾಲಿಂಗ ಇಬ್ಬರೂ ಕುಳಿತು, ಕಂಬನಿಗರೆಯುತ್ತ, ಅಣ್ಣಾಜಿಯ ಗುಣಗಳನ್ನು ಒಂದೊಂದಾಗಿ ಕೊಂಡಾಡುತ್ತಲಿದ್ದರು. ಗಂಗಣಯ್ಯನಿಗೆ ಈ ಸುದ್ದಿ ತಿಳಿದೊಡನೆಯೆ, ದುಃಖದಿಂದ ಮೈಮರೆತವನಾಗಿ, ದೆವ್ವನ ಕೊಳ್ಳದ ಕಡೆಗೆ ಹೊರಟುಹೋಗಿ ಬಿಟ್ಟಿದ್ದ.

ನೋಡುನೋಡುವುದರಲ್ಲಿಯೆ, ಮುಖ್ಯ ಮಸೀದೆಯ ಮುಂದೆ ಮಹಮ್ಮದೀಯರ ನೆರವಿ ಸೇರಿತು. ಎಲ್ಲರ ಬಾಯಲ್ಲಿಯೂ ಒಂದೆ ಬಗೆಯ ಮಾತು: "ಅಜ್ಞಾಜಿಯವರನ್ನು ಮೋಸಮಾಡಿ, ದೆವ್ವನಕೊಳ್ಳಕ್ಕೆ ಹೊತ್ತು-ಕೊಂಡು ಒಯ್ದವರು ಯಾರು ಇರಬಹುದು..? ಅವರು ಇಸ್ಲಾಂ ಧರ್ಮದವರಲ್ಲ! ಹರಾಮ್ ಜನರು! ಈಗ ಅವರು ಕೈಗೆ ಸಿಕ್ಕಿದರೆ, ಈ ಮಸೀದೆಯ ಎದುರು ನಿಲ್ಲಿಸಿ, ಒಬ್ಬೊಬ್ಬರ ಕುತ್ತಿಗೆಯನ್ನು ಹತ್ತು ಹತ್ತು ಸಲ ಕುಯ್ದು ಹಾಕಬೇಕು; ಆಗಲೂ ಅವರು ಮಾಡಿದ್ದ ಅಪರಾಧಕ್ಕೆ ತಕ್ಕ ಶಿಕ್ಷೆಯಾಗದು!'' ಮಹಮ್ಮದೀಯರ ನೆರವಿಯನ್ನು ನೋಡಿದರೆ, ಎಲ್ಲೆಲ್ಲಿಯೂ ಬಾಯಲ್ಲಿ ರೋಷೋದ್ಗಾರ! ಕಣ್ಣಲ್ಲಿ ಸೂಸಿ ಸಡೆದ ಕಂಬನಿಗಳು

*    *    *    *

ಹೊತ್ತು ಒಂದು ಪ್ರಹರಕ್ಕೆ ಬಂದಿದ್ದರೂ ಪೇಟೆಯ ಅಂಗಡಿಗಳ ಬಾಗಿಲು, ಒಂದೂ ತೆರೆದಿರಲಿಲ್ಲ. ವರ್ತಕರು ಅಲ್ಲಲ್ಲಿ ಗುಂಪುಗೂಡಿ ಕುಳಿತು, ರಾಜಶೇಖರನ ಸಚ್ಚಾರಿತ್ರಗಳನ್ನು ನೆನೆದು ನೆನೆದು ಕಳವಳಿಸುವುದರಲ್ಲಿದ್ದರು. ಹೊಸ ದೊರೆ, ಹೊಸ ದಂಡನಾಯಕರನ್ನು ಬಗೆ-ಬಗೆಯಾಗಿ ಬೈದು ಶಪಿಸದೆ ಇರುವವರು, ವರ್ತಕರ ಗುಂಪಿನಲ್ಲಿ ಎಲ್ಲಿಯೂ ಕಾಣುತ್ತಿರಲಿಲ್ಲ. 'ಅಯ್ಯೋ! ನರಸಿಂಹನಾಯಕರು ಇಲ್ಲಿಯೆ ಇದ್ದುಬಿಟ್ಟಿದ್ದರೆ ಇಷ್ಟೆಲ್ಲ ಅನರ್ಥ ನಡೆಯುತ್ತಿದ್ದಿತೇ?' ಎಂಬ ಮಾತು, ಎಷ್ಟೋ ಜನರ ಬಾಯಿಂದ– ನಿಟ್ಟುಸಿರಿನೊಂದಿಗೆ ಹೊರಟು – ಆಗಾಗ ಕಿವಿಗೆ ಬೀಳುತ್ತಿದ್ದಿತು.

*    *    *    *

ಬೇರೆ ಬೇರೆ ದಂಡಿನ ಬೀಡುಗಳಿಗೆ ಈ ವರ್ತಮಾನ ಬಂದು ತಲ್ಪುವುದೇ ಅವಕಾಶ. ಕೇಳಿದೊಡನೆಯೆ ಕಾಲಾಳುಗಳು, ಮೇಲಾಳುಗಳು, ತೇರಾಳುಗಳು, ಮಾವುತರು, ರಾವುತರು ಎಲ್ಲರೂ ಶೋಕಸಂತಾಪಗಳಿಂದ ಮೈಮರೆತು ಹೋದರು; ತಾವೀಗ ಏನುಮಾಡಬೇಕೆಂಬುದನ್ನು ತಿಳಿಯದವರಾದರು. ಮತ್ತೆ 'ಎಂತಹ ದುಷ್ಕೃತ್ಯವನ್ನೇ ಮಾಡಿರಲಿ! ಪೆದ್ದರಾಯನು ಸಿಂಹಾಸನವನ್ನೇರಿದ ಸಮ್ರಾಟ! ಈಗ ಆತನಿಗೆ ನಾವು ವಿರೋಧಿಗಳಾಗಿ ವರ್ತಿಸಿದರೆ, ಸಾಮ್ರಾಜ್ಯದಲ್ಲೆಲ್ಲ ಅವ್ಯವಸ್ಥೆಯುಂಟಾದೀತು!' ಎಂದು ಹಲವು ಜನರ ವಿವೇಕಬುದ್ಧಿಗೆ ಎನಿಸಿ, ತಿಳಿಯದಿರುವವರಿಗೆ ಈ ಮಾತನ್ನು

ತಿಳುಹಿಸಿ ಹೇಳಿ, ಕೋಪ – ತಾಪಗಳ ಬೇಗೆಯಲ್ಲಿ ಕರುಳುಗಳನ್ನು ಕುದಿಸಿ ಕೊಳ್ಳುತ್ತ, ಉದಾಸೀನಭಾವದವರಾಗಿ ಕುಳಿತುಬಿಟ್ಟರು.

* * * *

ಇದ್ದುದಿದ್ದ ಹಾಗೆಯೆ ನಗರದ ಮೂಲೆಮೂಲೆಯಲ್ಲಿಯೂ ಸುದ್ದಿ ಯೊಂದು ಹರಿಯಿತು :

**“ ಅಣ್ಣಾಜಿಯವರ ಮೃತದೇಹವನ್ನು ತಂಮ ಶಾಂತಿಕುಟೀರದಲ್ಲಿ ಹಾಕಿದ್ದಾರೆ. ”**

ಬೀದಿಬೀದಿಗಳಲ್ಲಿಯೂ ಜನರ ಗುಂಪುಗಳು ಸಾಗರದ ತೆರೆಗಳಂತೆ ತಿರುಗಾಡಲು ತೊಡಗಿದುವು. ಕೆಲವು ಗುಂಪುಗಳು ಮಾತ್ರ ಶಾಂತಿಕುಟೀರದ ದಾರಿಯನ್ನು ಹಿಡಿದು ನಡೆದಿರಬಹುದು! ಅಷ್ಟರಲ್ಲಿಯೆ ರಾಜಧಾನಿ ಯಲ್ಲಿ, ಎಲ್ಲ ಕಡೆಗಳಲ್ಲಿಯೂ ಡಂಗುರದ ಧ್ವನಿಗಳು.. ಒಮ್ಮೆಲೆ ಕೇಳಲು ತೊಡಗಿದುವು.

“ ಕೇಳಿರಿ! ಎಲ್ಲಾ ಜನರೂ ಕೇಳಿರಿ! ಅಣ್ಣಾಜಿಯವರ ಸ್ಮಶಾನ-ಯಾತ್ರೆಗಾಗಿ, ರಾಜಧಾನಿಯಲ್ಲಿದ್ದವರು ಯಾರೂ ಹೋಗಲಾಗದೆಂದು ದೊರೆಗಳ ಕಟ್ಟಪ್ಪಣೆಯಾಗಿದೆ. ಈ ಅಪ್ಪಣೆಯನ್ನು ಮೀರಿ ಯಾರಾದರೂ ಹೋದುದಾದರೆ, ಅವರು ಕ್ರೂರವಾದ ಶಿಕ್ಷೆಗಳಿಗೆ ಗುರಿಯಾಗುವರು. ”

* * * *

ಡಂಗುರದ ಧ್ವನಿಯು ಕಿವಿಗೆ ಬಿದ್ದ ಜನರಲ್ಲೆಲ್ಲ ಇದೇಬಗೆಯ ಉದ್ಗಾರಗಳು:—

“ ಶಿಕ್ಷೆಯಾದರೆ ಆಗಲೇಳಿ! ಅದಕ್ಕೆ ಯಾರು ಹೆದರಿದ್ದಾರೆ? ‘ ದೊರೆಯು ದೇವರಿಗೆ ಸಮಾನ ’ ಎಂದು ಸುಮ್ಮನಿರಬೇಕಾಗಿ ಬಂದಿದೆ. ಇಲ್ಲದಿದ್ದರೆ.. ಸಿಕ್ಕಸಿಕ್ಕಹಾಗೆ ಅಪ್ಪಣೆಹೊರಡಿಸುತ್ತಿರುವ ಈ ಪೆದ್ದರಾಯನ ಮೂಳೆಗಳಾದರೂ ಉಳಿಯುತ್ತಿದ್ದುವೇ? ಅಣ್ಣಾಜಿಯವರಿಗಿಂತ ಮೊದಲು ಈತನ ಸ್ಮಶಾನಯಾತ್ರೆಯನ್ನು ಹೊರಡಿಸುತ್ತಿದ್ದೆವು! ”

“ ಒಂದು ವೇಳೆ ನಾವು ಅಪ್ಪಣೆಯನ್ನು ಮೀರಿದೆವೆನ್ನಿ! ದೊರೆಯು ನಮ್ಮನ್ನು ಕೊಲ್ಲುವುದಕ್ಕಿಂತ ಹೆಚ್ಚಿನ ಶಿಕ್ಷೆಯನ್ನೇನೂ ಮಾಡಲಾರನಲ್ಲವೇ? ಅಂತಹ ಮಹಾರಾಯನೇ ಸತ್ತುಹೋಗಿದ್ದಾನೆ; ನಮ್ಮಂತಹ ಕ್ರಿಮಿಕೀಟ-

ಗಳು ಬದುಕಿಕೊಂಡಿದ್ದು ಮಾಡುವುದಾದರೂ ಏನು? ಕೊಡಲಿ ಹೋಗಿ! ನಮಗೆ ಬೇಕಾದಹಾಗೆ ಶಿಕ್ಷೆಯನ್ನು ಕೊಡಲಿ!"

ಡಂಗುರದ ರಾಜಾಜ್ಞೆಯನ್ನು ಯಾರೂ ಲೆಕಕ್ಕೆ ತರಲಿಲ್ಲ! ಗುಂಪಿನ ಹಿಂದೆ ಗುಂಪು ಹೊರಡುವುದರಲ್ಲಿಯೆ ಇದ್ದುವು. ಆದರೆ ಶಾಂತಿಕುಟೀರಕ್ಕೆ ಹೋಗಬಹುದಾಗಿದ್ದ ದಾರಿಯು ಕೋಟೆಬಾಗಿಲುಗಳನ್ನೆಲ್ಲ ಮುಚ್ಚಿಸಿ ಬಿಟ್ಟುದರಿಂದ, ಜನರೆಲ್ಲರಿಗೂ ನಿರಾಶೆಯಾಯಿತು. ಹೊರಟಿದ್ದ ಗುಂಪುಗಳೆಲ್ಲ ಒಂದರ ಹಿಂದೊಂದು ಮರಳಿ ಬರಲು ತೊಡಗಿದುವು.

* * * *

ಶಾಂತಿಕುಟೀರದ ಬಳಿಯಲ್ಲಿ ಬಂದು ನೋಡಬೇಕು. ಸುತ್ತುಮುತ್ತಣ ತೋಟಗಾರರು, ಅನಾಥನಿಲಯದಲ್ಲಿರುವ ಜನರು..ಬಂದು, ಶಾಂತಿಕುಟೀರ ವನ್ನು ಮುತ್ತಿ ಮುಸುಕಿಬಿಟ್ಟಿದ್ದಾರೆ. ಹೆಬ್ಬಾಗಿಲೆದುರ ಬಯಲಲ್ಲಿಯೆ ಎತ್ತರವಾದ ಪೀಠವೊಂದನ್ನು ಹಾಕಿ, ಅದರ ಮೇಲೆ–ನೋಡುವವರೆಲ್ಲರಿಗೂ ಕಾಣುವಂತೆ–ರಾಜಶೇಖರನ ಮೃತದೇಹವನ್ನು ಇರಿಸಿದ್ದಾರೆ. ತೊಟ್ಟಿದ್ದ ಬಟ್ಟೆಗಳೆಲ್ಲ ನೆತ್ತರಿನಿಂದ ನನೆದು ಹೋಗಿವೆ. ಪ್ರಾಣ ಹೊರಟುಹೋಗಿ ಎರಡುಮೂರು ಪ್ರಹರಗಳು ಕಳೆದಿದ್ದರೂ, ಮುಖವು ಯಾವ ವಿಕಾರ ವನ್ನೂ ಪಡೆಯದೆ..ಇದ್ದಂತೆಯೆ ಇದೆ. ನೆರೆದ ನೆರವಿಯಿಂದ 'ಹೋ..! ಎಂಬ ಅಳುವಿನ ಮೊರೆತವು ಎಡೆಬಿಡದೆ ಕೇಳಬರುತ್ತಲಿದೆ.

ಕುಮಾರನಾಯಕ, ನಾರಾಯಣಪಂಡಿತರು, ಚಿಕ್ಕಣ್ಣ ಇವರೆಲ್ಲರ ಅಳುವು ಹೊಟ್ಟೆಯಲ್ಲಿಯೆ ಹುದುಗಿ ಕುಳಿತು, ಮುಖದಮೇಲೆ ಔದಾಸೀನ್ಯದ ಶಾಂತತೆಯನ್ನು ಮೂಡಿಸಿದ್ದಿತು. ಅವರು ಶವವನ್ನಿರಿಸಿದ ಪೀಠದ ಬಳಿ ಯಲ್ಲಿಯೇ ನೆಲದಮೇಲೆ ಕುಳಿತುಕೊಂಡಿದ್ದಾರೆ. ಬೇರೆ ಕೆಲವರು– ಸ್ಮಶಾನಯಾತ್ರೆಯ ಸಿದ್ಧತೆಗಾಗಿ–ಮನಸ್ಸಿಗೆ ಬೇಡವಾಗಿದ್ದರೂ– ಅನಿವಾರ್ಯದ ಆತುರವನ್ನು ತೋರಿಸುತ್ತ, ಅತ್ತಿತ್ತ ಸುತ್ತಾಡುತ್ತಿದ್ದಾರೆ.

ಹಠಾತ್ತಾಗಿ ನೆರವಿಯಲ್ಲಿ ನುಗ್ಗಿ, ದಾರಿಮಾಡಿಕೊಳ್ಳುತ್ತ – ಕೆಂಪು ಬಣ್ಣದ ತೆರೆಯ ಮುಸುಕಿನಲ್ಲಿ ಮರೆಗೊಂಡಿದ್ದ ವ್ಯಕ್ತಿಯೊಂದು–ಪೀಠವನ್ನು ಬಳಿಸಾರಿ ಬಂದಿತು. ಇವರು ಯಾರಿರಬಹುದೆಂದು ಜನರೆಲ್ಲರಿಗೂ ಆತುರ! ಎಲ್ಲರ ಕಣ್ಣುಗಳೂ ಆ ವ್ಯಕ್ತಿಯಕಡೆಗೆ ನೆಲೆನಿಂತುವು. ಪೀಠದ ಎದುರಿನಲ್ಲಿ

ಬಂದು ನಿಂತಿದ್ದ ವ್ಯಕ್ತಿ – ಥಟಕ್ಕನೆ – ಮೈಮೇಲಿನ ಕೆಂಪು ಮುಸುಕನ್ನು ರಭಸದಿಂದ ತೆಗೆದು ಬೀಸಾಡಿತು ; ನೋಡುತ್ತಿದ್ದವರಿಗೆಲ್ಲ ಆಶ್ಚರ್ಯ ! ಸುಂದರಿಯಾದ ತರುಣಿಯೊಬ್ಬಳು, ಕಂಬನಿಗಳಿಂದ ಕೆನ್ನೆಗಳನ್ನು ತೋಯಿಸಿ ಕೊಳ್ಳುತ್ತ ನಿಂತಿದ್ದಾಳೆ. ಮುಖದಮೇಲೆ ಒಂದು ವಿಚಿತ್ರವಾದ ಆವೇಶ ಬಂದವರ ಭಾವವಿದೆ. ಬಲಗೈಯಲ್ಲೊಂದು ಅಂದವಾದ ಹೂಮಾಲೆಯಿದೆ. ಆಕೆಯ ಪರಿಚಯವಿದ್ದ ಒಬ್ಬಿಬ್ಬರು ಮಾತ್ರ 'ಯಾರು . . ? ರತ್ನಾಂಬಿಕೆ . . !' ಎಂದು ಒಮ್ಮೆಲೆ ಆಶ್ಚರ್ಯೋದ್ಗಾರವನ್ನು ತೆಗೆದರು.

ರತ್ನಾಂಬಿಕೆಗೆ ಯಾರ ಮಾತುಗಳ ಕಡೆಗೂ ಲಕ್ಷ್ಯವೇ ಇರಲಿಲ್ಲ. ಆಕೆ ತನ್ನ ಎರಡೂ ಕೈಗಳಿಂದ ಹೂಮಾಲೆಯನ್ನೆತ್ತಿ, ಶವದ ಎದುರಿಗೆ ಹಿಡಿದು, ತನ್ನಷ್ಟಕ್ಕೆ ತಾನೆ ಎಂದುಕೊಂಡಳು.

" ರಾಜಶೇಖರಾ ! ನೋಡುತ್ತಿರು ನೀನು ! ಇಂದು ನನ್ನ ಪ್ರತಿಜ್ಞೆಯ ಉತ್ತರಾರ್ಧವನ್ನು ಪೂರ್ಣಮಾಡಿಕೊಳ್ಳುತ್ತೇನೆ; ಜೀವಿಸಿರುವ ವರೆಗೆ – ಬೇಡಬೇಡವೆಂದು – ನನ್ನ ಪ್ರತಿಜ್ಞಾಪೂರ್ತಿಗೆ ಅಡ್ಡಿಮಾಡಿದೆ; ನನ್ನ ಮನಸ್ಸು-ಹೃದಯುಗಳನ್ನು ಅಸ್ಥಿರಗೊಳಿಸಿ, ಕಂಡಹಾಗೆ ಕುಣಿದಾಡಿಸಿದೆ ! ಏನೇನೋ ಆಟಗಳನ್ನು ಆಡಿಸಿದೆ ! ಈಗ ನನಗೆ ಹೇಗೆ ಅಡ್ಡಿ ಮಾಡು ತ್ತೀಯೋ ಮಾಡು . . ನೋಡುತ್ತೇನೆ ! "

ಎಂದು ಹೂಮಾಲೆಯನ್ನು ಶವದ ಕೊರಳಿಗೆ ಹಾಕಿದಳು. ಜನರೆಲ್ಲರೂ ಬೆರಗುಗೊಂಡು ನೋಡುತ್ತಿರುವಾಗಲೆ – ರತ್ನಾಂಬಿಕೆಯು – ತನ್ನೊಡನೆ ತಂದಿದ್ದ ಕುಂಕುಮವನ್ನು ಶವದ ಬಲಗೈಬೆರಳಿಗೆ ಹಚ್ಚಿ, ಅದನ್ನು ತನ್ನ ಹಣೆಗೆ ಒತ್ತಿಕೊಂಡಳು. ಬಳಿಕ ಪೀಠದ ಮುಂದೆ ಉದ್ದಕ್ಕೆ ಬಿದ್ದು, ಪೊಡಮಟ್ಟು ಎದ್ದುನಿಂತು, ನಾರಾಯಣಪಂಡಿತರ ಕಡೆಗೆ ಮುಖಮಾಡಿ ಹೇಳಿದಳು.

" ಪಂಡಿತರೇ ! ರಾಜಶೇಖರನ ಬದುಕಿನ ಬಗೆಗೆ ಜಾಗ್ರತೆಯಿಂದಿರು ವಂತೆ ಹೇಳುವುದಕ್ಕೆಂದು; ನಿಮ್ಮನ್ನು ಇಂದು ನನ್ನ ಬಳಿಗೆ ಕರೆಯಿಸಿಕೊಳ-ಬೇಕೆಂದಿದ್ದೆ ! ಇನ್ನು . . ನಿಮ್ಮ ಮೇಲೇನೂ ಆ ಭಾರವನ್ನು ಹೊರಿಸಲಾರೆ ! ಅದನ್ನು ನಾನೇ ಹೊತ್ತುಕೊಂಡು ಬಿಟ್ಟಿದ್ದೇನೆ ! "

ಎಂದು ನುಡಿದವಳೇ ರಾಜಶೇಖರನ ಮುಖದ ಕಡೆಗೆ ಮತ್ತೊಂದು-

ಸಲ ಕಣ್ಣರಳಿಸಿ ನೋಡಿ, ಸಂತೃಪ್ತಿಯ ನಗೆಯೊಂದನ್ನು ನಕ್ಕಳು. ಬಳಿಕ, ಕೆಳಕ್ಕೆ ಬಿದ್ದಿದ್ದ ತೆರೆಯನ್ನು ಎತ್ತಿ ತೆಗೆದುಕೊಂಡು, ಮೊದಲಿನಂತೆಯೆ ಮುಸುಕುಹಾಕಿ, ಬಂದಿದ್ದ ಹಾಗೆಯೆ ಜನರ ಗುಂಪಿನಲ್ಲಿ ನುಗ್ಗಿ ಹೊರಟಳು. ಇದೇನು ವಿಚಿತ್ರವೆಂದು ಎಲ್ಲರಿಗೂ ಆಶ್ಚರ್ಯ. ಅವರೆಲ್ಲ ತಮ್ಮಲ್ಲಿ ತಾವೆ ನುಡಿದುಕೊಂಡರು.

"ಬುದ್ಧಿಭ್ರಂಶವಾಗಿದೆಯೇನೋ ಪಾಪ.. ಇವಳಿಗೆ!"

ನಾರಾಯಣಪಂಡಿತರು ಮಾತ್ರ ಕಂಬನಿಗರೆಯುತ್ತ, ಯಾವುದನ್ನೂ ಮಾತನಾಡದೆ ಕುಳಿತಿದ್ದರು. ರಾಜಶೇಖರನ ಸ್ಮಶಾನಯಾತ್ರೆಯು ಹೊರಟಾಗ, ಸೂರ್ಯನು ನಡುನೆತ್ತಿಗೇರಿ ಬಂದಿದ್ದ.

---

## ೩೦ನೆಯ ಪರಿಚ್ಛೇದ

ಪೆದ್ದರಾಯನಿಗೆ, ಬೆಳಗಿನಿಂದಲೂ ಬೇರೆ ಬೇರೆಯವರ ಮುಖಾಂತರವಾಗಿ–ರಾಜಧಾನಿಯ ಜನರ ಅಸಂತುಷ್ಟಿ–ಅಸಮಾಧಾನಗಳ–ಸುದ್ದಿಗಳು ಬಂದೆಬರುತ್ತಿದ್ದವು. ಒಂದೊಂದು ಸುದ್ದಿಯೂ ರಾಯನ ಹೃದಯದ ತಂತಿಗಳನ್ನು ಕೆಣಕಿ ಕೆರಳಿಸುತ್ತಿದ್ದಿತು. ಪೇಟೆಯ ವರ್ತಕರು, ಊರಲ್ಲಿಯ ಸುಖವಸತಿಗರು, ಅಧಿಕಾರಿಗಳು, ಬ್ರಾಹ್ಮಣರು, ಒಕ್ಕಲಿಗರು, ಸೈನಿಕರು ಎಲ್ಲರೂ–ತಾನು ಮಾಡಿಸಿದ್ದ ಕಾರ್ಯಕ್ಕಾಗಿ–ಸಂತಪ್ತಹೃದಯರಾಗಿದ್ದಾರೆಂಬ..ಬೇರೆ ಬೇರೆ ಬೇಹಿನವರ ಸುದ್ದಿಗಳೆಲ್ಲ ಒಟ್ಟುಗೂಡಿ, ದೊರೆಯ ಕಿವಿಗಳಲ್ಲಿ ಎಡೆಬಿಡದೆ ಕೆಲೆದಾಡಲು ತೊಡಗಿದುವು. ಆತನ ಮನಸ್ಸನ್ನು ಔದಾಸೀನ್ಯವು ಹೆಣೆದುಕೊಂಡು ಬಿಟ್ಟಿತು. ಹೊರಕ್ಕೆ ಎಲ್ಲಿಯೂ ಕುಳಿತಿರುವುದಕ್ಕೆ ಬೇಡವೆನಿಸಿ, ಶಯನಾಗಾರಕ್ಕೆ ಹೋಗಿ ಪರ್ಯಂಕದಲ್ಲಿ ಬಿದ್ದುಕೊಂಡ. ಅಲ್ಲಿಯೂ ಹೃದಯಕ್ಕೆ ಸಮತೆ ದೊರೆಯದಿರಲು, ಉಪ್ಪರಿಗೆಯನ್ನೇರಿ ಬಿಸಿಲುಮಚ್ಚಿನಲ್ಲಿ ಎಡೆಯಾಡಲು ತೊಡಗಿದ. ತಾನು ನೋಡುತ್ತಿದ್ದ ವಸ್ತುಗಳೆಲ್ಲವೂ, ಗಂಟುಮೊಗದಿಂದ ತನ್ನ ಕಡೆಗೆ ನೋಡುತ್ತಿರುವುವೆಂದು.. ಪೆದ್ದರಾಯನಿಗೆ ಕಾಣಿಸಿದುವು. ಮೇಲಕ್ಕೆ ಮುಖವೆತ್ತಿ ನೋಡಿದಾಗ, ಆಗಸದಗಲಕ್ಕೂ–ಅನಂತವಾದ–ಮನುಷ್ಯಮುಖಗಳು ಕಂಡು,

ಅವು, ತನ್ನನ್ನು ಅಣಕಿಸಿ ಅಣಕಿಸಿ ನಗುತ್ತಿರುವುವೆಂದು ಭಾಸವಾಯಿತು. ಮೊದಲಿನ ಔದಾಸೀನ್ಯವು ಇನ್ನಿಷ್ಟು ಹೆಚ್ಚಿ, ಕರುಳುಗಳು ಕೆಂಡದಲ್ಲಿ ಬಿದ್ದಂತೆ ಆಗಲು ತೊಡಗಿತು; ಮತ್ತೆಹೋಗಿ ಶಯನಾಗಾರದ ಮಂಚದ ಮೇಲೆ ಬಿದ್ದುಕೊಂಡ.

* * * *

ಹಗಲು ಇನ್ನು ಮೂರುನಾಲ್ಕುಗಳಿಗೆ ಉಳಿದಿರಬಹುದು. ಈಶ್ವರನಾಯಕನು ಪೆದ್ದರಾಯನ ಶಯನಾಗಾರದೊಳಕ್ಕೆ ನಡೆದುಬಂದ. ಪೆದ್ದರಾಯನಿಂದ ದಿನದಿನವೂ ಸಲ್ಲುತ್ತಿದ್ದ ಆದರಸತ್ಕಾರಗಳು, ಇಂದು ಯಾವುವೂ ಆತನಿಗೆ ಸಲ್ಲಲಿಲ್ಲ. ಈಶ್ವರನಾಯಕನು ಬಂದರೆ, ಪೆದ್ದರಾಯನು ಎದ್ದು ಕುಳಿತುಕೊಳ್ಳಲಿಲ್ಲ ಕೂಡ. ನಾಯಕನ ಮುಖವು ಅದೇತಕ್ಕಾಗಿಯೋ ಒಮ್ಮೆಲೆ ಕಳೆಗುಂದಿದಂತಾಯಿತು. ನಿಂತಲ್ಲಿಯೆ ನಿಂತು ಅವನು ಹೇಳಿದನು.

"ಮಹಾರಾಜ! ಜನರ ಅಸಂತುಷ್ಟಿಗಾಗಿ ತಾವು ಇಷ್ಟೊಂದು ಉದಾಸೀನರಾಗುವ ಕಾರಣವಿಲ್ಲ! ತಮ್ಮ ಹಿತದ ಹೊಣೆಯನ್ನು ನಾನು ನನ್ನ ತಲೆಯಲ್ಲಿ ತಾಳಿ ನಿಂತಿದೇನೆ. ತಮಗೆ ಸ್ವಲ್ಪವೂ ಚಿಂತೆಗೆ ಕಾರಣವಿಲ್ಲ. ಚಿಂತೆಯನ್ನು ಮಾಡುವುದಾದರೂ ಏತಕ್ಕಾಗಿ? ಎಲ್ಲ ಅಧಿಕಾರಸೂತ್ರಗಳೂ ನಮ್ಮ ಕೈಯಲ್ಲಿವೆ. ಜನರು ಅಸಂತುಷ್ಟರಾಗಿ ನಮ್ಮನ್ನು ಏನು ಮಾಡಲು ಬಲ್ಲರು? ರಾಜಧಾನಿಯಲ್ಲಿ ಎಲ್ಲೆಲ್ಲಿಯೂ ಯಾವ ಬಗೆಯ ಗೊಂದಲಗಳೂ ಏಳದಂತೆ, ಬೀದಿಬೀದಿಗಳಲ್ಲಿಯೂ ದಂಡಾಳುಗಳ ಕಾವಲು ಇರುವಂತೆ ಏರ್ಪಾಡು ಮಾಡಿದ್ದೇನೆ. ಯಾರಾದರೂ ಮಿಟ್ಕನೆ ಮಿಸುಕಿದರೆ, ಅವರನ್ನೆಲ್ಲ ತಂದು ಸೆರೆಮನೆಗೆ ಹಾಕುವಂತೆ ರಾಜಮುದ್ರೆಯೊಂದಿಗೆ ಕಟ್ಟಪ್ಪಣೆ ಹೊರಡಿಸಿಬಿಟ್ಟಿದ್ದೇನೆ."

ಪೆದ್ದರಾಯನು, ದೈನ್ಯವು ತುಂಬಿದ ನೋಟಗಳಿಂದ ಈಶ್ವರನಾಯಕನನ್ನು ನೋಡಿದನು ಮಾತ್ರ; ಮಾತನೇನೂ ಆಡಲಿಲ್ಲ. ಈಶ್ವರನಾಯಕನು ಮತ್ತೆ ಮಾತಿಗೆ ಆರಂಭಿಸಿದ.

"ತಾವು ಯಾವುದಕ್ಕಾಗಿಯೂ ಯೋಚನೆ ಮಾಡಬೇಕಾದುದಿಲ್ಲ! ಒಂದೆರಡು ದಿನಗಳು ಕಳೆದುಹೋಗಲಿ! ಜನರು ಎಲ್ಲವನ್ನೂ ಮರೆತು, ಮತ್ತೆ ಮೊದಲಿನಂತೆಯೆ ಆಗುವರು. ಆಗ ಮತ್ತೆ ಎಲ್ಲವೂ ಸೂತ್ರಬದ್ಧವಾಗಿ

ಸಾಗುವುದು. ತಮಗೆ ತಮ್ಮ ಶಸ್ತ್ರಾಸ್ತ್ರಗಳ ಮೇಲೆ ಭರವಸೆಯಿಲ್ಲವೇ? ಜನತೆಯ ಅಸಂತುಷ್ಟಿಯನ್ನು ತಮ್ಮಂತಹವರು ಏತಕ್ಕಾಗಿ ಗಣಿಸಬೇಕು?"

ಪೆದ್ದರಾಯನ ಮುಖದಿಂದ ಈಗಲೂ ಮಾತುಗಳು ಹೊರಡಲಿಲ್ಲ.

"ಮಹಾರಾಜ! ರಾಜಧಾನಿಯಲ್ಲಿ ಸಮಾಧಾನ – ಶಾಂತತೆಗಳು ನೆಲೆಗೊಳ್ಳುವ ವರೆಗೆ, ರಾಜಧಾನಿಯೊಳಕ್ಕೆ ಯಾರೂ ಬರಲಾಗದು! ರಾಜಧಾನಿಯಿಂದ ಹೊರಕ್ಕೆ ಯಾರೂ ಹೋಗಲಾಗದು! ಈ ವಿಷಯವನ್ನು ಹೇಳಿ, ಕೋಟೆಗಳ ಕಾವಲುಗಳನ್ನು ಭದ್ರವಾಗಿ ನೋಡಿಕೊಂಡಿರಬೇಕೆಂಬುದನ್ನು ತಿಳುಹಿಸಲಿಕ್ಕೆಂದು, ಕುಮಾರನಾಯಕರನ್ನು ಕರೆಯಿಸಿಕೊಂಡಿದ್ದೆ; ಆದರೆ ಅವರು ಎಲ್ಲಿ ಇದ್ದಾರೆಂಬುದರ ಗೊತ್ತೇ ಹತ್ತಲೊಲ್ಲದಾಗಿದೆ."

ಪೆದ್ದರಾಯನು ನಸುವೆ ಆತುರದ ಧ್ವನಿಯಲ್ಲಿ ಕೇಳಿದನು.

"ಕುಮಾರನಾಯಕರು ಮನೆಯಲ್ಲಿ ಇಲ್ಲವೇ..? ಎಲ್ಲಿಗೆ ಹೋಗಿದ್ದಾರೆ?"

"ಅವರು ಎಲ್ಲಿಗೆ ಹೋಗಿದ್ದಾರೆಂಬ ಸಂಗತಿ ಮನೆಯಲ್ಲಿ ಯಾರಿಗೂ ಗೊತ್ತಿಲ್ಲವೆಂತೆ! ಆದರೆ ಹೇಗೆಹೇಗೆಯೋ ನನಗೊಂದು ವರ್ತಮಾನ ತಿಳಿದು ಬಂದಿದೆ. ಮೂರನೆಯ ಪ್ರಹರದ ಸುಮಾರಿಗೆ ಅವರು, ಕುದುರೆ ಹತ್ತಿಕೊಂಡು, ಚಂದ್ರಗಿರಿಯ ದಾರಿಹಿಡಿದು ಹೋದರಂತೆ!"

"ಮೊದಲಿನಿಂದಲೂ ನನಗೆ ಗೊತ್ತು! ಕುಮಾರನಾಯಕರು ಸಾಳುವ ನರಸಿಂಹನಾಯಕರ ಪಕ್ಷಪಾತಿಗಳು! ಅಣ್ಣಾಜಿಗೆ ತೀರ ಬೇಕಾದವರು! ಅವರು ಚಂದ್ರಗಿರಿಗೇ ಹೋಗಿರಬಹುದು!"

ಎಂದಿಷ್ಟೇ ನುಡಿದು, ಧೊರೆಯು ಏನನೋ ಯೋಚಿಸುತ್ತ ಬಿದ್ದುಕೊಂಡುಬಿಟ್ಟ. ಈಶ್ವರನಾಯಕನೂ ಸ್ವಲ್ಪಕಾಲ ಸುಮ್ಮಗಿದ್ದು, ಬಳಿಕ ಮೆಲ್ಲಗೆ ಕೇಳಿದ.

"ಚಂದ್ರಗಿರಿಯ ದಾರಿಯಿಂದ ಕುದುರೆಯಾಳುಗಳನ್ನು.. ಬಿಡಬೇಕಲ್ಲವೇ – ಕುಮಾರನಾಯಕರನ್ನು ನೋಡಿಕೊಂಡು ಬರುವುದಕ್ಕೆ?"

ನಿರಾಶೆಯ ಧ್ವನಿಯಲ್ಲಿ ಪೆದ್ದರಾಯನು ಹೇಳಿದನು.

"ಹುಂ! ಕಳುಹಿಸಿ ಬಿಡಿ..ಬೇಕಾಗಿದ್ದರೆ!"

ಈಶ್ವರನಾಯಕನು ಮತ್ತೆ ಕೇಳಿದ.

"ಈ ಗೊಂದಲವೆಲ್ಲ ಮುಗಿದು ಹೋಗುವವರೆಗೆ, ಮುಹಮ್ಮದೀಯರಿಗೆ ಕೊಡಲಾಗಿದ್ದ ರಾಜಾಜ್ಞೆಯನ್ನು ಹಿಂದಕ್ಕೆ ತೆಗೆದುಕೊಂಡು ಬಿಡೋಣವೇ ?"

"ಆಗಲಿ! ಹಾಗೆಯೆ ಮಾಡಿ! ಈಶ್ವರನಾಯಕರೇ, ಸದ್ಯಕ್ಕೆ ನನ್ನನ್ನು ಯಾವ ಮಾತಿಗಾಗಿಯೂ ಕೇಳಬೇಡಿ! ಏನೇನು ಮಾಡಬೇಕಾಗಿದೆಯೋ ಎಲ್ಲವನ್ನೂ ಮಾಡಿಬಿಡಿ ನೀವೇ!"

ಸ್ವಲ್ಪಕಾಲ ಹಾಗೆಯೆ ಕುಳಿತಿದ್ದು ಬಳಿಕ ಈಶ್ವರನಾಯಕನು ಪೆದ್ದರಾಯನನ್ನು ಬೀಳ್ಕೊಂಡು ಹೊರಟುಬಿಟ್ಟನು. ಬಿದ್ದಲ್ಲಿಯೆ ಬಿದ್ದುಕೊಂಡ ದೊರೆಯು, ತನ್ನೊಳಗೆ ತಾನೆ ಯೋಚಿಸಲು ತೊಡಗಿದನು.

"ಪಾಪ! ಈಶ್ವರನಾಯಕನು ನನಗಾಗಿ ಎಷ್ಟೊಂದು ಕಷ್ಟಪಡುತ್ತಲಿದ್ದಾನೆ. ನನಗೋ! ಏನೇನೂ ಬೇಡವೆನ್ನುವಂತಹ ನಿರಾಶೆ ಮುಂಚಿಮುಸುಕಿಬಿಟ್ಟಿದೆ. ಈ ಹೇಡಿತನವು ಅದೇತಕ್ಕಾಗಿ ನನ್ನಲ್ಲಿ ಮೂಡಿಕೊಂಡಿದೆಯೋ ಏನೋ! ನನ್ನ ಪ್ರತಿಯೊಂದು ರಾಜಕೀಯ ಕಾರ್ಯದಲ್ಲಿ ತಡೆಯನ್ನೊಡ್ಡುತ್ತ ನಿಂತುದರಿಂದ, ನಾನೆ ಅಣ್ಣಾಜಿಯನ್ನು ಕೊಲ್ಲಿಸಿದೆ. ವಾಸ್ತವಸಂಗತಿಯು ಗೊತ್ತಿರದುದರಿಂದ, ಜನರು ಅಸಂತುಷ್ಟರಾಗಿರಬಹುದು! ಒಳಗಿನ ಮಾತುಗಳೆಲ್ಲ ಜನರಿಗೆ ಹೇಗೆ ಗೊತ್ತಾಗಬೇಕು? ಅಣ್ಣಾಜಿಯ ಸಾಧುತ್ವವು ಸೋಗಿನದೆಂದು ತಿಳಿದಿದ್ದರೆ, ಅವರು ಅಸಂತುಷ್ಟರಾಗುವುದಕ್ಕೆ ಕಾರಣವೇ ಇರಲಿಲ್ಲ! ಈಗ ಅದೆಲ್ಲವೂ ಲೋಕಕ್ಕೆ ಗೊತ್ತಾಗುವಂತೆ ನಾನು ಮಾಡಬೇಕು! ನಾಳೆಯಿಂದಲೇ ಈ ಏರ್ಪಾಡಿಗೆ ತೊಡಗಬೇಕು! ಎಂದರೆ ಎಲ್ಲವೂ ಸರಿಹೋಗಿ ಬಿಡುವುದು!"

ಇದ್ದುದರಲ್ಲಿಯೆ ದೊರೆಗೆ ಸ್ವಲ್ಪ ಆಶೆ–ಉತ್ಸಾಹ–ಉಂಟಾದಂತಾಯಿತು. ಮೇಲಕ್ಕೆದ್ದು, ಮೈಮೇಲೆ ಉಡುಪುತೊಡಪುಗಳನ್ನು ಹಾಕಿಕೊಂಡು, ಬಳಿಯಾಳಿಗದ ನಂಜುಂಡನನ್ನು ಕೂಗಿ ಕರೆದು ಹೇಳಿದ.

"ನಂಜುಂಡಾ! ದೇವಣ್ಣನಾಯಕರಲ್ಲಿಗೆ ಹೋಗಬೇಕಾಗಿದೆ; ಅಂದಣವನ್ನು ಸಜ್ಜುಗೊಳಿಸಬೇಕೆಂದು ಬೋಯಿಗಳಿಗೆ ಹೇಳು.. ಇದೀಗಲೇ!"

ನಂಜುಂಡನು ಅಪ್ಪಣೆಯೆಂದು ತಲೆಬಾಗಿ, ಅವಸರದಿಂದ ಹೊರಟು ಹೋದನು.

---

## ೩೧ನೆಯ ಪರಿಚ್ಛೇದ

ಪೆದ್ದರಾಯನು ರತ್ನಾಂಬಿಕೆಯ ಅಂತಃಪುರದಲ್ಲಿ ಕಾಲಿಟ್ಟಾಗ, ಹೊನ್ನಮ್ಮ – ಬಾಡಿ ಬತ್ತಿದ ಮೊಗದವಳಾಗಿ – ಒಬ್ಬಳೆ ಒಬ್ಬಳು ಓಲಗ-ಸಾಲೆಯಲ್ಲಿ ಕುಳಿತಿದ್ದಳು. ಪೆದ್ದರಾಯನು ಒಳಕ್ಕೆ ಬಂದಾಕ್ಷಣವೆ ಅವಳನ್ನು ಕೇಳಿದ.

"ಎಲ್ಲಿ..? ರತ್ನಾಂಬಿಕೆ ಎಲ್ಲಿದ್ದಾಳೆ..?"

"ಬೆಳಗಿನಿಂದಲೂ ಅವರಿಗೆ ನೆಮ್ಮದಿಯಿದ್ದಂತೆ ಇಲ್ಲ. ನಡುವೆ ಒಂದು ಸಲ, ಎಲ್ಲಿಯೋ ಹೊರಕ್ಕೆ ಹೋಗಿ ಬಂದರು. ಬಂದಾಗಿನಿಂದಲೂ ಶಯನಾಗಾರದಲ್ಲಿ ಮಲಗಿಕೊಂಡಿದ್ದವರು ಹೊರಕ್ಕೆ ಬಂದೇ ಇಲ್ಲ!"

ದಡದಡಿಸುವ ಎದೆಯಿಂದ ಪೆದ್ದರಾಯನು ಕೇಳಿದ.

"ಮಧ್ಯಾಹ್ನ ಊಟಪಾಟ ಚೆನ್ನಾಗಿ ಮಾಡಿದ್ದಾಳಲ್ಲವೆ?"

"ಎಲ್ಲಿಯ ಊಟ! ಏನು ಕತೆ! ಮಾತನಾಡಿಸಿದರೆ ಮಾತನಾಡ-ಲೊಲ್ಲರು ಕೂಡ! ತಾವು ಇಲ್ಲಿಯೆ ಆಸನದಲ್ಲಿ ಕುಳಿತುಕೊಳ್ಳಬೇಕು! ಸನ್ನಿಧಿಯು ಬಂದಿದ್ದ ವರ್ತಮಾನವನ್ನು ಅಮ್ಮಾಜಿಗೆ ತಿಳುಹಿಸಿಬರುತ್ತೇನೆ."

ಪೆದ್ದರಾಯನು ಜೋಲುಮೈಯುವನಾಗಿ ಕುಳಿತುಕೊಂಡನು. ಹೊನ್ನಮ್ಮ ಶಯನಾಗಾರದ ಕಡೆಗೆ ಹೊರಟು ನಡೆದಳು. ಪೆದ್ದರಾಯನ ಕಣ್ಣುಗಳು, ಅವಳು ಹೋದ ದಾರಿಯ ಕಡೆಗೇ ನೆಟ್ಟುನಿಂತಿದ್ದುವು. ಮೂರುನಾಲ್ಕು ನಿಮಿಷಗಳಲ್ಲಿಯೇ ಹೊನ್ನಮ್ಮ ಮರಳಿಬಂದು, ನಡುಗುವ ದನಿಯಲ್ಲಿ ಹೇಳಿದಳು.

"ಮಹಾರಾಜ! ಅಮ್ಮಾಜಿಯವರಿಗೆ ಏನಾಗಿದೆಯೇನೋ! ಎಷ್ಟು ಮಾತನಾಡಿಸಿದರೂ ಒಂದೂ ಮಾತನಾಡಲೊಲ್ಲರು!"

ದೊರೆಯು ಜಡಭಾವದಿಂದಲೆ ಎದ್ದು, ತೊದಲುನಡಿಗೆಯಲ್ಲಿ ನಡೆಯುತ್ತ, ಹೊನ್ನಮ್ಮನೊಡನೆ ಶಯನಾಗಾರದ ಕಡೆಗೆ ನಡೆದನು. ಇಬ್ಬರೂ ಒಳಕ್ಕೆ ಬಂದಾಗ ರತ್ನಾಂಬಿಕೆಯು, ತೆರೆದ ಕಣ್ಣುಗಳಿಂದ – ಯಾವುದನ್ನೋ – ನಿಟ್ಟಿಸಿ ನೋಡುತ್ತ, ಬಲಕ್ಕೆ ಮಗ್ಗಿಲಾಗಿ ಮಂಚದಲ್ಲಿ ಮಲಗಿಕೊಂಡಿದ್ದಳು. ದೊರೆಯು ಆಕೆಯ ಕಣ್ಣಿಗೆ ಬಿದ್ದೊಡನೆಯೆ—ಎರಡೂ ಕೈಗಳಿಂದ – ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು, ಕಿಟ್ಟನೆ ಕಿರಿಚಿ,

ನುಡಿದಳು.

"ಏನೇ ಇದು ಹೊನ್ನೀ! ಕಂಡಕಂಡ ಜನರನ್ನು ಹೀಗೆಯೆ ಕರೆದು ಕೊಂಡು ಬರುವುದೇನೇ ಒಳಕ್ಕೆ! ಹುಚ್ಚು....!"

ಹೊನ್ನಮ್ಮ ಗಡಗಡನೆ ನಡುಗಿದಳು. ಪೆದ್ದರಾಯನು ಬೆರಗಿನ ಲಲ್ಲೆವಾತಿನಲ್ಲಿ ಕೇಳಿದ.

"ಕಂಡಕಂಡವರು ಏತಕ್ಕಾಗಿ ಬರುತ್ತಾರೆ ರತ್ನಾ? ಇದೇನು? ಹೀಗೆತಕ್ಕೆ ಮಾಡುತ್ತಿದ್ದೀಯೇ?"

ಕಣ್ಣಮೇಲಿನ ಕೈಗಳನ್ನು ತೆಗೆದು, ಗರಗರನೆ ತಿರುಗುವ ಕಣ್ಣು ಗುಡ್ಡೆ ಗಳಿಂದ ಪೆದ್ದರಾಯನ ಕಡೆಗೆ ನೋಡುತ್ತ, ರತ್ನಾಂಬಿಕೆ ಕೇಳಿದಳು.

"ನೀವು ಯಾರು ಹಾಗಿದ್ದರೆ..?"

"ರತ್ನಾ! ಇಂದು ಇದೇನು ವಿಚಿತ್ರದ ಆಟವನ್ನು ನಡೆಯಿಸಿ ಇರುತ್ತೀಯೇ? ನನ್ನೊಡನೆ ನಗೆಯಾಡಬೇಕೆಂದಿದ್ದೀಯೇನು ಮತ್ತೆ..?"

"ನನಗೆ ಒಂದೂ ಗೊತ್ತಿಲ್ಲ! ಯಾರು ನೀನು ..?"

ಗಾಬರಿಯ ಧ್ವನಿಯಲ್ಲಿ ಪೆದ್ದರಾಯನು ಹೇಳಿದ.

"ಏಕೆ ರತ್ನಾ! ನನ್ನ ಗುರುತು ಸಿಕ್ಕಲೊಲ್ಲದೇನು ನಿನಗೆ? ನಾನು ನಿನ್ನ ರಾಯಾಜಿಯಲ್ಲವೇ ..?"

"ನನಗೆ ಯಾವ ರಾಯಾಜಿಯೂ ಬೇಕಾಗಿಲ್ಲ; ಪಾಯಾಜಿಯೂ ಬೇಕಾಗಿಲ್ಲ! ಇನ್ನೊಬ್ಬ ಗಂಡುಸಿನೊಡನೆ ಇನ್ನು ನನಗೆ ಏತಕ್ಕೆ ಬೇಕು ಮಾತು! ನನಗೆ ನನ್ನ ರಾಜಶೇಖರನು ಇದ್ದಾನೆ! ನಿನಗೆ ಗೊತ್ತಿಲ್ಲವೇನೇ ಹೊನ್ನೀ! ಇಂದು ಬೆಳಗಿನಲ್ಲಿ ರಾಜಶೇಖರನೊಂದಿಗೆ ರತ್ನಾಂಬಿಕೆಯು— ಎಂದರೆ ನನ್ನ—ಮದುವೆಯಾಗಿಬಿಟ್ಟಿದೆ. ಈ ಮಾತನ್ನು ಆಗಲೆ ಹೇಳಲಿಲ್ಲವೇ ನಿನಗೆ!"

ರತ್ನಾಂಬಿಕೆಯು ಮತ್ತೆ ಗಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿ-ಕೊಂಡಳು. ಪೆದ್ದರಾಯನು ಅವಳ ಕಣ್ಣಮೇಲಿನ ಕೈಗಳನ್ನು ತೆಗೆಯ ಬೇಕೆಂದು ಹೋಗಿ—ನಿಧಾನವಾಗಿ—ಆಕೆಯ ಕೈಯನ್ನು ಹಿಡಿದ. ರತ್ನಾಂಬಿಕೆಯು ಒಮ್ಮೆಲೆ ರೇಗಿಹೋಗಿ 'ಯಾರವರು?' ಎಂದು ಗದ್ದರಿಸಿ ಕೇಳಿದಳು; ಬಿರುಗಣ್ಣಿನಿಂದ ಪೆದ್ದರಾಯನ ಕಡೆಗೆ ಬಿಟ್ಟುಬಿಡದೆ ನೋಡಲು

ತೊಡಗಿದಳು. ನೋಡಿ ನೋಡಿ ಒಮ್ಮೆಲೆ ಕೂಗಿದಳು.

"ಹೋಗು! ನಡೆ! ನೀನು ರಾಜಶೇಖರನಲ್ಲ! ನಡೆ! ಹೋಗು!" ಎಂದು ನುಡಿಯುತ್ತಿರುವಾಗಲೆ ಎದ್ದು, ಪೆದ್ದರಾಯನ ಕೆನ್ನೆಗೆ 'ಫಟ್' ಎಂದು ಏಟೊಂದನ್ನು ಕೊಟ್ಟಳು. ದೊರೆಯು ಬೆದರಿ ಹಿಂದಕ್ಕೆ ಸರಿದ. ಹೊನ್ನಮ್ಮನಿಗೆ ಭಯದಿಂದ ಕಿರಿಚಿಕೊಳ್ಳಬೇಕೆನಿಸಿತು. ಆದರೂ ಮನಸ್ಸನ್ನು ಗಟ್ಟಿಗೊಳಿಸಿ ಆಕೆ ಕೇಳಿದಳು.

"ಇದೇನು ಅಮ್ಮಾಜೀ? ಹೀಗೇನು ಮಾಡುತ್ತಿದ್ದೀರಿ? ನಿಮಗೇನು ಹುಚ್ಚುಗಿಚ್ಚು ಹಿಡಿದಿದೆಯೇ?"

ರತ್ನಾಂಬಿಕೆ ಹೊನ್ನಮ್ಮನನ್ನು ಬಿರುಗಣ್ಣಿಂದ ನೋಡಿ, ಒಮ್ಮೆಲೆ ನಗುವುದಕ್ಕೆ ಮೊದಲುಮಾಡಿದಳು. 'ನಗುನಗುತ್ತಲೆ ಆಕೆ ಕೂಗಿ ಕೂಗಿ ಮಾತನಾಡಿದಳು.

"ಓ! ಹೊನ್ನೀ! ನನಗೆ–ನಿನಗೆ–ಹುಚ್ಚುಗಿಚ್ಚು ಹಿಡಿದಿದೆ!.. ನಾನು ಹುಚ್ಚಿ..! ಹೊನ್ನಮ್ಮಾ ನಾನು ಹುಚ್ಚಿ! ಪೆದ್ದರಾಯಾ ನಾನು ಹುಚ್ಚಿ!.."

ಮಾತು ಮುಗಿದರೂ ನಗೆಯು ಮುಗಿಯಲಿಲ್ಲ! ಬಿಟ್ಟುಬಿಡದೆ ನಡೆಯಿತು. 'ಹಾಹಾಹಾ!'

ಹೊನ್ನಮ್ಮ ಹೆದರಿಕೆಯಿಂದ ಕಂಪಿಸುತ್ತ ಕೇಳಿದಳು.

"ಮಹಾರಾಜ! ರತ್ನಮ್ಮಾಜಿಯವರನ್ನು ಭೂತಗೀತ ಹಿಡಿದಿದ್ದೀತೇನು? ಹೋಗಿ ಅಪ್ಪಾಜಿಯವರಿಗೆ–ಅಮ್ಮಾಜಿಯವರಿಗೆ–ಈ ಸ್ಥಿತಿಯನ್ನು ಹೇಳಿ, ಅವರನ್ನಿಲ್ಲಿಗೆ ಕರೆದುಕೊಂಡು ಬರುತ್ತೇನೆ."

'ಭೂತಗೀತ' ಎಂದು ಹೊನ್ನಮ್ಮ ಎಂದೊಡನೆಯೆ ಪೆದ್ದರಾಯನಿಗೆ ರಾಜಶೇಖರನ ಕೊಲೆಯು ನೆನಪಿಗೆ ಬಂದು, ನರನರಗಳೆಲ್ಲವನ್ನೂ ನಡುಗಿಸಿತು. ಇನ್ನು ತಾನಿಲ್ಲಿ ಇರಬಾರದೆಂದು ಎನಿಸಲು ತೊಡಗಿತು. ಆತುರದ ಧ್ವನಿಯಲ್ಲಿ ಅವನು ಹೇಳಿದ.

"ನೀನು ಇಲ್ಲಿಯೆ ಇರು! ನಾನೆ ಹೋಗಿ ಅವರನ್ನು ಇಲ್ಲಿಗೆ ಕಳುಹಿಸುತ್ತೇನೆ."

ಇಷ್ಟು ನುಡಿದವನೆ ಪೆದ್ದರಾಯನು ಹೊರಡುವುದಕ್ಕೆ ಅಡಿಯನ್ನು

ಎತ್ತಿದನು. ರತ್ನಾಂಬಿಕೆಯು ಒಮ್ಮೆದೊಮ್ಮೆಲೆ ಕೂಗಿ ನುಡಿದಳು.

"ರಾಯಾಜೀ! ಈಶ್ವರನಾಯಕನು ಬಹಳ ಕೆಟ್ಟವ! ಅವನು ನನ್ನ ರಾಜಶೇಖರನನ್ನು ಕೊಲ್ಲಿಸಿದ..! ನೀವು ಎಚ್ಚರದಿಂದ ಇರಬೇಕು..! ಏನು..? ರಾಜಶೇಖರನನ್ನು ಯಾರು ಕೊಂದರು ..? ಕೊಂದವರು ಯಾರು..? ಯಾರೂ ಕೊಂದಿಲ್ಲ..! ಆತನು ಇಲ್ಲಿಯೇ ಶಯನಾಗಾರದಲ್ಲಿ, ನನ್ನ ಜೊತೆಯಲ್ಲಿ ಕುಳಿತುಕೊಂಡಿದ್ದಾನೆ..! ನೀವು ಯಾರೂ ಇಲ್ಲಿ ಇರ-ಬೇಡಿ! ನಡೆಯಿರಿ! ರಾಯಾಜೀ! ರಾಜಶೇಖರನು ನಿನಗೆ ಏನೆಂದು ಹೇಳು-ತ್ತಿದ್ದಾನೆ .. ಕೇಳಿಸುತ್ತಿದೆಯೇ? ವಿಜಯನಗರದ ಸಾಮ್ರಾಜ್ಯವನ್ನು ಜಾಗ್ರತೆಯಿಂದ ನೋಡುತ್ತಿರಬೇಕಂತೆ ನೀನು! ಈಶ್ವರನಾಯಕನು ಮೋಸ-ಗಾರ! ಅವನನ್ನು ನಂಬಬೇಡ! ಅವನು ರಾಜಶೇಖರನನ್ನು ಕೊಲ್ಲಿಸಿದ.. ಅಯ್ಯೋ! ರಾಜಶೇಖರಾ..!"

ಮಾತಿನ ಕೊನೆಯೊಡನೆಯೆ ರತ್ನಾಂಬಿಕೆಯು ಗಟ್ಟಿಯಾಗಿ ಅಳುವು-ದಕ್ಕೆ ತೊಡಗಿದಳು. ಪೆದ್ದರಾಯನ ಮನಸ್ಸು ತೀರ ಕಳವಳಗೊಂಡು ಹೋಯಿತು; ಶಯನಾಗಾರದಲ್ಲಿ ನಿಲ್ಲಲಾರದವನಾಗಿ ತಟ್ಟನೆ ಅಲ್ಲಿಂದ ಹೊರಕ್ಕೆ ಹೊರಟವನು, ಹೇಗೊ ಹೇಗೊ ಹಜ್ಜೆಹಾಕುತ್ತ ಅಂದಣವಿರುವ ಸ್ಥಳದವರೆಗೆ ನಡೆದುಕೊಂಡು ಬಂದನು. ಬಂದವನೇ ಅಂದಣದೊಳಕ್ಕೆ ಸೇರಿ, ಶಕ್ತಿಗುಂದಿದನವರಂತೆ ಬಿದ್ದುಬಿಟ್ಟನು. ಬೋಯಿಗಳು ಅದನ್ನು ಎತ್ತಿಕೊಂಡು ಅರಮನೆಯ ಕಡೆಗೆ ನಡೆದರು.

---

## ೩೨ನೆಯ ಪರಿಚ್ಛೇದ

ತೆಲುಗುನಾಡಿನಲ್ಲಿ ದೊಂಬಿಯೆಬ್ಬಿಸಿದ್ದ ಪಾಳೆಯಗಾರರನ್ನೆಲ್ಲ ಸಾಮೋ-ಪಾಯದಿಂದಲೆ ತಣ್ಣಗೆ ಮಾಡಿ, ಸಾಳುವ ನರಸಿಂಹನಾಯಕನು ನಿನ್ನೆಯ ಸಾಯಂಕಾಲಕ್ಕೆಯೆ ಚಂದ್ರಗಿರಿಗೆ ಹಿಂದಿರುಗಿ ಬಂದಿದ್ದ. ತಮ್ಮ ಒಡೆ-ಯನು ಸುಖವಿಜಯಿಯಾಗಿ ಬಂದುದಕ್ಕಾಗಿ, ಚಂದ್ರಗಿರಿಯ ಜನರೆಲ್ಲರೂ ಇಂದು ಹಬ್ಬವನ್ನು ಮಾಡಿದ್ದರು. ಮನೆಮನೆಯಲ್ಲಿಯೂ ಸವಿಯೂಟದ ಸಿದ್ಧತೆ ನಡೆದಿದ್ದಿತು. ನಗರದೈವತವಾದ ಚಂದ್ರಮೌಳೀಶ್ವರನ ದೇವಾ-

ಲಯದಲ್ಲಿ, ಸೂರ್ಯೋದಯದಿಂದಲೂ ಮಹಾರುದ್ರಾಭಿಷೇಕದ ಅರ್ಚನೆ ಎಡೆಬಿಡದೆ ಸಾಗಿದ್ದಿತು. ಸೈನಿಕರು ವಿಜಯವಾದ್ಯ ವೈಭವದೊಂದಿಗೆ ಮೆರೆ-ವಣಿಗೆ ಹೊರಟು, ಪುರದ ಹೊರಬಯಲಲ್ಲಿ—ಬಗೆಬಗೆಯ ಶಸ್ತ್ರಾಸ್ತ್ರಗಳ—ಹುಸಿಗಾಳೆಗಗಳನ್ನಾಡಿ ಉಲ್ಲಾಸಹೊಂದುತ್ತಲಿದ್ದರು.

ಹೊತ್ತು ಎರಡನೆಯ ಪ್ರಹರವನ್ನು ಸಮೀಪಿಸಲಿಕ್ಕೆ — ಬಂದಿದೆ; ನರ-ಸಿಂಹನಾಯಕ—ತುಳುವ ನರಸಿಂಹರು, ಆಗ ಕಮಲಾಂಬಿಕೆಯ ಅಂತಃಪುರದ ಓಲಗಸಾಲೆಯಲ್ಲಿ ಕುಳಿತು ಮಾತನಾಡುತ್ತಿದ್ದರು.

" ನರಸಿಂಹ ! ನೀನೇನೋ ವಿಜಯನಗರದಿಂದ ಬಂದಿದ್ದ ಓಲೆಯನ್ನು ಕಳುಹಿಸಿದೆ ಸರಿ ! ಆದರೆ ನನಗೆನಿಸಿತು ; ಎಲ್ಲ ಪಾಳೆಯಗಾರರನ್ನೂ ಕಾಣದೆ ಬರಬಾರದು . . ಎಂದು. "

" ಕೂಡಲೆ ಹೊರಟು ಬರುವಂತೆ ನಾರಾಯಣಪಂಡಿತರು ಬರೆದಿದ್ದ-ರಲ್ಲವೇ ? ಅಣ್ಣಾಜಿಯವರೂ ನಿಮ್ಮನ್ನು ಬೇಗನೆ ಬರುವಂತೆ ಹೇಳಿದ್ದಾರೆ ಯೆಂದೂ ಅವರು ತಿಳುಹಿಸಿದ್ದರು. "

" ಅಣ್ಣಾಜಿಯವರದು — ಪಂಡಿತರದು — ನನ್ನಲ್ಲಿ ಒಂದುಬಗೆಯ ವಿಶ್ವಾಸ; ಅವರು ಇಷ್ಟೊಂದು ಅವಸರವನ್ನು ಏತಕ್ಕಾಗಿ ಮಾಡಿದರೋ ಕಾಣೆ ! ಯಾರು ದಂಡನಾಯಕರಾದ ಭಾಗ್ಯ ಏನು ? ಪೆದ್ದರಾಯರಿಗೆ ಈಶ್ವರನಾಯಕನು ಯೋಗ್ಯನೆಂದು ತೋರಿರಬಹುದು ; ಎಂತಲೆ ಅವನನ್ನು ದಂಡನಾಯಕನ ಅಧಿಕಾರದಲ್ಲಿ ನಿಯಮಿಸಿರಬಹುದು ! ನಾನೆ ದಂಡನಾ-ಯಕನಾಗಿ ಇರಬೇಕೆಂದು, ಅಣ್ಣಾಜಿಯವರಾದರೂ ಅಷ್ಟೊಂದು ಹಟ-ವನ್ನೇತಕ್ಕಾಗಿ ಹಿಡಿದರೋ ಕಾಣೆ ! "

ಎದುರ ಗೋಡೆಯಲ್ಲಿ ಕುಳಿತಿದ್ದ ಹಲ್ಲಿಯೊಂದು ಲೊಟಗುಟ್ಟಿತು. ಅದನ್ನು ಮನದೆದುರು ತಂದುಕೊಳ್ಳದೆ ತುಳುವ ನರಸಿಂಹನು ಕೇಳಿದ.

" ಈಶ್ವರನಾಯಕನೆಂದರೆ ಯಾರು ? ನೀವು ನೋಡಿದ್ದೀರಾ ಅವನನ್ನು ಮಾವಾಜೀ . . ? "

" ಬೇಕಾದಷ್ಟು ಸಲ ನೋಡಿದ್ದೇನೆ. ಮೊದಲಿನಿಂದಲೂ ಪೆದ್ದರಾಯ ರಿಗೆ ಸಹಾಯಕನಾಗಿ ಇದ್ದವನು ! ವಿಜಯನಗರದ ರಾಯರದೊಂದು ಮೊದಲಿನಿಂದಲೂ ನಡೆದುಕೊಂಡು ಬಂದ ರೀತಿ ! ಸಿಂಹಾಸನವನ್ನು ಏರಿದ

ದೊರೆಯು ತನಗೆ ಬೇಕಾಗಿದ್ದವನನ್ನು ದಂಡನಾಯಕನನ್ನಾಗಿ ನಿಯಮಿಸಿ ಕೊಳ್ಳುವನು. ”

“ಅದೇನೋ ಸರಿಯಾಯಿತಲ್ಲ! ಪೆದ್ದರಾಯನಿಗೆ ನಿಮ್ಮ ಸಾಮ್ರಾಜ್ಯ-ಪ್ರೀತಿಯ ಬೆಲೆಯೇ ಇರಬಾರದೇ ಮಾಮಾಜೀ?”

“ನನ್ನ ಸಾಮ್ರಾಜ್ಯಪ್ರೀತಿ, ಯಾರಿಂದಲೂ ಯಾವಬಗೆಯದಾಗಿಯೂ ಬೆಲೆಯನ್ನು ಅಪೇಕ್ಷಿಸುತ್ತಿಲ್ಲ ನರಸಿಂಹಾ! ಎಂತಹ ಗುಣವೇ ಆಗಲಿ! ಅದು ಬೆಲೆಯನ್ನು ಪಡೆಯಲು ತೊಡಗಿತೆಂದರೆ. .ಅದರ ಯೋಗ್ಯತೆ ಕಡಿಮೆ ಯಾಗುವುದು. ದಂಡನಾಯಕನ ಅಧಿಕಾರದಲ್ಲಿ ನಾನು ಇರದೆ ಇರುವುದೇ ಹೆಚ್ಚು ಒಳ್ಳೆಯದು! ಮೊದಲಿಗಿಂತ ಹೆಚ್ಚಿನ ನಿಸ್ಪೃಹವೃತ್ತಿಯಿಂದ, ಸಾಮ್ರಾಜ್ಯದ ಸೇವೆಯನ್ನು ಮಾಡುವುದಕ್ಕೆ ಅನುಕೂಲವಾಯಿತು.”

ತುಳುವ ನರಸಿಂಹನು – ಅತೃಪ್ತಮನಸ್ಸಿನಿಂದ – ನನು ವೇಳೆ ನುಮ್ಮಗೆ ಕುಳಿತಿದ್ದು, ಬಳಿಕ ಕೇಳಿದನು.

“ಹಾಗಿದ್ದರೆ ನಾಲ್ಕಾರು ದಿನಗಳ ವರೆಗೆ ಇಲ್ಲಿಯೆ ಇದ್ದು, ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ಹೋಗುತ್ತೀರಲ್ಲವೇ ವಿಜಯನಗರಕ್ಕೆ ? ”

“ಅದು ಹೇಗಾದೀತಯ್ಯಾ! ನಿನ್ನೆಯ ದಿನವೆ ಬಂದಿದ್ದ – ಪಂಡಿತರ ಮತ್ತೊಂದು ಓಲೆ ನೋಡುತ್ತೀಯಲ್ಲವೇ? ಪೆದ್ದರಾಯನಿಗೆ ಮಹಮ್ಮದೀ ಯರನ್ನು ಕಂಡರೆ ಮೊದಲಿನಿಂದಲೂ ಆಗದು! ಈಗಂತೂ ದೊರೆಯಾಗಿ ಸಾಮ್ರಾಜ್ಯಸಿಂಹಾಸನವನ್ನೇರಿ ಕುಳಿತಿದ್ದಾನೆ! ಎಂತಲೇ ಮಹಮ್ಮದೀಯ ರನ್ನೆಲ್ಲ ರಾಜಧಾನಿಯಿಂದ ಹೊರಕ್ಕೆ ಅಟ್ಟಲಿಕ್ಕೆ ನಿಂತಿದ್ದಾನಂತೆ! ನಾನು ಇಂದೆಯೆ ಹೊರಡಬೇಕಾಗಿದ್ದಿತು; ಆದರೆ ಕಮಲಾಂಬಿಕೆಯ ಮನಸ್ಸನ್ನು ಮುರಿಯಲಾರದುದಕ್ಕಾಗಿ–ಇಂದೊಂದು ದಿನ–ಹೇಗೋ ತಡೆದಿದ್ದೇನೆ. ”

ಇವರಿಬ್ಬರ ಮಾತುಕತೆ ನಡೆದಿರುವಾಗಲೆ ಓಲಗಸಾಲೆಯ ಒಳಮನೆ-ಯಿಂದ–ಕಮಲಾಂಬಿಕೆಯು–ಆತುರದ ನಡಿಗೆಯಲ್ಲಿ ಬಂದಳು. ಆಕೆಯ ಮೈಯ ಮೇಲೆಲ್ಲ ಹಬ್ಬದ ವೇಷಭೂಷಣಗಳಿದ್ದುವು. ಚೆಂದುಟಿಯ ಮೇಲೆ ಮಲಗಿಕೊಂಡಿದ್ದ ಆಕೆಯ ಮೆಲುನಗೆಯು, ಹೃದಯದ ಉಲ್ಲಾಸವನ್ನು ಹೊರಕ್ಕೆ ತೋರಿಸುತ್ತಿರುವುದು. ಬಂದವಳೇ ಕಮಲಾಂಬಿಕೆಯು ನರಸಿಂಹನ ಕಡೆಗೊಮ್ಮೆ – ತನ್ನ ಅಪ್ಪಾಜಿಯ ಕಡೆಗೊಮ್ಮೆ – ನೋಡುತ್ತ

ಹೇಳಿದಳು.

"ವಿಜಯಾರತಿಯ ಸಿದ್ಧತೆಯೆಲ್ಲ ಆಗಿದೆ; ಅಪ್ಪಾಜೀ! ಇಬ್ಬರೂ ಎದ್ದು..ಇನ್ನು ಹಸೆಯ ಮೇಲೆ ಬಂದು ಕುಳಿತುಕೊಳ್ಳಬೇಕು. ಅಡಿಗೆಯೂ ಆಗಿದೆಯೆಂದು ಪಾಕಶಾಲೆಯ ಆಳಿ ಬಂದು ಹೇಳಿಹೋದಳು. ಆರತಿಯನ್ನು ಮಾಡಿಸಿಕೊಂಡಾದ ಮೇಲೆ..ಊಟಕ್ಕೆ ಹೊರಟು ಬಿಡೋಣವಂತೆ."

ಹೀಗೆ ಹೇಳುತ್ತಿರುವಾಗಲೆ ಅಂತಃಪುರದ ಹೊರಬಾಗಿಲಾಳಿ ಒಳಕ್ಕೆ ಬಂದು, ಬಾಗಿ ಬಿನ್ನವಿಸಿದಳು.

"ವಿಜಯನಗರದಿಂದ ಯಾರೋ ಒಬ್ಬರು.. ಕುದುರೆಯ ಸವಾರರು ಬಂದಿದ್ದಾರೆ; ಈಗಲೆ ತಮ್ಮನ್ನು ಕಾಣಲೇ ಬೇಕಾಗಿದೆಯಂತೆ!"

ಕಮಲಾಂಬಿಕೆಯ ಉತ್ಸಾಹವೆಲ್ಲ ಒಮ್ಮೆಲೆ ಕುಗ್ಗಿಹೋದಂತಾಯಿತು. ಆಕೆ ಹೇಳಿದಳು.

"ಅಪ್ಪಾಜೀ! ಸದ್ಯ ನೀವು ಇನ್ನೆಲ್ಲಿಯೂ ಹೋಗಲಾಗದು; ಬೇಕಾಗಿದ್ದರೆ ಬಂದಿದ್ದವರನ್ನು ಇಲ್ಲಿಯೆ ಕರೆಯಿಸಿಕೊಂಡು, ಕೇಳಬೇಕಾದುದನ್ನೆಲ್ಲ ಕೇಳಿಕೊಳ್ಳಿ! ಅದುವರೆಗೆ ನಾನು ಒಳಕ್ಕೆ ಹೋಗಿ ಕುಳಿತಿರುತ್ತೇನೆ. ಆರತಿಯನ್ನು ಮಾಡಿಸಿಕೊಳ್ಳದೆ ಬೇರೆ ಕಡೆಗೆ ಎಲ್ಲಿಯೂ ಹೋಗಲಾಗದು!"

ನರಸಿಂಹನಾಯಕನಿಗೆ ತುಂಬ ಆತುರ; ಕೂಡಲೆ ಬಾಗಿಲಾಳಿಗೆ ಹೇಳಿದನು.

"ಅವರನ್ನು ಇಲ್ಲಿಗೇ ಕರೆದುಕೊಂಡು ಬಾ ಹೋಗು!"

ಬಾಗಿಲಾಳಿ ಹೊರಟುನಡೆದಳು. ಕಮಲಾಂಬಿಕೆಯು ಒಳಕ್ಕೆ ನಡೆದು ಬಿಟ್ಟಳು. ಒಂದೆರಡು ನಿಮಿಷಗಳಲ್ಲಿಯೆ ಕುಮಾರನಾಯಕನು ಅಲ್ಲಿಗೆ ಬಂದ. ವಿಜಯನಗರದ ಅಶುಭಪ್ರಸಂಗದಿಂದಲೂ, ದಾರಿನಡೆದು ಬಂದ ಬಳಲಿಕೆಯಿಂದಲೂ, ಆತನ ಮುಖವು–ಗುರುತು ಕೂಡ ಸಿಕ್ಕದಷ್ಟು–ಕಂದಿ ಕುಂದಿ ಹೋಗಿದ್ದಿತು. ಕುಮಾರನಾಯಕನು ಒಳಕ್ಕೆ ಬರುತ್ತಿರುವಾಗಲೇ–ನರಸಿಂಹನಾಯಕನು ಅವನನ್ನು – ದೂರದಿಂದಲೆ ನಿಟ್ಟಿಸಿ ನೋಡಿದನು; ತಟ್ಟನೆ ಎದ್ದುನಿಂತು, ಆತುರಭಾವದಿಂದ ಮಾತನಾಡಿದನು.

"ಯಾರು..? ಕುಮಾರನಾಯಕ..? ಇದೇನಪ್ಪ ನೀನು ಬಂದೆ.. ಈಗ?"

ಒಳಕ್ಕೆ ಬಂದುನಿಂತಿದ್ದ ಕುಮಾರನಾಯಕನ ಕಣ್ಣುಗಳನ್ನು, ಕಂಬನಿಗಳು ಮಂಜುಮಂಜಾಗಿ ಮಾಡಿದುವು. ಬಿಗಿದು ಬಿಗಿದು ಬರುತ್ತಿದ್ದ ಕೊರಳ-ಸಿರಗಳು – ಹೊರಕ್ಕೆ ಬಾರದಂತೆ – ಮಾತುಗಳನ್ನು ತಡೆಹಿಡಿದುವು. ನರಸಿಂಹನಾಯಕನು ಮುಂದುವರಿದು ಬಂದು, ಕುಮಾರನಾಯಕನ ಕೈ-ಯನ್ನು ಹಿಡಿದು, ಕರೆದುಕೊಂಡು ಹೋಗಿ, ಆಸನವೊಂದರಲ್ಲಿ ಕುಳ್ಳಿರಿಸಿದನು. ಆತನಿಗೆ ತೀರ ಹತ್ತಿರದಲ್ಲಿಯೆ ತಾನೂ ಕುಳಿತುಕೊಂಡು, ಗಾಬರಿಯ ತವಕ-ದಲ್ಲಿ ಕೇಳಿದನು.

" ಕುಮಾರಾ ! ಇದೇನಯ್ಯಾ..? ಕಣ್ಣಲ್ಲಿ ನೀರೇತಕ್ಕೆ..? "

ಉಕ್ಕಿಬರುತ್ತಿದ್ದ ದುಃಖವನ್ನು ನುಂಗಿಕೊಳ್ಳಲಾರದೆ, ಅಳುದನಿ-ಯಲ್ಲಿಯೆ ಕುಮಾರನಾಯಕನು ಹೇಳಿದ.

" ನರಸಿಂಹನಾಯಕರೇ ! ಏನು ಹೇಳಲಿ....? ವಿಜಯನಗರದ ಧ್ರುವತಾರೆಯೊಂದು..ಅಡಗಿಹೋಯಿತು ! "

ನರಸಿಂಹನಾಯಕನು ತೀರ ಅಧೀರನಾಗಿ ಕೇಳಿದನು.

" ಏನಾಯಿತು..ಕುಮಾರನಾಯಕಾ ? ಬೇಗನೆ ಹೇಳಪ್ಪ ! "

" ಅಣ್ಣಾಜಿಯವರು ನಮ್ಮನ್ನು ಅಗಲಿಹೋದರು...! ದೊರೆಯು.. ಮೋಸದಿಂದ.. ಅವರನ್ನು..ಕೊಲೆಮಾಡಿಸಿಬಿಟ್ಟಿದ್ದಾನೆ ! "

ನರಸಿಂಹನಾಯಕನಿಗೆ ಒಮ್ಮೆಲೆ ದಿಕ್ಕುತಪ್ಪಿದಂತಾಯಿತು. ತಾನೀಗ ಕನಸಿನಲ್ಲಿರುತ್ತೇನೆಯೋ ಎಚ್ಚರದಲ್ಲಿ ಇರುತ್ತೇನೆಯೋ – ತಿಳಿಯದಂತಾ-ಯಿತು. ಮಾತನಾಡಲಿಕ್ಕೆ ಆಗದೆ, ಮಂಕುಪಟ್ಟವನಂತೆ ಸುಮ್ಮಗೆ ಕುಳಿತು-ಕೊಂಡ; ಉಸಿರು ಬಿಸಿಯಾಗಿ ಹೊರಡಲು ತೊಡಗಿತು; ಕಂಬನಿಯ ಸಾಲು ಕಣ್ಣಕೆಳಕ್ಕೆ ಧಾರೆಗೊಂಡಿದ್ದಿತು. ನಾಲ್ಕಾರು ನಿಮಿಷಗಳು ಹೀಗೆಯೆ ಕಳೆದುಹೋದುವು. ತುಳುವ ನರಸಿಂಹನೂ–ಒಂದು ಸಲ ಕುಮಾರನಾಯಕನ ಕಡೆಗೆ – ಇನ್ನೊಂದು ಸಲ ನರಸಿಂಹನಾಯಕನ ಕಡೆಗೆ – ನೋಡುತ್ತ, ಕಳವಳದ ಮೊಗದಿಂದ ಕುಳಿತುಕೊಂಡಿದ್ದನು. ಕೊನೆಗೆ ನರಸಿಂಹನಾಯಕನೆ ಮೈಮರೆವಿನಿಂದ ಎಚ್ಚತ್ತವನಾಗಿ, ನಿಡುಸುಯಿದು ನುಡಿದನು.

" ಅಯ್ಯೋ ! ಪಟ್ಟಾಭಿಷೇಕದಂತಹ ಮಂಗಲಪ್ರಸಂಗವನ್ನು ಬಿಟ್ಟು, ನಾನು ಇಲ್ಲಿಗೆ ಹೊರಟುಬರಬೇಕಾಗಿ ಬಂದಾಗಲೆ..ನನಗೆ ಎನಿಸುತ್ತಿದ್ದಿತು:–

ವಿಜಯನಗರದ ಮೇಲೆ ಅದೇತಕ್ಕಾಗಿಯೋ ವಿಧಿಯ ದೃಷ್ಟಿ ವಕ್ರವಾಗಿದೆ. . ಎಂದು. ಪೆದ್ದರಾಯನ ಸ್ವಭಾವ ಮೊದಲಿನಿಂದಲೂ ನನಗೆ ಗೊತ್ತು! ಅದೊಂದು ಹುಚ್ಚುಹೊಳೆ. . ! ಹೊರಳಿದತ್ತ ಹೊರಳಿತು; ತೆರಳಿದತ್ತ ತೆರಳಿತು! ಇದನ್ನು ತಿಳಿದು-ತಿಳಿದೂ ನಾನು, ನನ್ನದೊಂದು ವೈಯಕ್ತಿಕ ಸ್ವಾರ್ಥಕ್ಕಾಗಿ – ಒಮ್ಮೆಲೆ ವಿಜಯನಗರವನ್ನು ಬಿಟ್ಟುಬಂದೆ! ನಾನು ನಿಜವಾಗಿಯೂ ಪಾತಕಿ! ಇದುವರೆಗೆ ನಾನು ಮಾಡಿದ್ದ ತ್ಯಾಗವನ್ನೆಲ್ಲ ಇದೊಂದು ನನ್ನ ಸ್ವಾರ್ಥ ಮಣ್ಣುಗೂಡಿಸಿತು! ಅಣ್ಣಾಜಿಯವರ ಕೊಲೆಗೆ ಒಂದು ಬಗೆಯಿಂದ ನಾನೆ ಕಾರಣನಾದಂತಾದೆ! ಕುಮಾರಾ! ಪ್ರಸಂಗವು ಇಲ್ಲಿಯ ವರೆಗೆ ಬಂದೀತೆಂದು, ನಿಮಗೆ ಯಾರಿಗೂ – ಮೊದಲೇ – ಗೊತ್ತಾಗಲಿಲ್ಲವೇನಪ್ಪಾ!"

ಕುಮಾರನಾಯಕನು ಬಿಕ್ಕುಮಾತಿನಲ್ಲಿಯೆ ಹೇಳಲು ತೊಡಗಿದನು.

"ನಮಗೆ ಇದರ ಸುಳಿವು ಕೂಡ ಗೊತ್ತಾಗಲಿಲ್ಲ; ಕೊಲೆಗೆ ಮೊದಲನೆಯ ದಿನವೆ ಅಣ್ಣಾಜಿಯವರು – ಮಹಮ್ಮದೀಯರ ಪಕ್ಷವನ್ನು ವಹಿಸಿ – ದೊರೆಯೊಡನೆ ಮಾತನಾಡಿದರಂತೆ ! ದೊರೆಯ ಹೆಮ್ಮೆಯ ನಡತೆಯಿಂದ, ಅಂದಿನ ಮಾತಿನ ಸಂದರ್ಭ ಕಹಿಯಲ್ಲಿ ಕೊನೆಗಂಡಿತಂತೆ! ಆದರೆ ಇಷ್ಟು ಬೇಗನೆ ಹೀಗೆ ಆದೀತೆಂದು ನಮಗೆ ಎನಿಸಿರಲಿಲ್ಲ! ನೀವು ಬರುವ ವರೆಗೆ – ನಾವು ಯಾವ ರೀತಿಯಲ್ಲಿಯೂ – ಮುಂದಡಿಯನ್ನು ಇಡಲಾಗದೆಂದು, ಅಣ್ಣಾಜಿಯವರು ನಿರ್ಣಯಿಸಿಕೊಂಡಿದ್ದರು ಕೂಡ. ಎಂತಲೇ – ಈ ಮೊದಲೆ ನಿಮಗೆ – ಅವಸರದ ಕುದುರೆಯಾಳಿನೊಂದಿಗೆ ಓಲೆಯನ್ನು ಕಳುಹಿಸಲಾಗಿದ್ದಿತು."

ನರಸಿಂಹನಾಯಕನು ಮತ್ತೆ ಸುಮ್ಮಗೆ ಕುಳಿತುಬಿಟ್ಟ. ತುಳುವ ನರಸಿಂಹ – ಕರುಣಾತುರ ಧ್ವನಿಯಲ್ಲಿ–ಕುಮಾರನಾಯಕನನ್ನು ಕೇಳಿದ.

"ದೊರೆಯು ತಾನೆ – ತನ್ನ ಕೈಯಿಂದಲೆ – ಕೊಂದನೇ ಅಣ್ಣಾಜಿ-ಯವರನ್ನು ? "

"ಇಲ್ಲ ನರಸಿಂಹಾ! ಆ ನೀಚ ಈಶ್ವರನಾಯಕನು ಮೋಸದಿಂದ ಕೊಲೆಮಾಡಿದನು."

"ಯಾರು ? ಈಶ್ವರನಾಯಕನೇ ?" ನರಸಿಂಹನಾಯಕನು ಬೆಚ್ಚಿ-

ಬಿದ್ದು ಕೇಳಿದ.

"ಅಹುದು! ನಿಮಗೆ ಆತನ ಸ್ವಭಾವ ಅಷ್ಟೊಂದು ಗೊತ್ತಾಗಿರಲಿಲ್ಲ ವೇನೋ! ನನಗೂ ಚೆನ್ನಾಗಿ ತಿಳಿದಿರಲಿಲ್ಲ. ನಾರಾಯಣಪಂಡಿತರು ನನಗೆ ಮೊನ್ನೆಮೊನ್ನೆಯೆ ಆತನ ವಿಷಯಕ್ಕೆ ಹೇಳಿದರು. ಈಶ್ವರನು ಮೊದಲಿನಿಂದಲೂ ಹೀನವಾದ ಮನಸ್ಸಿನವನಂತೆ; ಮಹಾಸ್ವಾರ್ಥಿಯಂತೆ! ದೇವಣ್ಣನಾಯಕರ ಹಿರಿಯ ಮಗಳ ಸಂಬಂಧದಲ್ಲಿ – ಮೊದಲಿನ ದೊರೆಗಳಿಗೆ ಹೇಳಿ – ಆಕೆಯ ಪಾವಿತ್ರ್ಯವನ್ನು ಹರಣಮಾಡಿಸಿದ್ದ ದುಷ್ಟನು..ಈಶ್ವರನೇ ಎಂತೆ! ಆದುದರಿಂದಲೇ ಅಣ್ಣಾಜಿಯವರು ಆ ದಿನ, ಆತನನ್ನು ದಂಡನಾಯಕನನ್ನಾಗಿ ನಿಯಮಿಸಿಕೊಳ್ಳುವುದು ಬೇಡವೆಂದು ದೊರೆಗೆ ಹೇಳಿದರು. ದೊರೆಯೂ ಅವರ ಮಾತನ್ನು ನಡೆಯಿಸದೆ, ತುಂಬಿದ ಸಭೆಯಲ್ಲಿ ಅವರನ್ನು ಅವಮಾನಗೊಳಿಸಿಬಿಟ್ಟ. ಈಶ್ವರನಾಯಕನು ತನ್ನ ದಂಡನಾಯಕನ ಸ್ಥಾನವನ್ನು ಗಟ್ಟಿಗೊಳಿಸಿಕೊಳ್ಳಬೇಕೆಂದು – ನಿಮ್ಮ ವಿಷಯದಲ್ಲಿ, ಅಣ್ಣಾಜಿಯವರ ವಿಷಯದಲ್ಲಿ, ಅನೇಕ ದುಷ್ಟಕಲ್ಪನೆಗಳನ್ನು ದೊರೆಯ ಮನಸ್ಸಿನಲ್ಲಿ ತುಂಬಿಬಿಟ್ಟಿದ್ದಾನೆ."

ನರಸಿಂಹನಾಯಕನು ಹಾಗೆಯೆ ಕುಳಿತಿದ್ದು, ಬಳಿಕ ತನ್ನನ್ನು ತಾನೆ ಧಿಕ್ಕರಿಸಿ ನುಡಿದುಕೊಂಡನು.

"ಕುರುಡಾ! ನರಸಿಂಹಾ! ವಿಜಯನಗರದ ಪ್ರತಿಯೊಂದು ವ್ಯಕ್ತಿಯ ಸ್ವಭಾವದ ಪರಿಚಯವು ನಿನಗಿದೆಯೆಂದು ಹೆಮ್ಮೆಕೊಚ್ಚಿಕೊಳ್ಳುತ್ತಿದ್ದೆಯಲ್ಲವೇ? ಕೊನೆಗೂ ನಿನ್ನ ಅಜ್ಞಾನವೇ ಅಣ್ಣಾಜಿಯವರನ್ನು ಆಹುತಿಯನ್ನಾಗಿ ತೆಗೆದುಕೊಂಡಿತು!" ಬಳಿಕ ಕುಮಾರನಾಯಕನನ್ನು ನೋಡುತ್ತ ನರಸಿಂಹನಾಯಕನು ಕೇಳಿದನು.

"ಕೊಲೆಯಾದುದು ಶಾಂತಿಕುಟೀರದಲ್ಲಿಯೋ ಏನು?"

"ಅಲ್ಲ! ಮೋಸದಿಂದ – ಅಣ್ಣಾಜಿಯವರನ್ನು – ಭೂತದ ಕೊಳ್ಳಕ್ಕೆ ಹೊತ್ತುಕೊಂಡು ಒಯ್ದಿದ್ದರು. ಅಲ್ಲಿಯೆ ಇರಿದು ಕೊಂದುಹಾಕಿದ್ದರು." ಎಂದು ಹೇಳಿ, ಕುಮಾರನಾಯಕನು ಮೊದಲಿನಿಂದ ಕೊನೆಯ ವರೆಗೆ ಕೊಲೆಯ ವೃತ್ತಾಂತವನ್ನೆಲ್ಲ ವಿವರವಾಗಿ ಹೇಳಲು ತೊಡಗಿದನು. ನರಸಿಂಹನಾಯಕನು ಆಗಾಗ ಕಂಬನಿಯನ್ನು ಮಿಡಿಯುತ್ತ, ಬಿಸಿಯಾಗಿ

ಉಸಿರಿಕ್ಕುತ್ತ, ಸುಮ್ಮಗೆ ಕುಳಿತು ಕೇಳುತ್ತಿದ್ದನು.

ಎಲ್ಲವನ್ನೂ ಹೇಳಿಯಾಯಿತು; ರತ್ನಾಂಬಿಕೆಯು ಬಂದು, ಶವಕ್ಕೆ ಮಾಲೆಹಾಕಿ ಹೋದ ಸಂಗತಿಯನ್ನು ಹೇಳುತಿರುವಾಗ ಮಾತ್ರ, ಕುಮಾರ ನಾಯಕನ ಮನದ ಬಿಗುಹು ಸಡಿಲಿಹೋಯಿತು. ಉಕ್ಕಿಬರುತ್ತಿರುವ ಅಳುವನ್ನು ಹತ್ತಿಕ್ಕಿಕೊಳ್ಳುತ್ತ, ಆತನು ಹೇಗೆಹೇಗೆಯೋ ಹೇಳುತ್ತಲಿದ್ದನು. ಆ ಕತೆಯನ್ನು ಕೇಳುತ್ತಿರುವಾಗ ನರಸಿಂಹನಾಯಕನ ಹೃದಯವನ್ನು, ಆಶ್ಚರ್ಯ–ದುಃಖಗಳೆರಡೂ ಕೆಣಕುತ್ತಿದ್ದುವು. ಮೊದಲಿನಿಂದಲೂ ಪೆದ್ದರಾಯನನ್ನು ಪ್ರೀತಿಸುತ್ತಲಿದ್ದ ರತ್ನಾಂಬಿಕೆಯು ಹೀಗೆ ಏತಕ್ಕಾಗಿ ಮಾಡಿರಬಹುದೆಂದು ಆಶ್ಚರ್ಯವೆನಿಸಿತು; ಆಕೆ ರಾಜಶೇಖರನ ಶವದೆದುರು ನಿಂತು, ತನಗೆ ತಾನೆ ಆಡಿದ ಮಾತುಗಳನ್ನು ಕೇಳಿದಾಗ–ಅವಳ ಮನಃಸ್ಥಿತಿ ಯನ್ನು ಕಲ್ಪಿಸಿ ಕಲ್ಪಿಸಿ, ಕಳವಳವು ಉಕ್ಕಿಬಂದಿತು. ಸೆಲ್ಲೆಯದ ಸೆರಗಿ-ನಿಂದ ಕಣ್ಣುಗಳನ್ನು ಮುಚ್ಚಿಕೊಂಡು, ಕೆಲವು ನಿಮಿಷಗಳವರೆಗೆ ಸುಮ್ಮಗೆ ಕುಳಿತಿದ್ದ. ಆಗ ಒಳಕ್ಕೆ ಕಮಲಾಂಬಿಕೆಯು ಅಳುತ್ತಿರುವುದರ ಧ್ವನಿಯು, ಅಲ್ಲಿಯ ಮೌನತೆಯನ್ನು ಭೇದಿಸಿ, ಎಲ್ಲರ ಕಿವಿಗಳಲ್ಲಿಯೂ–ಬಂದು–ಚುಚ್ಚುತ್ತಿದ್ದಿತು. ನರಸಿಂಹನಾಯಕನು ತಟ್ಟನೆ ತುಳುವ ನರಸಿಂಹನ ಕಡೆಗೆ ತಿರುಗಿ ಹೇಳಿದ.

"ನರಸಿಂಹಾ! ನೀನು ಹೋಗು! ಊರಲ್ಲಿ ನಡೆಯುತ್ತಿದ್ದ ಉತ್ಸವ-ಗಳೆಲ್ಲ ನಿಂತುಬಿಡುವಂತೆ ಏರ್ಪಾಡುಮಾಡಿಬಿಡು!"

ಜಡವಾದ ಹಜ್ಜೆಗಳನ್ನಿಕ್ಕುತ್ತ ನರಸಿಂಹನು ಅಲ್ಲಿಂದ ಹೊರಟು ನಡೆದನು. ಬಳಿಕ ನರಸಿಂಹನಾಯಕನು ತಗ್ಗಿದ ಧ್ವನಿಯಲ್ಲಿ ಕುಮಾರ-ನಾಯಕನಿಗೆ ಹೇಳಿದನು.

"ಎಂತಹ ಕಷ್ಟ-ನಷ್ಟಗಳಲ್ಲಿದ್ದರೂ. . ಕುಮಾರಾ!–ಬದುಕಿರುವವರೆಗೆ ಹೊಟ್ಟೆಯೊಂದು ಬಿಟ್ಟದ್ದಲ್ಲವಲ್ಲ ನಮಗೆ! ಎರಡೆ ಎರಡು ದಿನಗಳಲ್ಲಿ–ವಿಜಯನಗರದಿಂದ–ಇಲ್ಲಿಗೆ ಬಂದುದರಿಂದ ಎಷ್ಟು ಶ್ರಮವಾಗಿದೆಯೋ ನಿನಗೆ! ಒಂದೆರಡುಗಳಿಗೆ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಳ್ಳು! ಬಳಿಕ ಏನನಾದರೂ ಒಂದೆರದು ತುತ್ತು ಹೊಟ್ಟೆಯಲ್ಲಿ ಹಾಕಿಕೊಂಡು, ವಿಜಯನಗರಕ್ಕೆ ಇಂದೆಯೆ ಹೊರಟುಬಿಡೋಣವಂತೆ!"

ಎಂದು ಹೇಳಿ ನರಸಿಂಹನಾಯಕನು ಕುಮಾರನಾಯಕನನ್ನು ಒಡಗೊಂಡು, ಅಲ್ಲಿಂದ ಹೊರಟು, ಮುಖ್ಯಪ್ರಾಸಾದದ ಕಡೆಗೆ ನಡೆದನು. ತುಳುವ ನರಸಿಂಹನ ಆಜ್ಞೆಯಂತೆ, - ಚಂದ್ರಗಿರಿಯಲ್ಲಿ ನಡೆದಿದ್ದ ಉತ್ಸವ-ಸಮಾರಂಭಗಳೆಲ್ಲ – ಇದ್ದುದಿದ್ದ ಹಾಗೆಯೆ – ನಿಂತು ಬಿಟ್ಟುವು. ಒಮ್ಮೆಲೆ ಊರನ್ನೆಲ್ಲ – ವಿಚಿತ್ರವಾದ – ಔದಾಸೀನ್ಯದ ಮೋಡವೊಂದು ಬಂದು, ಮುಸುಕಿ ಬಿಟ್ಟಂತೆ ಆಯಿತು.

---

## ೩೩ನೆಯ ಪರಿಚ್ಛೇದ

ಚಂದ್ರಗಿರಿಗೆ ಹೊರಟು ಹೋಗುವಾಗ ಕುಮಾರನಾಯಕನು–ಹಿಂದುಮುಂದಿನ ವ್ಯವಸ್ಥೆಯನ್ನೆಲ್ಲ ಮಾಡಿಯೇ ಹೋಗಿದ್ದನು. ಒಂದು ವೇಳೆ..ತಾನು ಹೋದ ವರ್ತಮಾನವು ದೊರೆಗೆ ತಿಳಿದರೆ, ಕೂಡಲೇ ತನ್ನನ್ನು ಬೆನ್ನಟ್ಟಲಿಕ್ಕೆ – ಯಾರನ್ನಾದರೂ – ಕಳುಹಿಸಬಹುದೆಂದು, ಮೊದಲೆ ಆತನಿಗೆ ಯೋಚನೆ ಬರದೆ ಹೋಗಿರಲಿಲ್ಲ. ಅದಕ್ಕಾಗಿಯೇ ಕುಮಾರನಾಯಕನು ತನ್ನ ತೀರ ನಂಬಿಗೆಯ ಐವತ್ತು ಜನ ದಂಡಾಳುಗಳನ್ನು ಕರೆದು, ತಾನು ಹೊರಟುಹೋದ ಒಂದೆರಡು ಗಳಿಗೆಗಳೊಳಗಾಗಿಯೆ – ಒಬ್ಬೊಬ್ಬರು ಇಬ್ಬಿ-ಬ್ಬರು ಆಗಿ – ನೀವೂ ಹೊರಡಬೇಕೆಂದೂ; ಹೊರಟು, ಚಂದ್ರಗಿರಿಗೆ ಹೋಗುವ ದಾರಿಯ ಕಟ್ಟೆಗಾವಲನ್ನು ದಾಟಿ, ಒಂದೆರಡು ಮೈಲುಗಳ ಅಂತರದಮೇಲೆ ನಿಂತುಕೊಂಡಿರಬೇಕೆಂದೂ; ದೊರೆಯ ಕಡೆಯವರು ಯಾರಾದರೂ ಆ ದಾರಿಯಿಂದ ಹೊರಟುದನ್ನು ಕಂಡರೆ, ಉಪಾಯದಿಂದ ಅವರನ್ನು ಹಿಡಿದುಹಾಕಿಬಿಡಬೇಕೆಂದೂ ಹೇಳಿ, ಹೊರಟು ಬಿಟ್ಟಿದ್ದನು. ಆತನ ಕಲ್ಪನೆಯಂತೆಯೆ ಈಶ್ವರನಾಯಕನು ನಾಲ್ಕು ಜನ – ಬಲ್ಲಿದರಾದ – ಕುದುರೆಯಾಳುಗಳನ್ನು, ಕುಮಾರನಾಯಕನನ್ನು ಹಿಡಿದು ತರಬೇಕೆಂದು ನಿಯಮಿಸಿ ಓಡಿಸಿದನು; ಆದರೆ ಆ ನಾಲ್ವರೂ ಕುಮಾರನಾಯಕನ ಜನರ ಕೈಯಲ್ಲಿ ಸಿಕ್ಕಿಕೊಂಡರು. ಅವರು ಆ ಕುದುರೆಯಾಳುಗಳನ್ನು – ಉಪಾಯಾಂತರದಿಂದ ತಡೆದು– ಹಿಡಿದು, ಕಟ್ಟಿಹಾಕಿ, ಸಮೀಪದ ಹಳ್ಳಿಯ ಹಾಳು-ಮನೆಯೊಂದರಲ್ಲಿ ಚೆಲ್ಲಿದರು. ಅಲ್ಲಿ ನಾಲ್ಕಾರು ಜನರನ್ನು ಮಾತ್ರ ಕಾವಲಿಗೆ

ಇರಿಸಿ, ಏಕ್ಕವರೆಲ್ಲರೂ – ಇನ್ನಾರಾದರೂ – ಬಂದಾರೆಂದು ನೋಡುತ್ತ ಮೊದಲಿನ ತಮ್ಮ ಸ್ಥಳಗಲ್ಲಿಯೆ ಬೀಡುಬಿಟ್ಟು ಕುಳಿತಿದ್ದರು.

* * * *

ಈಶ್ವರನಾಯಕನು ಎರಡು ದಿನಗಳವರೆಗೆ ದಾರಿಯನ್ನು ನೋಡಿಯೆ ನೋಡುತ್ತಿದ್ದನು. ಚಂದ್ರಗಿರಿಯ ಕಡೆಯಿಂದ ಯಾವ ವರ್ತಮಾನವೂ ಬಾರದುದರಿಂದ ತುಂಬ ಅಧೀರನಾದನು. ಕುಮಾರನಾಯಕನು ನರಸಿಂಹ-ನಾಯಕನ ಪಕ್ಷಪಾತಿಯೆಂಬುದು ಈಶ್ವರನಿಗೆ ಗೊತ್ತಾಗಿದ್ದಿತು. ಎಂತಲೇ ಈಗ–ತನ್ನ ಅಧಿಕಾರದಲ್ಲಿಯೆ–ಕುಮಾರನಾಯಕನನ್ನು ದುರ್ಗಾಧಿಪತಿಯ ಅಧಿಕಾರದಿಂದ ತೆಗೆದುಹಾಕಿದುದಾಗಿ ಪ್ರಕಟಿಸಿ, ಆ ಸ್ಥಳದಲ್ಲಿ ತನ್ನ ಸ್ನೇಹಿತನಾದ ದುರಗಪ್ಪನಾಯಕನನ್ನು ನಿಯಮಿಸಿಕೊಂಡನು; ಆದರೆ ಕುಮಾರನಾಯಕನಲ್ಲಿ ತುಂಬುನಂಬಿಗೆಯನ್ನಿಟ್ಟಿದ್ದ ಕೋಟೆ ಗಾಪಿನ ಸೈನ್ಯದವರಿಗೆ ಈ ಮಾತು ಹೇಗೆ ಸಹನೆಯಾಗಬೇಕು? ಅವರು ..ಆಗ ತಮ್ಮ ತಮ್ಮಲ್ಲಿಯೇ ಎಂದುಕೊಂಡರು:—

"ದುರ್ಗಾಧಿಪತಿಯೇನೂ ಕಾವಲಿನ ಕೆಲಸ ಮಾಡುವುದಿಲ್ಲವಲ್ಲ! ಅಲ್ಲದೆ ದುರಗಪ್ಪನಾಯಕನಿಗೆ ಕೋಟೆಯ ಎಲ್ಲ ಗುಪ್ತದ್ವಾರಗಳಾದರೂ ಎಲ್ಲಿ ಗೊತ್ತಿವೆ? ದುರ್ಗಾಧಿಪತಿಯಾಗಿ ಅವನು ತನ್ನ ಮನೆಯಲ್ಲಿ ಬಿದ್ದಿರಲಿ! ಯಾರು ಬೇಡವೆನ್ನುತ್ತಾರೆ? "

ಹೊಸ ದುರ್ಗಾಧಿಪತಿಯು ಅಪ್ಪಣೆಯಿತ್ತ 'ಹೊರಗಿನದೊಂದು ಹುಳುವೂ ಕೋಟೆಯೊಳಕ್ಕೆ ಪ್ರವೇಶಿಸದಂತೆ ಕಣ್ಣಿಟ್ಟು ನೋಡಿಕೊಂಡಿರಬೇಕು!' ಎಂಬ ಮಾತಿಗೆ ಯಾವ ಬಗೆಯ ಪ್ರತಿಮಾತನ್ನೂ ಹೇಳದೆ, ಕಾವಲಿನವರು ತಮ್ಮ ತಮ್ಮ ಕೆಲಸಗಳನ್ನು ಅಚ್ಚುಕಟ್ಟಾಗಿ ಸಾಗಿಸಿದ್ದರು.

* * * *

ಆ ದಿನ, ರತ್ನಾಂಬಿಕೆಯ ಮನೆಯಿಂದ ಮರಳಿ ಬಂದಾಗಿನಿಂದ..ಇದು ವರೆಗೂ – ಪೆದ್ದರಾಯನ ಮುಖವನ್ನು – ರಾಜಧಾನಿಯ ಜನರಾರೂ ನೋಡಿಯೆ ಇರಲಿಲ್ಲ. ಅದಕ್ಕೆ ಮರುದಿನ ಮೊದಲುಮಾಡಿಕೊಂಡು, ಈಶ್ವರ-ನಾಯಕನು ಯಾವಾಗಲೂ ಅರಮನೆಯಲ್ಲಿಯೆ ಇರಲು ತೊಡಗಿದನು. ಅದೇತಕ್ಕಾಗಿಯೋ ಏನೋ! ಪೆದ್ದರಾಯನ ಬಳಿಯಲ್ಲಿ ಕೆಲಸಮಾಡುತ್ತಿದ್ದ

ಸೇವಕರನ್ನೆಲ್ಲ ಆತನು ಮನೆಗೆ ಕಳುಹಿಸಿಬಿಟ್ಟನು. ದೊರೆಯ ಬಳಿ-ಯೊಳಿಗದ ನಾಲ್ಕಾರು ಜನ ಸೇವಕರನ್ನಂತೂ ಎಲ್ಲಿಯೂ ಕಾಣದಂತೆ ಮಾಡಿದನು. ಹೀಗೆ ಏತಕ್ಕಾಗಿ ಆಯಿತೆಂಬುದು, ರಾಜಧಾನಿಯಲ್ಲಿದ್ದ ಯಾರಿಗೂ ಗೊತ್ತಾಗಿರಲಿಲ್ಲ. ಇನ್ನೊಂದು ಮಾತೆಂದರೆ: ಈಶ್ವರನಾಯಕನ ಪ್ರತಿಯೊಂದು ಕಾರ್ಯದ ಬಗೆಗೂ ಔದಾಸೀನ್ಯವನ್ನು ತೋರಿಸುತ್ತಿದ್ದ ನಾಗರಿಕರು, ಅದನ್ನು ಗೊತ್ತುಮಾಡಿಕೊಳ್ಳಲಿಕ್ಕೂ ಹವಣಿಸಲಿಲ್ಲ. ಆದರೆ, ಹೇಗೊ ಹೇಗೋ ವಿಚಿತ್ರವಾದ ಸುದ್ದಿಯೊಂದು – ತಾನಾಗಿಯೆ ಕಿವಿಯಿಂದ ಕಿವಿಗೆ ಸುಳಿದಾಡುತ್ತ – ರಾಜಧಾನಿಯ ತುಂಬ ಹಬ್ಬಿ ಹರಡಿದ್ದಿತು. ಆ ವಿಚಿತ್ರವಾದ ಸುದ್ದಿ ಯಾವುದೆಂದರೆ:—

"ಹೊಸ ದೊರೆಗಳು ಅರಮನೆಯಲ್ಲಿ ಇಲ್ಲವೆ ಇಲ್ಲವಂತೆ, ಅವರ ಮೈಯಲ್ಲಿ ನೆಮ್ಮದಿಯಿಲ್ಲವೆಂದು ದಂಡನಾಯಕರು ಪ್ರಕಟಿಸಿದ್ದ ವರ್ತ-ಮಾನವು ಸಂಪೂರ್ಣವಾಗಿ ಸುಳ್ಳಿದೆಯಂತೆ. ರಾಜಶೇಖರನ ಕೊಲೆಯಾದ ಮರುದಿನದ ರಾತ್ರಿಯಲ್ಲಿಯೆ, ದೊರೆಗಳು ಎಲ್ಲಿಯೋ ಮಾಯವಾಗಿ ಬಿಟ್ಟಿ-ದ್ದಾರಂತೆ"

ಈ ವೃತ್ತದ ಸತ್ಯಸ್ವರೂಪವನ್ನು – ಪರೀಕ್ಷಿಸಬೇಕೆಂದರೆ ಯಾರಿಗೂ ಸಾಧ್ಯವಿರಲಿಲ್ಲ. ಈಶ್ವರನಾಯಕನು ಅರಮನೆಯಲ್ಲಿ – ಕೃಷ್ಣಸರ್ಪದಂತೆ– ಯಾವಾಗಲೂ ಕದಲದೆ ಕುಳಿತಿರುವನು. ದೊರೆಗಳನ್ನು ಕಾಣಲೇ ಬೇಕಾ-ಗಿದೆಯೆಂದು ಯಾರಾದರೂ ಹೋದರೆ 'ಒಳಕ್ಕೆ ಯಾರನ್ನೂ ಬಿಡಲಾಗ ದೆಂದು ಅವರ ಕಟ್ಟಪ್ಪಣೆಯಾಗಿದೆ' ಎಂದು ನಿಷ್ಠುರವಾಗಿ ಹೇಳಿಬಿಡುವನು. ಇದನ್ನೆಲ್ಲ ಕೇಳಿದ ಜನರಲ್ಲಿ ಕೆಲವರು: 'ಅಣ್ಣಾಜಿಯವರನ್ನು ಕೊಲ್ಲಿಸಿದುದ ರಿಂದ ಅಸಂತುಷ್ಟರಾಗಿದ್ದ ಜನರ ಕಣ್ಣಿಗೆ, ತಾನು ಒಮ್ಮೆಲೆ ಬೀಳಬಾರ ದೆಂದು ದೊರೆಯು ಒಳಕ್ಕೆಯೆ ಸೇರಿಕೊಂಡಿರಬಹುದು!' ಎನ್ನುವರು. ಮತ್ತೆ ಕೆಲವರು 'ನಗರದಲ್ಲಿ ಹಬ್ಬಿಕೊಂಡಿದ್ದ ಸುದ್ದಿಯಲ್ಲಿ ಏನಾದರೂ ಸತ್ಯವಿರಲೇಬೇಕಲ್ಲವೇ?' ಎಂದು ಸಂದೇಹಮನಸ್ಕರಾಗಿ ನುಡಿಯುತ್ತಿ ರುವರು.

* * * *

ರಾಜಶೇಖರನ ಕೊಲೆಯಾಗಿ ಇಂದಿಗೆ ಐದುದಿನಗಳು ಕಳೆದು

ಹೋದುವು. ನಿನ್ನೆಯ ಭಾರತ ಹುಣ್ಣಿಮೆಯು ಹೇಗೆ ಬಂದು ಹೋಯಿತೆಂಬುದರ ಎಚ್ಚರ ಯಾರಿಗೂ ಇರಲಿಲ್ಲ.

ಭಾರತ ಹುಣ್ಣಿಮೆಯ ಹಬ್ಬ ವಿಜಯನಗರದಲ್ಲಿ ತುಂಬ ಸಮಾರಂಭದಿಂದ ನೆರವೇರಬೇಕಾದುದು. ಪಂಪಾಪತಿಯ ದೇವಾಲಯದಲ್ಲಿ ಹುಣ್ಣಿಮೆಯ ದಿನದ ವಿವಿಧೋತ್ಸವಗಳು ಎಷ್ಟೊಂದು ವಿಜೃಂಭಣೆಯಿಂದ ನಡೆಯಬೇಕಾದುವಲ್ಲವೇ? ನಿನ್ನೆಯ ದಿನವೂ ಅವು ಪದ್ಧತಿಯಂತೆ ನಡೆದುವಾದರೂ. . ಅರ್ಚಕರು, ಸೇವೆಯವರು, ವಾದ್ಯದವರು ಇವರನ್ನು ಬಿಟ್ಟರೆ–ದೇವಾಲಯದ ಬಳಿಯಲ್ಲಿ–ಇನ್ನಾರೂ ಕಾಣುತ್ತಿರಲಿಲ್ಲ. ರಾಜಧಾನಿಯ ಜನರಲ್ಲೆಲ್ಲ ಏನೋ ಒಂದು ಬಗೆಯ ಭೀತಿ; ಒಂದು ಬಗೆಯ ಔದಾಸೀನ್ಯ! ರಾಜ್ಯಾಧಿಕಾರಿಗಳಲ್ಲಿ ಬಹು ಜನರಿಗೆ ಇವೆರಡಲ್ಲದೆ ಶೋಕ-ಸಂತಾಪಗಳೆರಡು ಹೆಚ್ಚು! ಅಂತೂ ವಿಜಯನಗರವು, ಒಳಗೊಳಗೆಯೆ ಕುದಿಯುತ್ತಿದ್ದ ಜ್ವಾಲಾಮುಖೀ ಪ್ರದೇಶವಾಗಿ ಪರಿಣಮಿಸಿದ್ದಿತು.

* * * *

ರಾತ್ರಿಯ ಎಂಟು ಗಳಿಗೆಗಳು ಕಳೆದಿರಬಹುದು. ನಾರಾಯಣಪಂಡಿತರು ಅನಾಥನಿಲಯದ ತಮ್ಮ ಕಾರ್ಯವನ್ನೆಲ್ಲ ಆಗ ತಾನೆ ತೀರಿಸಿಕೊಂಡು, ತಾವು ವಾಸಿಸುತ್ತಿದ್ದ ಚಿಕ್ಕಮನೆಯ ಮೊಗಸಾಲೆಯಲ್ಲಿ ಬಂದು ಕುಳಿತಿದ್ದರು. 'ಕುಮಾರನಾಯಕನು ಇಂದು ನರಸಿಂಹನಾಯಕನನ್ನು ಕರೆದುಕೊಂಡು ಬಂದೇ ಬರುತ್ತಾನೆ' ಎಂಬ ಭರವಸೆಯು ಪಂಡಿತರ ಮನಸ್ಸಿನ ಜಾಡ್ಯವನ್ನು ಸ್ವಲ್ಪ ಹಗುರುಗೊಳಿಸಿದ್ದಿತು. ಆದರೂ ನರಸಿಂಹನಾಯಕರು ತಮ್ಮೆದುರಿಗೆ ಬಂದು ನಿಂತಾಗ, ಅಣ್ಣಾಜಿಯವರನ್ನು ಕಳೆದುಕೊಂಡು ಬಿಟ್ಟಿದ್ದ ತಾವು, ಮುಖ ಕೊಟ್ಟು ಹೇಗೆ ಮಾತನಾಡಬೇಕು? . . ಎಂಬುದನ್ನು ನೆನೆ-ನೆನೆದು ಆಗಾಗ ಎದೆಯು ನಡುಗುತ್ತಿದ್ದಿತು; ಕೊರಳು ಬಿಗಿದು, ಕಣ್ಣುಗಳಲ್ಲಿ ಕಂಬನಿ ತಲೆದೋರುತ್ತಿದ್ದಿತು. ನಿನ್ನೆಯ ರಾತ್ರಿಯಲ್ಲಿ ಅವರು, ಚಂದ್ರಗಿರಿಯ ದಾರಿಯ ಕಾವಲುಗಟ್ಟೆಯವರನ್ನೂ ಕೋಟೆಯ ಅಗಸೆಯ ಕಾಪಿನವರನ್ನೂ ಮಾತನಾಡಿಸಿ, ಮನವೊಲಿಸಿ ಬಂದಿದ್ದರು. ಕುಮಾರನಾಯಕನ ಜನರೇ ಅಲ್ಲಿ ಇದ್ದುದರಿಂದ, ಮನವೊಲಿಸಲಿಕ್ಕೆ ಅವರಿಗೆ ವಿಶೇಷ ಶ್ರಮವನ್ನೇನೂ ಪಡಬೇಕಾಗಲಿಲ್ಲ. ನರಸಿಂಹನಾಯಕ-ಕುಮಾರನಾಯಕರು

ಬಂದೊಡನೆಯೆ ಕಾವಲುಗಾರರಿಗೆ ಸೂಚನೆ ಕೊಡುವುದಕ್ಕೆಂದು, ಹೊತ್ತು ಮುಳುಗುತ್ತಿರುವಾಗಲೆ – ಪಂಡಿತರು – ಚಿಕ್ಕಣ್ಣನನ್ನು ಕಾವಲು-ಗಟ್ಟೆಯ ಹತ್ತಿರಕ್ಕೆ ಕಳುಹಿಸಿ ಕೊಟ್ಟಿದ್ದರು. ಇನ್ನೂ ಬರುವ ಸಮಯ ವಾಗಲಿಲ್ಲವೆಂದು ಪೂರ್ತಿಯಾಗಿ ಗೊತ್ತಿದ್ದಿತಾದರೂ, ಅವರು ಬಂದೆಸವಸೆ ಚಂದ್ರಗಿರಿಯಿಂದ ಬರಲಿರುವವರ ದಾರಿಯನ್ನು ಕಾಯುತ್ತ ಕುಳಿತಿದ್ದರು.

ಪಂಡಿತರ ಮಾರ್ಗಸಿರೀಕ್ಷಣೆಯು, ಇನ್ನೆರಡು ಗಳಿಗೆಗಳನ್ನು ಕಳೆದು ಬಿಟ್ಟಿತು. ಇದ್ದಗಿದ್ದ ಹಾಗೆಯೆ ಅವರ ಕಿವಿಗೆ. . ತಮ್ಮ ಮನೆಯ ಕಡೆಗೆ ಯಾರೋ ನಡೆದು ಬರುತ್ತಿರುವಂತೆ ಎನಿಸಿತು. ಆತುರದಿಂದ ಎದ್ದು ಮುಂದುವರಿದು ಹೋಗಿ, ಮೆಲ್ಲಗೆ ಕೇಳಿದರು.

"ಯಾರು ? ಕುಮಾರನಾಯಕರೇ . . ?"

"ಕುಮಾರನಾಯಕರಲ್ಲ ನಾವು – ಮಾರನಾಯಕರು !"

ಎಂದು ಹೇಳುತ್ತ ದುರಗಪ್ಪನಾಯಕನು ನಾಲ್ಕು ಜನ ದಂಪಾಳು ಗಳನ್ನು ಒಡಗೊಂಡು, ಪಂಡಿತರ ಮನೆಯ ಮೊಗಸಾಲೆಯೊಳಕ್ಕೆ ಬಂದ. ಪಂಡಿತರು ಬೆಚ್ಚಿಬಿದ್ದವರಾಗಿ, ನಿಟ್ಟಿಸಿ ನೋಡಿದರು. ಬಿರುದನಿಯಲ್ಲಿ ಕೇಳಿದರು.

"ಯಾರು ನೀವು ? ನಿಮಗೆ ಇಲ್ಲಿ ಏನಿದೆ ಕೆಲಸ ?"

ದುರಗಪ್ಪನಾಯಕನು ಅಣಕದ ಧ್ವನಿಯಲ್ಲಿ ಹೇಳಿದನು.

"ಇನ್ನೇನೂ ಕೆಲಸವಿಲ್ಲ; ದಂಡನಾಯಕರ ಔತಣವಿದೆ ನಿಮಗೆ; ಈಗಲೆ ಹೊರಡಬೇಕು ನೀವು !"

"ಎಲ್ಲಿಗೆ ಹೊರಡಬೇಕು ?"

"ವಿಜಯನಗರದ ಸೆರೆಮನೆಯ ಕತ್ತಲೆಯ ಕೋಣೆಗೆ !"

"ಅದೇತಕ್ಕಾಗಿ ?"

"ಹಾಗೆ ಮಾಡಬೇಕೆಂದು, ದೊರೆಗಳು ದಂಡನಾಯಕರಿಗೆ ಅಪ್ಪಣೆ ಕೊಟ್ಟಿದ್ದಾರೆ."

ನಸು ವೇಳೆ ಸುಮ್ಮಗೆ ಇದ್ದು ಯೋಚಿಸಿ, ಬಳಿಕ ಪಂಡಿತರು ಕೇಳಿದರು.

"ನಾನು ಈಗ ಬರಲಿಕ್ಕೆ ಒಪ್ಪದೆ ಇದ್ದರೆ . . ನೀವು ಏನು ಮಾಡುವಂತೆ ಇದ್ದೀರಿ ?"

"ಏನು ಮಾಡುವಂತೆ ಇದ್ದೀರಿ...... ಎಂದರೆ, ಒತ್ತಾಯದಿಂದ ಎತ್ತಿಕೊಂಡು.......... "

ದುರಗಪ್ಪನಾಯಕನು ಹೀಗೆ ಹೇಳುತ್ತಿರುವಾಗಲೆ ಪಂಡಿತರು, ಸರ್ರೆಂದು ಮುಂದುವರಿದು ಎರಗಿ, ಆತನ ಕೈಯಲ್ಲಿಯ ಬಿಚ್ಚುಗತ್ತಿಯನ್ನು ಸೆಳೆದುಕೊಂಡರು. ದುರಗಪ್ಪನಾಯಕನು ನಿರ್ಭೀತನಾಗಿಯೆ ನಗುನಗುತ್ತ ಮಾತನಾಡಿದ.

"ಭಲೆ! ಹೋಳಿಗೆ ತಿನ್ನುವ ಹಾರುವಯ್ಯ! ಕತ್ತಿಯನ್ನು ತೆಗೆದು- ಕೊಂಡು ಏನು ಮಾಡಲು ಬಲ್ಲೆ ನೀನು..? ಇಲ್ಲಿ ನಾವು ಐದು ಜನರು ಇದ್ದೇವೆ! ಸುಮ್ಮಗೆ ಬಾರದೆ ಇದ್ದರೆ, ನಿನ್ನ ಕೈಕಾಲುಗಳನ್ನು ಕಟ್ಟಿ ಹೊತ್ತುಕೊಂಡು ಹೋಗುತ್ತೇವೆ ನೋಡು!"

"ನನ್ನ ಮೈಯನ್ನು ಮುಟ್ಟುವವನನ್ನು ಯಾವ ತಾಯಿ ಹೆತ್ತಿ- ದ್ದಾಳೋ ನೋಡುತ್ತೇನೆ!" ಎಂದು ಹೇಳಿ ಪಂಡಿತರು ಕತ್ತಿಯನ್ನು ತಿರುಹುವುದಕ್ಕೆ ಮೊದಲುಮಾಡಿದರು. ನಿಂತಿದ್ದ ದುರಗಪ್ಪನಾಯಕನು ತನ್ನ ಜನರಿಗೆ, ಹೋಗಿ ಅವರನ್ನು ಹಿಡಿಯಿರೆಂದು ಆಜ್ಞೆಮಾಡಿದನು. ನಾಲ್ಕು ಜನ ಬಂಟರೂ ನಾಲ್ಕು ಕಡೆಗೆ ನಿಂತು, ಪಂಡಿತರು ತಿರುಹುತ್ತಿದ್ದ ಕತ್ತಿಗೆ ತಮ್ಮ ಕತ್ತಿಗಳನ್ನೊಡ್ಡಿ ತಡೆಯಲು ತೊಡಗಿದರು. ಪಂಡಿತರ ಕತ್ತಿಯ ತಿರುಹಿನ ಕೈಚಳಕ, ದುರಗಪ್ಪನಾಯಕನನ್ನು ಬೆರಗುಗೊಳಿಸಿಬಿಟ್ಟಿದ್ದಿತು. ನಿಂತು ನೋಡಿಯೇ ನೋಡುತ್ತಿದ್ದನು. ಪಂಡಿತರ ಕತ್ತಿಯೇಟು ಬಲಗಡೆಯ ಇಬ್ಬರು ಬಂಟರ ಕೈಗತ್ತಿಗಳನ್ನು ಮುರಿದು ತುಂಡಾಗಿಸಿತು. ಆ ಕತ್ತಿ- ಗಳಿಗೆ ಕತ್ತಿ ತಡೆದು ನಿಂತಿದ್ದ ಕ್ಷಣದಲ್ಲಿಯೆ.. ಎಡಗಡೆಯವರಿಬ್ಬರೂ ಚುರುಕಿ- ನಿಂದ ಹೋಗಿ, ಕಾಲುಗಳನ್ನು ತುಡುಕಿ ಹಿಡಿದು, ಪಂಡಿತರನ್ನು ಒಮ್ಮೆಲೆ ಕೆಳಕ್ಕೆ ಕೆಡಹಿದರು. ಬಲಗಡೆಯವರಿಬ್ಬರೂ ಬಂದು ಅವರ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡರು. ದುರಗಪ್ಪನಾಯಕನು ತವಕದಿಂದ ಮುಂದಡಿಯನ್ನಿಟ್ಟು, ಎದೆಯ ಮೇಲೆ ಕುಳಿತುಬಿಟ್ಟನು. ಈಗ ಮಾತ್ರ ಪಂಡಿತರು ನಿರುಪಾಯರಾದರು. ಎಷ್ಟು ಒದ್ದಾಡಿದರೂ ಪ್ರಯೋಜನ- ವನ್ನು ಕಾಣದೆ ಹೋದರು. ಎಲ್ಲರೂ ಸೇರಿ ಅವರನ್ನು ಹಗ್ಗಗಳಿಂದ ಬಿಗಿದು ಕಟ್ಟಿದರು. ಮೇಲಕ್ಕೆತ್ತಿ ಇನ್ನು ಹೆಗಲಮೇಲೆ ಹೊತ್ತುಕೊಳ್ಳುವವರು!

ಅಷ್ಟರಲ್ಲಿಯೇ ಕುಮಾರನಾಯಕ, ನರಸಿಂಹನಾಯಕ, ತುಳುವನರಸಿಂಹ, ಚಿಕ್ಕಣ್ಣ ಒಮ್ಮೆಲೆ ಒಳಕ್ಕೆ ಬಂದರು. ಪಂಡಿತರನ್ನು ಮೇಲಕ್ಕೆ ಎತ್ತುತ್ತಿದ್ದ ಜನರು, ಅಲ್ಲಿಯದಲ್ಲಿಯೆ ಬಿಟ್ಟುಕೊಟ್ಟು, ಗಾಬರಿಯ ಮೊಗದಿಂದ ನಿಂತಲ್ಲಿಯೆ ನಿಂತರು. ದುರಗಪ್ಪನಾಯಕನು, ಸಂಧಿಯನ್ನು ಸಾಧಿಸಿ ಓಡಿಹೋಗ-ಬೇಕೆಂದಿರುವಾಗಲೆ, ತುಳುವನರಸಿಂಹನು ಅವನನ್ನು ತುಡುಕಿ ಹಿಡಿದು ನಿಲ್ಲಿಸಿದನು. ಕುಮಾರನಾಯಕ – ನರಸಿಂಹನಾಯಕರು ಕಣ್ಣಿಗೆ ಕಂಡೊಡ-ನೆಯೆ, ದುರಗಪ್ಪನಾಯಕನ ಹರಣವೆ ಹಾರಿಹೋದಂತಾಗಿದ್ದಿತು. ಮಿಕ್ಕ ನಾಲ್ಕು ಜನರೂ ದಿಕ್ಕುತಪ್ಪಿದವರಂತೆ ಕಂಗೆಟ್ಟು ನಿಂತುಕೊಂಡರು. ಕುಮಾರನಾಯಕನು – ಯಾರೂ ಹೊರಕ್ಕೆಹೋಗದಂತೆ – ಮುಂಬಾಗಿಲಿಗೆ ಅಡ್ಡಮಾಡಿಕೊಂಡು–ನಿಂತನು. ಚಿಕ್ಕಣ್ಣ – ನರಸಿಂಹನಾಯಕರು ಸೇರಿ, ಪಂಡಿತರ ಕಟ್ಟುಗಳನ್ನು ಬಿಚ್ಚಿದರು. ಆಗ ನರಸಿಂಹನಾಯಕನು ಆತುರ-ಧ್ವನಿಯಲ್ಲಿ ಕೇಳಿದ.

" ಇದೇನಿದು ಪಂಡಿತರೇ . . ! "

" ಆ ಮೇಲೆ ಎಲ್ಲವನ್ನೂ ಹೇಳುತ್ತೇನೆ. ಅಂತೂ ನೀವೆಲ್ಲ ಸರಿಯಾದ ಸಮಯಕ್ಕೆ ಬಂದಿರಿ! ಪಂಪಾಪತಿ ನಮ್ಮ ಕಡೆಗೆ ಇದ್ದಾನೆಂದು ಹೇಳಬೇಕು. ಈ ಮೂರ್ಖರನ್ನು ಈಗ ಹೀಗೆಯೇ ಬಿಟ್ಟು ಉಪಯೋಗವಿಲ್ಲ. ಈ ದುಷ್ಟನೇ ದುರಗಪ್ಪನಾಯಕನೆನ್ನುವವನು; ಅಣ್ಣಾಜಿಯವರನ್ನು ಭೂತದ ಕೊಳ್ಳಕ್ಕೆ ಹೊರಸಿಕೊಂಡು ಹೋಗುವ ಕೆಲಸದಲ್ಲಿ ಮುಖ್ಯವಾದ ನೆರವು ಈತನದೇ ! ಎಂತಲೇ ಇವನೀಗ ಕುಮಾರನಾಯಕರ ಸ್ಥಳದಲ್ಲಿ ದುರ್ಗಾಧಿಪತಿಯಾಗಿ ಕುಳಿತಿದ್ದಾನೆ. ಕುಮಾರನಾಯಕರೇ! ಇವರನ್ನೆಲ್ಲ ತೆಗೆದುಕೊಂಡು ಹೋಗಿ ಶಾಂತಿಕುಟೀರದ ಕೆಳಗಿನ ನೆಲಮನೆಯಲ್ಲಿ ಚೆಲ್ಲಿಬಿಡಬೇಕು ! "

ಪಂಡಿತರ ಮಾತು ಎಲ್ಲರಿಗೂ ಒಪ್ಪಿಗೆಯಾಯಿತು. ಶಸ್ತ್ರಗಳಿದ್ದವರ ಕೈಯಲ್ಲಿಯ ಶಸ್ತ್ರಗಳನ್ನು ಕಸಿದುಕೊಂಡಾಯಿತು. ಬಳಿಕ ಒಬ್ಬೊಬ್ಬರು ಒಬ್ಬೊಬ್ಬರನ್ನು ಹಿಡಿದುಕೊಂಡು, ಕುಟೀರದ ನೆಲಮನೆಯ ಕಡೆಗೆ ನಡೆದರು. ಆಗ ಕೃಷ್ಣಪಕ್ಷದ ಪ್ರತಿಪದೆಯ ಚಂದ್ರನು, ನಡುಬಾನಲ್ಲಿ ನಗುತ್ತ ನಿಂತುಕೊಂಡಿದ್ದನು.

---

## ೩೪ನೆಯ ಪರಿಚ್ಛೇದ

'ದುರ್ಗಾಧಿಪತಿ ದುರಗಪ್ಪನಾಯಕನು – ಬೆಳಗಾಗುವುದರಲ್ಲಿಯೆ ಎಲ್ಲಿಯೋ – ಮಾಯವಾಗಿಬಿಟ್ಟಿದ್ದಾನೆ' ಎಂಬ ವರ್ತಮಾನವು ರಾಜಧಾನಿಯಲ್ಲೆಲ್ಲ ಮೊಳಗಲು ತೊಡಗಿತು. ಈ ಮಾತು ಈಶ್ವರನಾಯಕನ ಕಿವಿಗೆ ಬಿದ್ದಾಗ, ಎರಡುಗಳಿಗೆಗಳಷ್ಟು ಹೊತ್ತು ಏರಿರಬಹುದು. ಅವನು ಆಗ ತಾನೆ ಹಾಸಿಗೆಯಿಂದ ಎದ್ದು, ಹೊರಕ್ಕೆ ಹಣಿಯಿಕ್ಕಿದ್ದ. ಸೇವಕನೊಬ್ಬ ಬಂದು, ಹೀಗೆಹೀಗೆಯೆಂದು ಹೇಳಿದೊಡನೆಯೆ ಆತನ ಮುಖವು ಕಪ್ಪುಗೊಂಡು ಹೋಯಿತು; ಎದೆಗೆ ಬರಸಿಡಿಲೊಂದು ಬಂದು ಅಪ್ಪಳಿಸಿದಂತಾಯಿತು. ಪ್ರಾತರ್ವಿಧಿಗಳನ್ನು ಕೂಡ ತೀರಿಸದೆ, ಹಾಗೆಯೆ ಒಂದುಸಲ ಬಾಯನ್ನು ಮುಕ್ಕುಳಿಸಿ, ಮತ್ತೆ ಶಯ್ಯಾಗಾರಕ್ಕೆ ಹೋಗಿ, ಮಂಚದ ಮೇಲೆ ಬಿದ್ದುಕೊಂಡನು.

* * * *

ನಗರದಲ್ಲಿಯು ಜನರು ತಮ್ಮತಮ್ಮೊಳಗೆ ಮಾತನಾಡುತ್ತಲಿದ್ದರು. ಒಬ್ಬನು ಹೇಳಿದ :—

"ನರಸಿಂಹನಾಯಕರು ರಾಜಧಾನಿಯಲ್ಲಿ ಬಂದಿರಲೇ ಬೇಕು! ಇಲ್ಲದಿದ್ದರೆ ದುರ್ಗಾಧಿಪತಿಗಳು ಹೀಗೆ ಒಮ್ಮೆಲೆ ಮಾಯವಾಗಿ ಹೋಗುವ ಸಂಭವವೇ ಇಲ್ಲ!"

ಮತ್ತೊಬ್ಬನು ಮೆಲ್ಲಗೆ ಮಾತನಾಡಲು ತೊಡಗಿದ.

"ನಿನ್ನೆಯ ರಾತ್ರಿಯಲ್ಲಿ ಚಂದ್ರಗಿರಿಯಿಂದ ಯಾರುಯಾರೋ ಬಂದರೆಂದು..ನಮ್ಮವರೊಬ್ಬರು ಗುಟ್ಟಿನ ಮಾತನ್ನು ನನಗೆ ಹೇಳಿದರು. ಕುಮಾರನಾಯಕರೂ ನಿನ್ನೆಯದಿನ ಬಂದಿರಬಹುದೆಂದು ಕಾಣುವುದು."

ಮೂರನೆಯವನೊಬ್ಬನು ಕೊಂಚ ಗದ್ದರಿಸಿ ನುಡಿದ.

"ಸುಮ್ಮಗೆ ಇರಯ್ಯಾ! ಹಾಗೆಲ್ಲಾ ಏನಾದರೂ ಹೇಳುತ್ತ ಹೋಗಬೇಡ! ಅವರು ಗುಟ್ಟಿನ ಮಾತೆಂದು ಹೇಳಿದರೆ, ನೀನು ಹಾಗೆಯೆ ಅದನ್ನು ಪಟ್ಟಮಾಡುತ್ತ ನಡೆದಿದ್ದೀಯಲ್ಲ!"

ಇನ್ನೊಬ್ಬನು ಮೆಲ್ಲಗಿನ ಧ್ವನಿಯಲ್ಲಿ ಹೇಳಲು ತೊಡಗಿದನು.

"ಇನ್ನೂ ಒಂದು ವಿಶೇಷಸಂಗತಿ.. ನಿಮಗೆ ಗೊತ್ತಿದೆಯೇನು?

ಮೂರುಪ್ರಹರಗಳಷ್ಟು ರಾತ್ರಿ ಕಳೆದಿರಬಹುದು . . ಸಿನ್ನೆ ! ಆಗ ನಾನು ಮನೆಯ ಬಾಗಿಲು ತೆರೆದು ಹೊರಕ್ಕೆ ಬಂದಿದ್ದೆ. ನಾಲ್ಕೈದು ಜನರು ನಮ್ಮ ಮನೆಯ ಮುಂಗಡೆಯಲ್ಲಿಯೆ ಹಾಯ್ದುಹೋದರು. ಅವರು ಯಾರೋ. .ಎಂದು, ನಾನು ಹಾಗೆಯೆ ನಿಂತುಕೊಂಡು ನೋಡಿದೆ. ಬೆಳು-ದಿಂಗಳಲ್ಲಿ ನನಗೆ ನಾರಾಯಣಪಂಡಿತರ ಮುಖವು ಸ್ಪಷ್ಟವಾಗಿ ಕಂಡಿತು. ಅವರಲ್ಲಿಯವರೊಬ್ಬರು 'ಕುಮಾರನಾಯಕಾ ! ನೀನು ಸ್ವಲ್ಪ ಬೇಗಬೇಗನೆ ಹೋಗಿ, ದೇವಣ್ಣನಾಯಕರಿಗೆ ನಾವೆಲ್ಲರೂ ಬಂದಿದ್ದ ವರ್ತಮಾನವನ್ನು ತಿಳುಹಿಸಬೇಕು ! ' ಎಂದು ಹೇಳಿದರು. ಆ ಧ್ವನಿಯು ನರಸಿಂಹನಾಯಕರದೇ ಎಂದು, ಬೇಕಾದರೆ ನಾನು ಆಣೆಮಾಡಿ ಹೇಳಬಲ್ಲೆ ! ಎಲ್ಲರೂ ಸೇರಿ ದಳಪತಿಗಳ ಪ್ರಾಸಾದದ ಕಡೆಗೆ ಹೋದರು. ಒಳಗೊಳಗೆಯೆ ಏನೇನು ನಡೆದಿದೆಯೋ ಶ್ರೀರಾಮನಿಗೊಂದು ಗೊತ್ತು ! "

ಈ ಸುದ್ದಿಯನ್ನು ಕೇಳಿದವರಲ್ಲಿ ಒಬ್ಬೊಬ್ಬರೂ ಒಂದಕ್ಕೆ ಹತ್ತು ಮಾತುಗಳನ್ನು ಹುಟ್ಟಿಸುತ್ತ, ಅವನು ನೋಡಿದ್ದ ಸಂಗತಿಯನ್ನೆಲ್ಲ ತಾವೆ ತಮ್ಮ ಕಣ್ಣಿಂದ ನೋಡಿದೆವೆಂದು ಹೇಳುತ್ತ ಹೊರಟರು. ರಾಜಧಾನಿಯ ಬೀದಿಗಳಲ್ಲಿ ತಿರುಗಾಡುತ್ತಿದ್ದ ಜನರನ್ನು ನೋಡಿದರೆ, ಎಲ್ಲರ ಮುಖ-ಗಳಲ್ಲಿಯೂ ಒಂದು ಬಗೆಯ ಕುತೂಹಲದ ಭಾವವು ಕಂಡುಬರುವುದು. ಪೇಟೆಯ ವರ್ತಕರು ಒಬ್ಬರಲ್ಲಿಗೆ ಇನ್ನೊಬ್ಬರು ಹೋಗಿ, ಮಾತನಾಡಿದುದೂ ಆಡಿದುದೇ ! ' ಹೊಸ ದೊರೆಗೆ, ಹೊಸ ದಂಡನಾಯಕನಿಗೆ, ಪಂಪಾಪತಿ ಶಿಕ್ಷೆಮಾಡದೆ ಬಿಡುತ್ತಾನೆಯೇ ? ಪಾಪ ! ದೇವರಂತೆ ಇದ್ದ ಅಣ್ಣಾಜಿಯವ-ರನ್ನು ವ್ಯರ್ಥವಾಗಿ ಕೊಂದರು. . ಇಬ್ಬರೂ ಕೂಡಿ ! ' ಎಂಬ ಪಿಸುಮಾತು-ಗುಣುಗುಣಾಟಗಳು – ಕಿವಿಗೊಟ್ಟು ಕೇಳಿದರೆ – ಎಲ್ಲೆಲ್ಲಿಯೂ ಕಿವಿಗೆ ಬೀಳಬಹುದಾಗಿದ್ದಿತು.

* * * *

ಹೊತ್ತು ನಾಲ್ಕು ಗಳಿಗೆಗೆ ಬಂದಾಗ, ಸೇವಕನೊಬ್ಬನು ಓಡುತ್ತ ಬಂದು ಈಶ್ವರನಾಯಕನಿಗೆ ಹೇಳಿದ.

" ಬುದ್ಧೀ ! ಅರಮನೆಯ ಕಡೆಗೆ ಒಂದು ಸೈನ್ಯದ ಗುಂಪು ಬರುತ್ತ-ಲಿದೆ. ಅದರೊಡನೆಯೆ ಕುಮಾರನಾಯಕರು, ಇನ್ನೊಬ್ಬರು ಯಾರೋ

ಕುದುರೆಯ ಮೇಲೆ ಕುಳಿತುಕೊಂಡು ಬರುತ್ತಲಿದ್ದಾರೆ. ''

ಈಶ್ವರನಾಯಕನು ಅಪ್ರತಿಭನಾಗಿ ಹೇಳಿದ.

''ಏನು..? ಸೈನ್ಯ..? ಯಾರು..? ಎಲ್ಲಿಗೆ ಬರುತ್ತಿದ್ದಾರೆ..?''

'' ಇಲ್ಲಿಗೇ ಬುದ್ಧೀ ! ಅರಮನೆಯ ಕಡೆಗೇ ಬರುತ್ತಿದ್ದಾರೆ. ಅದೋ ಅಲ್ಲಿ ಕೇಳಿ ಬುದ್ಧಿ ! ಕೋಲಾಹಲವು ಕೇಳಬರುತ್ತಲಿದೆ. ತೀರ ಸಮೀಪ-ದಲ್ಲಿಯೇ ಬಂದುಬಿಟ್ಟರೇನೋ ! ''

'' ಹೋಗು ನೀನು ! ಬೇಗನೆ ಹೋಗಿ ದೇವಣ್ಣನಾಯಕರನ್ನು ಕರೆದುಕೊಂಡು ಬಾ ! ಹೋಗು ! ಒಮ್ಮೆಲೆ ಓಡು ! ಹುಂ ! ಓಡು ! ''

ಸೇವಕನು ಅವಸರದ ನಡಿಗೆಯಲ್ಲಿ ಹೊರಕ್ಕೆ ನಡೆದನು. ಈಶ್ವರ-ನಾಯಕನು ಹುಚ್ಚನಂತೆ ಶಯನಾಗಾರದಲ್ಲಿಯೆ ಅತ್ತಿತ್ತ ಓಡಾಡಲು ತೊಡಗಿದನು. ಹೊರಕ್ಕೆ ಹೋಗಿದ್ದ ಸೇವಕನು ಮರಳಿ ಓಡಿಬಂದು, ನಡುಗು-ತ್ತಿರುವ ಸ್ವರದಲ್ಲಿ ಹೇಳಿದನು.

'' ಬುದ್ಧೀ ! ಕುಮಾರನಾಯಕರ ಸೈನ್ಯವು ಬಂದು ಅರಮನೆಗೆ ಮುತ್ತಿಗೆಹಾಕಿ ಬಿಟ್ಟಿದೆ. ''

ಗಾಬರಿಯ ತೊದಲುಮಾತಿನಲ್ಲಿ ಈಶ್ವರನಾಯಕನು ನುಡಿದ.

'' ನೀನು ಇನ್ನೂ ಹೋಗಲಿಲ್ಲವೇ ? ಬೇಗನೆ ಹೋಗು ! ದೇವಣ್ಣ-ನಾಯಕರಿಗೆ ಬೇಗನೆ ಸೈನ್ಯವನ್ನು ತೆಗೆದುಕೊಂಡು ಬರುವಂತೆ ಹೇಳು ! ''

ಸೇವಕನು ಇನ್ನೂ ಗಾಬರಿಗೊಂಡವನಾಗಿ ಹೇಳಿದ.

'' ಹೇಗೆ ಹೋಗಲಿ ಬುದ್ಧೀ ! ಸೈನ್ಯ ಬಂದು ಅರಮನೆಯ ಬಾಗಿಲಿಗೆ ನಿಂತುಬಿಟ್ಟಿದೆ. ಬಾಗಿಲಾಳುಗಳೆಲ್ಲ ಹೆದರಿ ನಡುಗುತ್ತ ನಿಂತುಕೊಂಡಿದ್ದಾರೆ. ಹೋಗಲಿಕ್ಕೆ ದಾರಿಯೆ ಇಲ್ಲ ! ''

'' ಹೇಗಾದರೂ ಮಾಡಿ ಹೋಗಪ್ಪಾ ! ದೇವಣ್ಣನಾಯಕರನ್ನು ಬೇಗನೆ ಕರೆದುಕೊಂಡು ಬಾ ! ಅಯ್ಯೋ ! ಯಾರಾದರೂ ನನಗೊಂದು ಕತ್ತಿಯನ್ನು, ಹರಿಗೆಯನ್ನು ತಂದುಕೊಡಿರೋ ಬೇಗನೆ !.. ''

'' ಇದೋ ! ನಾನು ಕೊಡುತ್ತೇನೆ ಹಿಡಿ ಕತ್ತಿಯನ್ನು ! ಒಡ್ಡು ಕೊರ-ಳನ್ನು ! ನೀಚಾ ! ಕೃತಘ್ನಾ ! '' ಎಂದು ನುಡಿಯುತ್ತ ಒಮ್ಮೆಲೆ ತುಳುವ ನರಸಿಂಹನು ಒಳಕ್ಕೆ ನುಗ್ಗಿ ಬಂದ.

"ಕತ್ತಿ ಬೇಕೇ ನಿನಗೆ ಕತ್ತಿ..? ಕೊಡುತ್ತೇನೆ ನಿಲ್ಲು..ನಿನ್ನ ಉಸಿರಿಗೊಂದು ಕತ್ತಿಯನ್ನು!" ಎಂದು ಗರ್ಜಿಸುತ್ತಲೆ ಕುಮಾರನಾಯಕನು ಹಿಂದಿನಿಂದ ಬಂದ. ಈಶ್ವರನಾಯಕನ ಕಾಲು-ಕೈಗಳಲ್ಲಿಯ ಶಕ್ತಿ ಒಮ್ಮೆಲೆ ಉಡುಗಿ ಹೋದಂತಾಯಿತು. ನಿಂತಿದ್ದಲ್ಲಿಯೆ ಅವನು ಕುಸಿದು-ಬಿದ್ದು ಬಿಟ್ಟನು. ತುಳುವ ನರಸಿಂಹನು ಅವನನ್ನು – ಒಂದು ಸಲ – ರಭಸದಿಂದ ಒದ್ದುಬಿಟ್ಟು ಕೇಳಿದನು.

"ಏ ನಾಯಿ! ಪೆದ್ದರಾಯರು ಎಲ್ಲಿ ಮಲಗಿಕೊಂಡಿದ್ದಾರೆ..? ಹೇಳುತ್ತೀಯೋ ಇಲ್ಲವೋ?"

ಈಶ್ವರನಾಯಕನ ಬಾಯಿಂದ ಮಾತುಗಳೇ ಹೊರಡದಾದುವು. ಹೆದರಿಕೆಯಿಂದ ಅವನು ಅರ್ಧ ಸತ್ತಂತಾಗಿದ್ದನು. ಕುಮಾರನಾಯಕನು ಮುಂದುವರಿದು ಹೋಗಿ, ಬಿದ್ದುಕೊಂಡಿದ್ದ ಈಶ್ವರನನ್ನು ಎಬ್ಬಿಸಿ ಕುಳ್ಳಿರಿಸಿ ಕೇಳಿದನು.

"ಹೇಳು ಈಶ್ವರಾ! ಪೆದ್ದರಾಯರು ಎಲ್ಲಿದ್ದಾರೆ ಹೇಳು! ಎಲ್ಲಿ ಇರಿಸಿ ಬಂದಿದ್ದೀಯೆ ಅವರನ್ನು?"

ಈಶ್ವರನು ತೊದಲುತ್ತ ತೊದಲುತ್ತ ಬಾಯಿಬಿಟ್ಟ.

"ಪೆದ್ದರಾಯರು....! ಇಲ್ಲ....! ಇಲ್ಲಿ....! ಇಲ್ಲ....!"

"ಇಲ್ಲಿ ಇಲ್ಲದಿದ್ದರೆ ಇನ್ನೆಲ್ಲಿ ಇದ್ದಾರೆ?" ಕುಮಾರನಾಯಕನು ಗದ್ದರಿಸಿ ಕೇಳಿದ.

"ಅಣ್ಣಾಜಿಯವರಂತೆ ಅವರನ್ನೂ ಈ ನೀಚ ಕೊಲೆಮಾಡಿ ಬಿಟ್ಟಿರಬಹುದು!" ತುಳುವ ನರಸಿಂಹನು ಸಿಡಿಲಿನಂತೆ ಗುಡುಗಿದ.

ದೈನ್ಯಮುದ್ರೆಯವನಾಗಿ ಈಶ್ವರನು ಹೇಳಲು ತೊಡಗಿದ.

"ಇಲ್ಲ..! ನಾನು..ಕೊಲೆ ಮಾಡಿಲ್ಲ...! ಅವರೇ..ಎಲ್ಲಿಗೋ .. ಹೋಗಿದ್ದಾರೆ..!"

"ಎಲ್ಲಿಗೆ ಹೋಗಿದ್ದಾರೆ ಹೇಳುತ್ತೀಯೋ? .. ನಿನ್ನನ್ನು ಇಲ್ಲಿಯೇ ತೀರಿಸಿಬಿಡೋಣವೊ?"

ಈಶ್ವರನು ಕಾಲಿಗೆ ಬಿದ್ದು, ಅಂಗಲಾಚಿಕೊಳ್ಳುತ್ತ, ಹೇಳಿದನು.

"ಅಯ್ಯಾ! ಪಂಪಾಪತಿಯ..ಆಣೆಯೆಂದರೂ..ನನಗೆ ಗೊತ್ತಿಲ್ಲ!..

ಪೆದ್ದರಾಯರು..ಎಲ್ಲಿಗೆ ಹೋಗಿದ್ದಾರೆಂಬ ವಿಷಯವೇ ತಿಳಿಯದು ನನಗೆ! ಬೇಕಾಗಿದ್ದರೆ ಅವರ ಬಳಿಯ ಊಳಿಗದವರನ್ನು ಕೇಳಿ ತಿಳಿದುಕೊಳ್ಳಿ.. ನಾನು ಸುಳ್ಳುಹೇಳಿದರೆ!"

"ಎಲ್ಲಿದ್ದಾರೆ ಅವರ ಊಳಿಗದವರು?"

"ಸೆರೆಮನೆಯಲ್ಲಿ..ಇದ್ದಾರೆ..!"

"ಸೆರೆಮನೆಯಲ್ಲಿ ಏತಕ್ಕಾಗಿ ಅವರು..?"

ದೈನ್ಯಧ್ವನಿಯಲ್ಲಿ ಈಶ್ವರನು ಹೇಳಿಕೊಂಡ.

"ನಾನೇ..ಕಳುಹಿಸಿದ್ದೇನೆ..! ಪೆದ್ದರಾಯರು..ಹೊರಟುಹೋದ..ಸಂಗತಿ..ಇನ್ನಾರಿಗೂ ತಿಳಿಯಬಾರದೆಂದು..ನಾನೇ ಅವರನ್ನು.. ಸೆರೆಮನೆಗೆ ಹಾಕಿದ್ದೇನೆ!"

ಕುಮಾರನಾಯಕನು ಉರಿಯುತ್ತ ನುಡಿದ.

"ಈತನ ನೀಚತನವನ್ನು ನೋಡು ನರಸಿಂಹಾ! ಪೆದ್ದರಾಯರು ಇಲ್ಲದಂತಾದುದು ಒಮ್ಮೆಲೆ ಗೊತ್ತಾದರೆ, ಏನಾದರೂ ಕೋಲಾಹಲ ವೆದ್ದೀತೆಂದು, ತೆಗೆದಿದ್ದಾನೆ ನೋಡು..ಎಂತಹ ಹಂಚಿಕೆಯನ್ನ!"

"ಕತ್ತೆಯ ಕರುವೇ! ನಡೆ ಇನ್ನು! ಕಾರಾಗೃಹದ ಕತ್ತಲೆಯ ಕೋಣೆಯಲ್ಲಿ ಬಿದ್ದುಕೊಳೆಯುತ್ತ, ದಂಡನಾಯಕನ ಅಧಿಕಾರವನ್ನು ನಡೆಯಿಸುವೆಯಂತೆ! ಚಿಕ್ಕಣ್ಣಾ! ಬನ್ನಿರಿಲ್ಲಿ ಒಳಕ್ಕೆ!"

ತುಳುವ ನರಸಿಂಹನು ಕರೆದೊಡನೆಯೆ, ನಾಲ್ಕು ಜನ ಸೈನಿಕರೊಂದಿಗೆ ಚಿಕ್ಕಣ್ಣನು ಒಳಕ್ಕೆ ಬಂದ. ನರಸಿಂಹನ ಸೂಚನೆಯಂತೆ–ಈಶ್ವರನಾಯಕನ ಕೈಕಾಲುಗಳಿಗೆ–ಭಾರವಾದ ಬೇಡಿಗಳನ್ನು ಹಾಕಲು ತೊಡಗಿದ. ಮೊದ-ಮೊದಲು ಈಶ್ವರನಾಯಕನು ಸ್ವಲ್ಪ ಗುದ್ದಾಡಿ ಹಣಿದಾಡಿದನು. ಆದರೆ ಇಷ್ಟು ಜನರ ಎದುರು, ಅವನ ಗುದ್ದಾಟ-ಹಣಿದಾಟಗಳು ಎಷ್ಟು ಹೊತ್ತು ನಡೆದಾವು? ಬಲುಮೆಯಿಂದ ಬೇಡಿಗಳನ್ನು ತೊಡಿಸಿ ಆಯಿತು. ಇಬ್ಬರು ಸೈನಿಕರು ಈಶ್ವರನಾಯಕನ ಕಂಕುಳೊಳಕ್ಕೆ ಕೈಹಾಕಿ, ಒತ್ತಾಯದಿಂದ ಎಬ್ಬಿಸಿ ನಿಲ್ಲಿಸಿದರು. ಎರಡೂ ಕೈಗಳನ್ನು ಹಿಡಿದು ಎಳೆದುಕೊಂಡು ನಡೆದರು. ಬಾಡಿದ ಬದನೆಕಾಯಂತೆ ಆದ ಮೊಗದೊಂದಿಗೆ ಈಶ್ವರನಾಯಕನು – ನಿಧಾನವಾಗಿ ಹಜ್ಜೆಯಿಕ್ಕುತ್ತ – ಅವರ ಹಿಂದೆ ಹಿಂದೆ ನಡೆದನು. ಆಗ

ಅವನಿಗೆ – ಮೈಮೇಲೆ – ಎಚ್ಚರವಾದರೂ ಇದ್ದಿತೋ ಇಲ್ಲವೋ !

ಕುಮಾರನಾಯಕ – ತುಳುವನರಸಿಂಹರು ಅರಮನೆಯೊಳಗಿಂದ ಹೊರಕ್ಕೆ ಬಂದರು. ಸೈನಿಕರನ್ನೆಲ್ಲ ಒಂದೆಡೆಯಲ್ಲಿ ಒಟ್ಟುಗೂಡುವಂತೆ ಅಪ್ಪಣೆಮಾಡಿದರು. ಸೈನ್ಯವು ಓರಣಗೊಂಡು ನಿಂತೊಡನೆಯೆ ಕುಮಾರನಾಯಕನು ವಿಜಯೋತ್ಸಾಹದಿಂದ ಕೂಗಿದನು.

“ಜಯಕರ್ಣಾಟ ರಾಜ್ಯಲಕ್ಷ್ಮಿ ! ಜಯ ಭುವನೇಶ್ವರೀ !! ಜಯ ಪಂಪಾಪತೇ !!! ”

ಸೈನಿಕರೆಲ್ಲರೂ ಕೂಗಿದರು.

“ಜಯಕರ್ಣಾಟ ರಾಜ್ಯಲಕ್ಷ್ಮಿ ! ಜಯ ಭುವನೇಶ್ವರೀ !! ಜಯಪಂಪಾಪತೇ !!! ”

ಯಾವ ಅಡೆತಡೆಯೂ ಇಲ್ಲದೆ–ಅರಮನೆಯಿಂದ ಸೆರೆಮನೆಯ ವರೆಗೆ–ಈಶ್ವರನಾಯಕನ ಮೆರೆವಣಿಗೆ ಹೊರಟಿತು. ರಣವಾದ್ಯ, ಗೆಲುವಿನ ಕೋಲಾಹಲಗಳಿಂದ ನಗರದ ಜನರ ಕಿವಿಗಳು ಕಿವುಡಾದುವು.

---

## ೩೫ನೆಯ ಪರಿಚ್ಛೇದ

ಮರುದಿನದ ಸೂರ್ಯ ತನ್ನ ದಿನದ ಪಯಣವನ್ನು ಮುಕ್ಕಾಲು ಪಾಲಿನಷ್ಟು ಮುಗಿಸಿ, ಪಶ್ಚಿಮಾಕಾಶದ ಮೆಟ್ಟಿಲನ್ನಿಳಿದು ನಡೆದಿದ್ದಾನೆ. ಆಗ ದೇವಣ್ಣನಾಯಕರ ಮನೆಯ ಓಲಗಸಾಲೆಯಲ್ಲಿ, ಹತ್ತಿಪ್ಪತ್ತು ಜನರು ಓಲಗಗೊಂಡು ಕುಳಿತಿದ್ದಾರೆ. ನಾರಾಯಣಪಂಡಿತರು, ನರಸಿಂಹನಾಯಕರು, ದೇವಣ್ಣನಾಯಕರು ಹಿರಿಯತನದ ಮನ್ನಣೆಯ ಗದ್ದುಗೆಗಳಲ್ಲಿ ಮಂಡಿಸಿದ್ದಾರೆ. ಕುಮಾರನಾಯಕ, ತುಳುವ ನರಸಿಂಹ, ಚಿಕ್ಕಣ್ಣ, ಸಾಮ್ರಾಜ್ಯದ ಬೇರೆ ಹತ್ತು ಹನ್ನೆರಡು ಜನ ಹೊಣೆಗಾರರಾದ ಅಧಿಕಾರಿಗಳು . . ಇವರೆಲ್ಲ ಎಡಕ್ಕೆ ಬಲಕ್ಕೆ–ಆಸನಗಳಲ್ಲಿ – ಕುಳಿತುಕೊಂಡಿದ್ದಾರೆ. ನರಸಿಂಹನಾಯಕರು ಮಾತನಾಡಲು ಪ್ರಾರಂಭಿಸಿದರು.

“ದೇವಣ್ಣನಾಯಕರು ಈ ಸಂದರ್ಭದಲ್ಲಿ ನಮಗೆ ವಿರೋಧಿಗಳಾಗಿ ನಿಂತುಕೊಂಡಿದ್ದರೆ, ವಿದ್ರೋಹಿಗಳ ನಿರೋಧವು ನಮಗೆ ಇಷ್ಟೊಂದು

ಸುಲಭವಾಗುತ್ತಿರಲಿಲ್ಲ! ಈಶ್ವರನಾಯಕನು ಅವರ ಆಪ್ತವರ್ಗದಲ್ಲಿ ಸೇರಿದ್ದವನಾದರೂ–ಆತನ ನೀಚತನವನ್ನು ಸಹಿಸಲಾರದವರಾಗಿ—ನಮಗೆ ಸಹಾಯಕರಾಗಿ ನಿಂತುದು ದೇವಣ್ಣನಾಯಕರ ದೊಡ್ಡಗುಣ! ಶ್ರೀಪಂಪಾಪತಿಯೇ ಇವರ ಮನಸ್ಸಿನಲ್ಲಿ ನಿಂತು, ಈ ಕಾರ್ಯವನ್ನು ಮಾಡಿಸಿದನೆನ್ನಬೇಕು! ಅದಕ್ಕಾಗಿ ಸಾಮ್ರಾಜ್ಯಾಭಿಮಾನಿಗಳೆಲ್ಲರೂ ದೇವಣ್ಣನಾಯಕರಿಗೆ ಎಷ್ಟೊಂದು ಕೃತಜ್ಞತೆಗಳನ್ನು ಸಲ್ಲಿಸಿದರೂ ಕಡಮೆಯಾಗಿದೆ!"

ದೇವಣ್ಣನಾಯಕರು–ಕೂಡಲೆ–ಉತ್ಸಾಹದ ಧ್ವನಿಯಲ್ಲಿ ಹೇಳಿದರು.

"ಇದೇನು ಮಾತು ನರಸಿಂಹನಾಯಕರೇ! ಸಾಮ್ರಾಜ್ಯದ ಅಭಿಮಾನ ನನಗೇನು ಬೇಕಿಲ್ಲವೇ? ವಿಜಯನಗರದ ವಿದ್ರೋಹಿಗಳನ್ನು ದಂಡಿಸಬೇಕಾದುದು ನನ್ನ ಕರ್ತವ್ಯವೂ ಆಗಿಲ್ಲವೇ? ನಿಮ್ಮ ಕೃತಜ್ಞತೆಯೇತಕ್ಕೆ ಬೇಕು ನನಗೆ? ಪೆದ್ದರಾಯನಿಗೆ ನಾನೂ ಒಂದೆರಡು ಸಲ ಹೇಳಿದೆ: 'ಈಶ್ವರನಾಯಕನನ್ನು ನಂಬಿ ನಡೆಯಬೇಡವಪ್ಪಾ!' ಎಂದು. ಆದರೆ ಅವನು ನನ್ನ ಮಾತನ್ನು ಕೇಳಲಿಲ್ಲ. ಮತ್ತೆ ಒಂದು ವಿಷಯ ಹೇಳುತ್ತೇನೆ ನೋಡಿ! ಪೆದ್ದರಾಯನೇನೂ ಅಂತಹ ದುಷ್ಟಸ್ವಭಾವದವನಲ್ಲ. ನನಗೆ ಮೊದಲಿನಿಂದಲೂ ಗೊತ್ತು! ಸಾಮ್ರಾಜ್ಯದ ಸೈನ್ಯದಲ್ಲಿ ಬಿಲ್ಲಾಳುಗಳ ಸಂಖ್ಯೆಯನ್ನು ಹೆಚ್ಚಿಸುತ್ತೇನೆಂದು ನನಗೆ ಮಾತುಕೊಟ್ಟಿದ್ದ; ಪಾಪ! ಕತ್ತಿಯ ಕಾಳೆಗದಲ್ಲಿಯಂತೂ ಆತನನ್ನು ಎದುರಿಸುವವರು ಇಲ್ಲವೇ ಇಲ್ಲ!"

ಕೋಶಾಧಿಪತಿ ಲಕ್ಷ್ಮಣನಾಯಕನು ಹೇಳಿದ.

"ನನಗೊಂದು ಸಂದೇಹ! ಪೆದ್ದರಾಯರು ಎಲ್ಲಿಗೋ ಹೊರಟುಹೋಗಿದ್ದಾರೆಂದು ಹೇಳುತ್ತಿದ್ದ ಈಶ್ವರನಾಯಕನ ಮಾತಿನಲ್ಲಿ, ನನಗೆ ನಂಬಿಗೆಯೆ ಕೂಡಲೊಲ್ಲದು. ಆ ಮೋಸಗಾರನು ತಾನೇ ದೊರೆಯಾಗಬೇಕೆಂಬ ದುರಾಶೆಯಿಂದ, ಅವರನ್ನೂ ಕಪಟದಿಂದ ಕೊಲೆಮಾಡಿರಬೇಕು!"

ಅಲ್ಲಿ ಕುಳಿತಿದ್ದವರಲ್ಲಿ ಮತ್ತೆ ನಾಲ್ಕಾರು ಜನರು ಒಮ್ಮೆಲೆ ಹೇಳಿದರು.

"ಅಹುದು! ನಮಗೂ ಹಾಗೆಯೆ ಎನಿಸುತ್ತಿದೆ."

ನರಸಿಂಹನಾಯಕರು ಮಾತನಾಡಿದರು.

"ನನಗೂ ತಮ್ಮೆಲ್ಲರಂತೆಯೆ ಎನಿಸುತ್ತಿದೆಯಾದರೂ, ಈಶ್ವರನಾಯಕನು ಒಂದೆಸಮನೆ ಆಣೆಯಿಟ್ಟು ಹೇಳುತ್ತಿದ್ದಾನೆ– ಎಂದ ಮೇಲೆ, ಹಿಂದು-

ಮುಂದಿನ ವಿಚಾರವಿಲ್ಲದೆ ಯಾವುದನ್ನೂ ಮಾಡಲಿಕ್ಕೆ ಬಾರದಂತಹ ಪರಿಸ್ಥಿತಿಯಲ್ಲಿ ನಾವು ಸಿಕ್ಕಿಬಿದ್ದಿದ್ದೇವೆ. ಈಗ ನೋಡಿ! ಪೆದ್ದರಾಯರು ಬದುಕಿ-ಇದ್ದರೂ ಸರಿಯೆ, ಇಲ್ಲದಿದ್ದರೂ ಸರಿಯೆ; ಅವರ ವಿಚಾರವನ್ನೆ ಬಿಟ್ಟು-ಕೊಟ್ಟು, ಇನ್ನಾರನ್ನಾದರೂ ಸಿಂಹಾಸನದ ಮೇಲೆ ಕುಳ್ಳಿರಿಸಿ, ಸಾಮ್ರಾಜ್ಯ ವ್ಯವಸ್ಥೆಯನ್ನು ಸಾಗಿಸಬೇಕೆಂದರೆ; ಸಂಗಮರಾಯರ ವಂಶದ ದೂರದ ಸಂಬಂಧಿಕರು ಕೂಡ ಯಾರೂ ಇದ್ದಂತೆ ಕಾಣೆ! ಈಗ ಸಾಮ್ರಾಜ್ಯಾಭಿ-ಮಾನಿಗಳಾದ ನಾವೆಲ್ಲರೂ ಯಾವ ದಾರಿಯನ್ನು ಕಂಡುಕೊಳ್ಳಬೇಕೆಂಬುದೇ ತಿಳಿಯದಂತಾಗಿದೆ. ವಿಜಯನಗರದ ಸಾಮ್ರಾಜ್ಯಚರಿತ್ರೆಯ **ಅಶಾಂತಿ-ಪರ್ವ**ವು ಇನ್ನೂ ಮುಗಿದಿಲ್ಲವೇನೋ! – ಎಂದೆನಿಸುತ್ತಿದೆ. ಈಗ ಒದಗಿದ್ದ ಗಂಡಾಂತರದಿಂದ ನಾವು ಪಾರಾದಾಗಲೇ ನಮ್ಮ ಕನ್ನಡ ಸಾಮ್ರಾಜ್ಯಕ್ಕೆ ಉಳಿಗಾಲವಿದೆ..!" ಮಾತಿನ ಕೊನೆಯೊಂದಿಗೆ ನರಸಿಂಹನಾಯಕರು ನಿಟ್ಟುಸಿರೊಂದನ್ನು ಹಾಕಿದರು.

ತಟ್ಟನೆ ದೇವಣ್ಣನಾಯಕರು – ನಿಶ್ಚಿಂತಭಾವದ ಧ್ವನಿಯಲ್ಲಿ – ಹೇಳಲು ತೊಡಗಿದರು.

"ನಾನು ಹೇಳುತ್ತೇನೆ ಕೇಳಿ ಇಲ್ಲಿ! ಈಗ ಪೆದ್ದರಾಯನಿಗಾಗಿ ಚಿಂತೆಮಾಡಿ, ನಾವೇತಕ್ಕೆ ಸೊರಗುತ್ತ ಕುಳಿತುಕೊಳ್ಳಬೇಕು? ಅಣ್ಣಾಜಿ-ಯವರಂತವರನ್ನು ಕೊಲೆಮಾಡಿಸಿದ ಆತನನ್ನು, ಮತ್ತೆ ನಮ್ಮ ಧರ್ಮ-ಸಿಂಹಾಸನದಲ್ಲಿ ಕುಳ್ಳಿರಿಸುವುದೇ? ನೋಡಿ..ನರಸಿಂಹನಾಯಕರೆ! ಈಗ ನಾವು ಪೆದ್ದರಾಯನ ದಾರಿಯನ್ನು ಬಿಟ್ಟೇ ಬಿಡಬೇಕು! ಸಾಮ್ರಾಜ್ಯದ ಪ್ರಜೆಗಳೆಲ್ಲರದೂ – ಹೇಗೂ – ನಿಮ್ಮಲ್ಲಿ ತುಂಬ ಶ್ರದ್ಧೆ-ವಿಶ್ವಾಸಗಳಿವೆ. ನೀವೇ ಸಿಂಹಾಸನವನ್ನೇರಿ, ಸಾಮ್ರಾಜ್ಯಸೂತ್ರಗಳನ್ನು ಕೈಕೊಂಡುಬಿಡಿ.. ಆಯಿತು! ಇದಕ್ಕೆಲ್ಲಾ ಹೀಗೆ ಚಿಂತೆ ಮಾಡುತ್ತ ಕುಳಿತರೆ ಹೇಗಾದೀತು!"

ಅಲ್ಲಿ ಕುಳಿತಿದ್ದವರೆಲ್ಲರೂ ದೇವಣ್ಣನಾಯಕರ ಮಾತಿಗೆ ತಲೆದೂಗಿ ಹೇಳಿದರು.

"ದಳಪತಿಗಳು ಹೇಳಿದ ಮಾತು, ಸಾಮ್ರಾಜ್ಯದ ಬಹುಜನ ಪ್ರಜೆಗಳಿಗೆ ಸಮ್ಮತವಾಗುವುದು! ಹಾಗೆಮಾಡಿಬಿಡುವುದು ಖಂಡಿತವಾಗಿಯೂ ಒಳ್ಳೆಯದು!"

ನಸುವೆ ತಡೆದಿದ್ದು ನರಸಿಂಹನಾಯಕರು ನುಡಿದರು.

"ಛೇ! ಆ ಮಾತು ಎಂದಿಗೂ ಸಾಧ್ಯವಿಲ್ಲ! ನಾನು ಸಾಮ್ರಾಜ್ಯ ಸಿಂಹಾಸನದ ಸೇವಕನಾಗಿರಲು ಬಯಸುವವನು! ಅದನ್ನು ಏರುವ ಅಧಿಕಾರವು ನನಗೆ ಇಲ್ಲವೆ ಇಲ್ಲ!"

ನಾರಾಯಣಪಂಡಿತರು ತಮ್ಮ ಅಧಿಕಾರವಾಣಿಯಲ್ಲಿ ಹೇಳಲು ತೊಡಗಿದರು.

"ಹಾಗಾದರೆ ಆ ಅಧಿಕಾರವು ಈಗ ಯಾರಿಗಿದೆ ನರಸಿಂಹನಾಯಕರೇ? ಯಾರೂ ಇಲ್ಲದೆ ಇರುವಾಗ, ಯಾರಾದರೂ ಒಬ್ಬರು ಆ ಅಧಿಕಾರವನ್ನು ಒಪ್ಪಿ ನಿಲ್ಲಲೇ ಬೇಕಲ್ಲವೇ? ದೇವಣ್ಣನಾಯಕರು ಮುತ್ತಿನಂತಹ ಮಾತನ್ನು ಹೇಳಿದ್ದಾರೆ. ಅಣ್ಣಾಜಿಯವರಂತೆ ನೀವೂ ಈಗ ಸಿಂಹಾಸನವನ್ನು ಒಲ್ಲೆನೆಂದು ಹಟಹಿಡಿದು ಕುಳಿತರೆ, ನಿಮ್ಮಿಂದ ಸಾಮ್ರಾಜ್ಯಕ್ಕೆ ಹಿತವೇನೂ ಆದಂತಾಗದು; ಇಷ್ಟೆ ಅಲ್ಲ! ಅದರ ಹಾನಿಗೆ ಮಾತ್ರ ನೀವು ಕಾರಣರಾಗಿ ನಿಲ್ಲಬಹುದು! ನೋಡಿ! ವಿಚಾರಮಾಡಿ ನೋಡಿ!"

ನರಸಿಂಹನಾಯಕರು ಏನನೂ ಮಾತನಾಡದೆ – ಉಭಯಸಂಕಟದಲ್ಲಿ ಸಿಕ್ಕಿಬಿದ್ದವರಂತೆ –ಕಂಗೆಟ್ಟು–ಕುಳಿತುಕೊಂಡರು. ಮಿಕ್ಕವರೆಲ್ಲರೂ ಆತುರ-ದೃಷ್ಟಿಗಳಿಂದ ಅವರ ಮುಖದ ಕಡೆಗೆ ನೋಡುತ್ತ ಕುಳಿತುಕೊಂಡಿದ್ದರು. ಇದ್ದುದಿದ್ದಹಾಗೆಯೆ ಬಾಗಿಲಾಳು ಅಲ್ಲಿಗೆ ಬಂದು, ಮಣಿಹದೊಡನೆ ಬಿನ್ನವಿಸಿದನು.

"ಪೆದ್ದರಾಯ ದೊರೆಗಳವರ ಬಳಿಯಾಳಿಗದಲ್ಲಿದ್ದವನಂತೆ! ಸೆರೆ-ಮನೆಯ ಅಧಿಕಾರಿಗಳು ಅವನನ್ನು ಇಲ್ಲಿಗೆ ಕಳುಹಿಸಿದ್ದಾರಂತೆ! ಹೊರಕ್ಕೆ ಬಂದಿದ್ದಾನೆ. ಬುದ್ಧಿಯವರನ್ನು ಈಗಲೆ ಕಾಣಬೇಕಾಗಿದೆಯೆನ್ನುತ್ತಿದ್ದಾನೆ.!"

ಬೆರಗುಗೊಂಡ ಧ್ವನಿಯಲ್ಲಿ ಒಮ್ಮೆಲೆ ನರಸಿಂಹನಾಯಕರು ಕೇಳಿದರು.

"ಯಾರು ..? ಪೆದ್ದರಾಯರ ಬಳಿಯಾಳಿಗದವನೇ ..?"

ಕುಮಾರನಾಯಕನು ಹೇಳಿದ.

"ಇರಬಹುದು! ಈಶ್ವರನಾಯಕನು ಪೆದ್ದರಾಯರ ಆಳಿಗದವ-ರನ್ನೆಲ್ಲ ಸೆರೆಮನೆಯಲ್ಲಿ ಇರಿಸಿದ್ದ. ಅವರನ್ನೆಲ್ಲ ಬಿಟ್ಟುಬಿಡುವಂತೆ ಸೆರೆಮನೆಯ ಅಧಿಕಾರಿಗೆ, ನಾನೆ ಇಂದು ತಿಳುಹಿಸಿ ಬಂದಿದ್ದೆ. ಪೆದ್ದರಾಯರ

ಹೊರಟುಬಿಟ್ಟರು. ಮುಂದೆ ಒಂದೆ ಒಂದು ಗಳಿಗೆಯಲ್ಲಿ, ದೊರೆಗಳ ಬಳಿಯ ಊಳಿಗದವರನ್ನೆಲ್ಲ – ಯಾವುದೂ ಕಾರಣವಿಲ್ಲದೆ – ಕತ್ತಲೆಯ ಕೋಣೆಗೆ ಸಾಗಿಸಿಬಿಟ್ಟರು ಬುದ್ಧೀ ! "

ಕುಳಿತಿದ್ದವರೆಲ್ಲರೂ ನಿಡಿದಾಗಿ ಉಸಿರುಗಳನ್ನು ಹಾಕಿದರು. ತುಳುವ ನರಸಿಂಹನು ಆತುರಗೊಂಡವನಾಗಿ ಕೇಳಿದ.

"ದೊರೆಗಳು ಕೊಟ್ಟ ಓಲೆಯೆಲ್ಲಿದೆ..? ಈಗ ನಿನ್ನ ಬಳಿಯಲ್ಲಿಯೆ ಇದೆಯಲ್ಲವೇ..?"

"ಇದು ಕೊಳ್ಳಿ!" ಎಂದು ನಂಜುಂಡಯ್ಯನು ಓಲೆಯೊಂದನ್ನು ಮಡಿಲಿನಿಂದ ತೆಗೆದು, ಮುಂದೆ ಇರಿಸಿದನು. ಚಿಕ್ಕಣ್ಣನು ಅದನ್ನು ತೆಗೆದುಕೊಂಡು ಹೋಗಿ, ನಾರಾಯಣಪಂಡಿತರ ಕಡೆಗೆ ಒಪ್ಪಿಸಿದನು. ಪಂಡಿತರು ಓಲೆಯನ್ನು ಬಿಚ್ಚಿ, ಒಂದು ಸಲ..ತಮ್ಮಷ್ಟಕ್ಕೆ ತಾವೇ ಕಣ್ಣೋದನ್ನು ಓದಿಕೊಂಡರು. ಬಳಿಕ "ಇದು ನೋಡಿ ಪೆದ್ದರಾಯರು ಹೀಗೆಂದು ಬರೆದಿದ್ದಾರೆ" ಎಂದು ಹೇಳಿ, ಎಲ್ಲರಿಗೂ ಕೇಳಿಸುವಂತೆ – ಮತ್ತೊಂದು ಸಲ–ಗಟ್ಟಿಯಾಗಿ ಓದಲು ತೊಡಗಿದರು.

**"ನಾರಾಯಣ ಪಂಡಿತರಲ್ಲಿ ವಿಜ್ಞಾಪನೆಗಳು.**

**ಮಹಾಶಯರೇ !**

**ಅಣ್ಣಾಜಿಯವರನ್ನು ಕೊಲೆಮಾಡಿಸಿದುದರ ಹೊಣೆಗಾರಿಕೆಯೆಲ್ಲ ನನ್ನ ತಲೆಯಮೇಲೆಯೆ ಇದೆ. ನಾನು ಹಾಗೆ ಮಾಡಿಸಿದುದು ಒಪ್ಪೋ ತಪ್ಪೋ..ಎಂಬುದನ್ನೇನೂ ತಿಳುಹಿಸಲಿಕ್ಕೆ, ಸದ್ಯ ನನ್ನ ಮನಸ್ಸು ಸಿದ್ಧವಿಲ್ಲ. ಆದರೆ ಅದರ ಮೂಲಕವಾಗಿ ನನ್ನನ್ನು ಕವಿದುಬಿಟ್ಟಿದ್ದ ಔದಾಸೀನ್ಯವು ಯಾವುದೂ ಬೇಡವೆನ್ನುವಂತಹ ನಿರಾಶೆಯನ್ನು ತಂದು ಮುಂದೆ ನಿಲ್ಲಿಸಿಬಿಟ್ಟಿದೆ. ಎಂತಲೇ ನಾನೀಗ ವಿಜಯನಗರವನ್ನು ಬಿಟ್ಟು ಎಲ್ಲಿಗೋ ಹೊರಟು ನಿಂತಿದ್ದೇನೆ. ಮರಳಿ ಬರಬೇಕೆಂದೆನಿಸಿದರೆ..ವಿಜಯನಗರಕ್ಕೆ ಮತ್ತೆ ಬರುತ್ತೇನೆ; ಇಲ್ಲದಿದ್ದರೆ ಇಲ್ಲ!**

**ಚಂದ್ರಗಿರಿಯಿಂದ ನರಸಿಂಹನಾಯಕರು – ಬೇಗನೆ – ಇಲ್ಲಿಗೆ ಬರಬಹುದು! ಅವರಿಗೆ ನೀವು ನನ್ನ ಅಂತರ್ಯದ ಆಶೆಯೊಂದನ್ನು ಮರೆಯದೆ ತಿಳುಹಿಸಿರಿ ! ಅದಾವುದೆಂದರೆ :– ನಾನು ಮರಳಿಬರುವುದಾದಲ್ಲಿ–**

ಬರುವವರೆಗೆ – ನರಸಿಂಹನಾಯಕರು, ಸಮ್ರಾಟನ ಪ್ರತಿನಿಧಿಗಳೆಂದಿದ್ದು ಕೊಂಡು, ಸಾಮ್ರಾಜ್ಯದ ಎಲ್ಲ ಆಡಳಿತವನ್ನೂ ನೋಡಿಕೊಳ್ಳುತ್ತಿರ-ಬೇಕು ! ಒಂದು ವೇಳೆ ನಾನು ಎಂದೆಂದೂ ಬಾರದೆ ಹೋದರೆ, ಅವರೇ ಸಿಂಹಾಸನಾಧಿಕಾರವನ್ನು ಹೊಂದಿ, ಕರ್ಣಾಟಸಾಮ್ರಾಜ್ಯದ ಎಲ್ಲಬಗೆಯ ಸೂತ್ರಗಳನ್ನೂ ವಹಿಸಿಬಿಡಬೇಕು ! ನನ್ನ ತೂಗಾಡುತ್ತಿರುವ ಮನಸ್ಸು, ಮತ್ತೊಮ್ಮೆ ಇಲ್ಲಿಗೆ ಬರಬಾರದೆಂಬುದರ ಕಡೆಗೆಯೆ ಹೆಚ್ಚಿಗೆ ಒಲಿದು-ಕೊಂಡು ನಿಂತಿದೆ. ನನ್ನ ಈ ಅಪೇಕ್ಷೆಯನ್ನು ಸಲ್ಲಿಸುವಂತೆ ನೀವು ನರಸಿಂಹನಾಯಕರನ್ನು ಒಪ್ಪಿಸಿರಿ !

ಇತಿ: ಜೀವನವೇ ಬೇಡವಾಗಿದ್ದ

. ಮುಮ್ಮಡಿ ವಿರೂಪಾಕ್ಷರಾಯ ”

ಕೊನೆಕೊನೆಯ ಮಾತುಗಳನ್ನು ಓದುತ್ತಿರುವಾಗ, ಪಂಡಿತರ ಕೊರಳು ಬಿಗಿದುಬಂದಿತು. ಕೇಳುವವರ ಹೃದಯವೂ ಉಕ್ಕಿ ಕಣ್ಣೆವೆಗಳನ್ನು ಒದ್ದೆ-ಯನ್ನಾಗಿಸಿತು. ಓದುವುದಾದಮೇಲೆ ಸ್ವಲ್ಪಕಾಲದವರೆಗೆ – ಅಲ್ಲಿದ್ದವರೆಲ್ಲರನ್ನೂ – ಕಳವಳದ ಮೌನವು ಸುಮ್ಮಗೆ ಕುಳಿತಿರುವಂತೆ ಮಾಡಿತು. ಕೊನೆಗೆ ನರಸಿಂಹನಾಯಕರು ಮರುಕದ ಧ್ವನಿಯಲ್ಲಿ ಮಾತನಾಡಿದರು.

“ಎಲ್ಲಿಗೆ ಹೋಗಿದ್ದಾರೋ ಏನೋ ! ಪಾಪ ! ಅವರನ್ನು ಹುಡುಕಿಸಿ-ಯಾದರೂ ಹುಡುಕಿಸಬೇಕು ! ”

ನಾರಾಯಣ ಪಂಡಿತರು ಹೇಳಿದರು.

“ ನಾಯಕರೇ ! ಹುಡುಕಿಸುವ ಕೆಲಸವನ್ನಂತೂ ಮಾಡಿಯೆ ಮಾಡ ಬೇಕು ! ಅದುವರೆಗೆ, ವಿಸ್ಖಲಿತವಾಗಿ ಬಿಟ್ಟಿದ್ದ ಸಾಮ್ರಾಜ್ಯದ ಆಡಳಿತವನ್ನು ಹೀಗೆಯೆ ಬಿಟ್ಟರೆ ಉಪಯೋಗವಿಲ್ಲ. ಹೇಗೂ ಪೆದ್ದರಾಯರ ಸಮ್ಮತಿಯೂ ಸಿಕ್ಕಿಬಿಟ್ಟಿದೆ. ಸದ್ಯಕ್ಕೆ ನೀವು ಅವರ ಪ್ರತಿನಿಧಿಗಳೆಂದಾದರೂ ಸಾಮ್ರಾಜ್ಯ-ಸೂತ್ರಗಳನ್ನು ಕೈಯೊಳಗೆ ತೆಗೆದುಕೊಂಡು, ಆಡಳಿತವನ್ನು ಒಂದು ಹದಕ್ಕೆ ತರಬೇಕು. ಪೆದ್ದರಾಯರಂತಹ ಒಂದು ವ್ಯಕ್ತಿಗಾಗಿ, ಸಾಮ್ರಾಜ್ಯವನ್ನು ದುರ್ಲಕ್ಷಿಸಿ ನಡೆಯಲಿಕ್ಕೆ ಆಗದು; ಈ ಮಾತನ್ನು ನಾನೇನು ನಿಮಗೆ ಬೇರೆ ಯಾಗಿ ಹೇಳಬೇಕೆಂದಿಲ್ಲ. ಹೊಣೆಗಾರರಾಗಿದ್ದ ಯಾವ ರಾಜ್ಯಾಧಿಕಾರಿ ಗಳೂ ಇದಕ್ಕೆ ವಿರೋಧಿಗಳಾಗಿ ನಡೆಯರೆಂದು ನನಗೆ ಭರವಸೆಯಿದೆ.

ಪೆದ್ದರಾಯರ ಅಭಿಪ್ರಾಯದಂತೆಯೆ ನೀವೀಗ ನಡೆಯಬೇಕಾಗಿದೆ. . ಎಂದಮೇಲೆ, – ಇದ್ದರೆ– ಅವರ ಪಕ್ಷದವರೂ ನಿಮಗೆ ಅಡ್ಡಿಯಾಗಿ ನಿಲ್ಲಲಾರರು. ನೀವು ಒಪ್ಪಿಕೊಳ್ಳಲೇ ಬೇಕು !”

“ ಎಲ್ಲ ಜನರದೂ ಇಚ್ಛೆಯಿದ್ದಲ್ಲಿ, ನಾನು ಒಪ್ಪಿಕೊಳ್ಳದಿದ್ದರೆ ಹೇಗೆ? ಪಂಡಿತರೇ! ಒಂದೆರಡು ದಿನಗಳಲ್ಲಿಯೆ ರಾಜ್ಯದ ಮಾಂಡಲಿಕರು–ಸಾಮಂತರು –ಪಾಳೆಯಗಾರರು ಇವರೆಲ್ಲರ ಕಡೆಗೆ, ಇಲ್ಲಿಯ ವಾಸ್ತವವೃತ್ತಾಂತವನ್ನೊಳಗೊಂಡ ಓಲೆಗಳು ಹೋಗಬೇಕು! ಅದರಲ್ಲಿಯೆ ಪೆದ್ದರಾಯರು ಬರೆದಿದ್ದ ಈ ಪತ್ರದಲ್ಲಿಯ ಸಂಗತಿಯನ್ನೂ ಬರೆದು ತಿಳುಹಿಸಬೇಕು!”

ಕುಮಾರನಾಯಕನು ಸಮಾಧಾನದ ಸ್ವರದಲ್ಲಿ ಹೇಳಿದನು.

“ಅದೇನು ದೊಡ್ಡ ವಿಷಯ! ಬೇಕಾಗಿದ್ದರೆ ನಾವೇ ಕೆಲವು ಜನರು ಹೊರಟು, ಎಲ್ಲ ಕಡೆಗೆ ತಿರುಗಾಡಿ, ಬೇರೆ ಬೇರೆ ಮಾಂಡಲಿಕ–ಮನ್ನೆಯರನ್ನು ಕಂಡು, ಎಲ್ಲವನ್ನೂ ಪ್ರತ್ಯಕ್ಷವಾಗಿ ಮಾತನಾಡಿ ಬರಬಹುದಲ್ಲವೇ?”

ಕುಳಿತಿದ್ದವರಲ್ಲಿ ಐದಾರು ಜನರು ಒಮ್ಮೆಲೆ ಹೇಳಿದರು.

“ಕುಮಾರನಾಯಕರ ಮಾತು ತೀರ ಸಮಂಜಸವಾದುದು! ಹೀಗೆಯೆ ಮಾಡಬೇಕು! ನಾವೆಲ್ಲರೂ ನಾಳೆಯಿಂದಲೆ ಹೊರಡುವ ಉದ್ಯೋಗಕ್ಕೆ ತೊಡಗುತ್ತೇವೆ ಬೇಕಾಗಿದ್ದರೆ!”

ನಾರಾಯಣಪಂಡಿತರಿಗೆ ಇದ್ದುದರಲ್ಲಿಯೆ ಸ್ವಲ್ಪ ಸಮಾಧಾನವೆನಿಸಿತು. ಅವರು ಆಗ ಹೇಳಲು ತೊಡಗಿದರು.

“ನನ್ನ ಮಾತೊಂದನ್ನು ಕೇಳಿ! ಅಪ್ಪಾಜಿಯವರ ಉತ್ತರಕ್ರಿಯೆಗಳಷ್ಟು ಮುಗಿದುಬಿಡಲಿ! ಆ ಮೇಲೆ ಒಂದು ಒಳ್ಳೆಯ ದಿನವನ್ನು ನೋಡಿ, ಸಾಮ್ರಾಜ್ಯಸಮಾರಂಭವೊಂದನ್ನು ಜರುಗಿಸಬೇಕು. ಅದಕ್ಕಾಗಿ ನಮ್ಮ ಸಾಮ್ರಾಜ್ಯದ ಎಲ್ಲ ಭಾಗಗಳ ಪ್ರಮುಖರನ್ನೂ ಕರೆಯಿಸಿಕೊಳ್ಳಬೇಕು!”

ಕುಮಾರನಾಯಕನು ತಲೆದೂಗಿ ಹೇಳಿದ.

“ಒಳ್ಳೆಯ ವಿಚಾರವಿದು! ಇದರಿಂದ ಎಲ್ಲ ಜನರ ಮುಖಗಳೂ ಒಂದೆ ಕಡೆಯಲ್ಲಿ, ಒಂದೆ ಕಾಲದಲ್ಲಿ, ಒಟ್ಟುಗೂಡುವುದಕ್ಕೆ ಅವಕಾಶವೊಂದು ದೊರೆತಂತಾಗುವುದು! ಸಾಮ್ರಾಜ್ಯದ ಮುಂದಿನ ವ್ಯವಸ್ಥೆಯನ್ನು ಸರಿ-

ಗೊಳಿಸಲಿಕ್ಕೂ ಒಂದುಬಗೆಯ ಅನುಕೂಲವನ್ನು ಮಾಡಿಕೊಂಡಂತಾಗುವುದು!"

ಕುಮಾರನಾಯಕನ ಮಾತು ಮುಗಿಯುತ್ತಿರುವಾಗಲೆ ರತ್ನಾಂಬಿಕೆಯು ಥಟ್ಟನೆ ಓಲಗಸಾಲೆಯೊಳಕ್ಕೆ ಬಂದಳು. ಮಾಸಿ ಮುದುಡಿಹೋಗಿದ್ದ ಉಡುಗೆ ತೊಡಿಗೆ; ಚೆದರಿ ಚೆಲ್ಲಾಪಿಲ್ಲಿಯಾಗಿದ್ದ ತಲೆಗೂದಲು; ಕಂದಿಕುಂದಿದ ಮೈಯ ಬಣ್ಣ..ಇವೆಲ್ಲವೂ ಆಕೆಯ ಗುರುತನ್ನು ಮರೆಯಿಸಿ ಬಿಟ್ಟಿದ್ದುವು. ಮುಖದಮೇಲೆಲ್ಲ ಉನ್ಮಾದದ ಆವೇಶವು ಆಟವಾಡುತ್ತಲಿದ್ದಿತು. ಬಂದವಳೇ..ಕುಳಿತಿದ್ದವರೆಲ್ಲರನ್ನೂ ಕುರಿತು, ಆಕೆ ಕೂಗಿ ಕೂಗಿ ಹೇಳಿದಳು.

"ಏತಕ್ಕಾಗಿ ಕುಳಿತಿದ್ದೀರಿ ನೀವೆಲ್ಲರೂ ಇಲ್ಲಿ?.. ನಡೆಯಿರಿ ಶಾಂತಿಕುಟೀರಕ್ಕೆ! ..ಅಲ್ಲಿ ರಾಜಶೇಖರನು ಎಲ್ಲರನ್ನೂ ಕರೆಯುತ್ತಿದ್ದಾನೆ..!"

ದೇವಣ್ಣನಾಯಕರು ಉಸಿರೊಂದನ್ನು ಚೆಲ್ಲಿ, ತಗ್ಗಿದ ಸ್ವರದಲ್ಲಿ ಹೇಳಿದರು.

"ನರಸಿಂಹನಾಯಕರೇ! ನೋಡಿ! ನನ್ನ ರತ್ನಾಂಬಿಕೆಯ ಅವಸ್ಥೆಯನ್ನು ನೋಡಿ! ರಾಜಶೇಖರನ ಕೊಲೆಯಾದ ದಿನದಿಂದಲೂ ಹೀಗೆ ಆಗಿಬಿಟ್ಟಿದೆ ಇವಳಿಗೆ!"

ಕಳವಳದ ಮೊಗದಿಂದ ಎಲ್ಲರೂ ರತ್ನಾಂಬಿಕೆಯನ್ನು ನಿಟ್ಟಿಸುತ್ತಿದ್ದರು. ರತ್ನಾಂಬಿಕೆಯು ಒಮ್ಮೆಲೆ ದೇವಣ್ಣನಾಯಕರ ಕಡೆಗೆ ತಿರುಗಿ ಹೇಳಿದಳು.

"ಅಪ್ಪಾಜೀ! ಪಂಪಾಪತಿಯ ದೇವಾಲಯದಲ್ಲಿ ರಾಜಶೇಖರನು ಕುಳಿತಿದ್ದಾನೆ; ನನ್ನನ್ನು ಅಲ್ಲಿಗೆ ಕರೆದುಕೊಂಡು ನಡೆಯಿರಿ! ರಾಜಶೇಖರನು ಪಂಪಾಪತಿಯ ದೇವಾಲಯದ ಶಿಖರದ ಮೇಲೆ ಇರಲಿ! ತುಂಗಭದ್ರೆಯ ಚಕ್ರತೀರ್ಥದ ತಳದಲ್ಲಿ ಇರಲಿ! ಅಲ್ಲಿಗೆ ನನ್ನನ್ನು ಕಳುಹಿಸಿ ಕೊಡಲೇ ಬೇಕು! ರಾಜಶೇಖರನು ನನ್ನವನು ....! ಅಯ್ಯೋ!.... ಈಶ್ವರನಾಯಕನನ್ನು..ರಾಜಶೇಖರನು.. ಕೊಂದುಬಿಟ್ಟ..! ಹೋ!.. ಕೊಂದುಬಿಟ್ಟ..!" ಎಂದವಳು ಒಮ್ಮೆಲೆ ನಗುವುದಕ್ಕೆ ತೊಡಗಿದಳು. ಕುಳಿತಿದ್ದವರ ಕಣ್ಣುಗಳಲ್ಲೆಲ್ಲ ಕಂಬನಿ ಮೊಗದೋರಿದುವು.

ಇದ್ದುದಿದ್ದ ಹಾಗೆಯೆ ಹೊನ್ನಮ್ಮ–ಇನ್ನೊಬ್ಬ ಆಳಿ–ಕೂಡಿ ಬಂದು, ರತ್ನಾಂಬಿಕೆಯನ್ನು ಒತ್ತಾಯದಿಂದ ಸೆಳೆದುಕೊಂಡು ಒಯ್ದರು. ಓಲಗ-

ಸಾಲೆಯಲ್ಲಿದ್ದ ಜನರೆಲ್ಲರ ಹೃದಯವು, ಒಂದೊಂದುಬಗೆಯ ಸುಮ್ಮಾನ-ದುಮ್ಮಾನಗಳಿಂದ ತೂಗಾಡುವುದರಲ್ಲಿ ಇದ್ದಿತು. ಆಗ ಯಾರಲ್ಲಿಯೂ ಮಾತನಾಡಬೇಕೆಂಬ ಆತುರ–ಕುತೂಹಲಗಳು ಇದ್ದಂತೆ ಕಾಣುತ್ತಿರಲಿಲ್ಲ! ಒಳಕ್ಕೆ ಸೆಳೆದುಕೊಂಡು ಹೋಗಿದ್ದ ರತ್ನಾಂಬಿಕೆಯು ಮತ್ತೆ ಮತ್ತೆ ಕೂಗುತ್ತಿದ್ದ ಈ ಕೂಗು, ದೂರದಿಂದ ಬಂದು, ಅವರೆಲ್ಲರ ಕಿವಿಗಳಲ್ಲಿ ಮೊರೆಯುತ್ತಿದ್ದಿತು:—

**"ಜಯ ಭುವನೇಶ್ವರೀ! ಜಯ ಪಂಪಾಪತೇ!! ಜಯ ರಾಜಶೇಖರ!!"**

**"ಜಯ ರಾಜಶೇಖರ! ಜಯ ಕರ್ಣಾಟಲಕ್ಷ್ಮೀ!! ಜಯ ರಾಜಶೇಖರ!!!"**

---

## ಕೊನೆಗೆ ಮೊದಲು

ಮುಂದೆ ಇತಿಹಾಸವು ಹೇಳುವುದು ಹೀಗೆ:— ಹೊರಟುಹೋಗಿದ್ದ ಪೆದ್ದರಾಯ ಮರಳಿ ಬರಲೇ ಇಲ್ಲ! ಸಾಳುವ ನರಸಿಂಹನಾಯಕನು ಕೆಲವು ವರ್ಷಗಳ ವರೆಗೆ ಸಮ್ರಾಟನ ಪ್ರತಿನಿಧಿಯಾಗಿದ್ದು, ಬಳಿಕ ಸಮ್ರಾಟನೇ ಆದನು; ಶಾಲಿವಾಹನ ಶಕದ ೧೪೧೫ನೆಯ ವರ್ಷದ ವರೆಗೆ ವೈಭವದಿಂದ ರಾಜ್ಯವಾಳಿದನು. ಈತನ ಆಧಿಪತ್ಯದಲ್ಲಿ, ತುಳುವ ನರಸಿಂಹನು ದಂಡ-ನಾಯಕನಾಗಿದ್ದನು. ಪ್ರಜೆಗಳೆಲ್ಲ ಸಾಳುವ ನರಸಿಂಹನ ಆಡಳಿತವನ್ನು ಹೊಗಳಿ ಹಾಡುತ್ತ, ಸುಖಸಂಕಥಾವಿನೋದದಲ್ಲಿ ಬದುಕನ್ನು ಕಳೆಯುತ್ತಲಿದ್ದರು.

**ಓಂ ಶಾಂತಿಃ ಶಾಂತಿಃ ಶಾಂತಿಃ**

**ಜಯ ಕರ್ಣಾಟಕ ರಾಜ್ಯಲಕ್ಷ್ಮೀ!**